# ಹೊಸ ಬಾಳು



★ ಕಾದಂಬರಿ ★



ಶ್ರೀ ಕೃಷ್ಣಮೂರ್ತಿ ಪುರಾಣಿಕ



ಶಾಂತಿ
ಸಾಹಿತ್ಯಮಾಲೆ
ಬಾದಾಮಿ

# ಮಾತು-ಕ:

ನಂಬಿಕೆಗೆ-ಮೋಸ, ವಿಶ್ವಾಸಕ್ಕೆ ಪ್ರತಿಯಾಗಿ ಅವಿಶ್ವಾಸ, ದ್ರೋಹ ಗಳು ನಡೆದು ಈ ಕಾದಂಬರಿ ಹೊರಬರಲು ತಡವಾದುದಕ್ಕೆ ನಮ್ಮ ಓದುಗರ ಕ್ಷಮೆ ಕೇಳುತ್ತೇವೆ. ಹಾಗು ನಮ್ಮ ನಿಯಮಿತತನವನ್ನು ಹಿಂದಿನಂತೆಯೇ ಮತ್ತೆ ಕಾಯ್ದುಕೊಂಡು ಬರುತ್ತೇವೆಂಬ ಆಶ್ವಾಸನೆ ಯನ್ನೀಯುತ್ತೇವೆ.

ಈಚೆಗೆ ಹಲವು ಕಾಲದಿಂದ ಹಿರಿಯರಾದ ಶ್ರೀ ಕೃಷ್ಣಮೂರ್ತಿ ಪುರಾಣಿಕರು ನನ್ನ ಮೇಲೆ, ಮಾಲೆಯ ಮೇಲೆ ತುಂಬಿದ ಆದರ, ವಿಶ್ವಾ ಸಗಳನ್ನು ತೋರುತ್ತ ಬಂದಿದ್ದಾರೆ. ಕಾಲ, ಕಾಲಕ್ಕೆ ಮಾರ್ಗದರ್ಶನ ಮಾಡುತ್ತ ಮುನ್ನಡೆಯಿಸುತ್ತಿದ್ದಾರೆ. ಅವರಿಗೆ ನಾನು ಎಂದೆಂದಿಗೂ ಕೃತಜ್ಞನಾಗಿದ್ದೇನೆ.

ಹಾಗೆಯೇ 'ಕಲ್ಯಾಣಿ ಪ್ರೆಸ್ಸಿ'ನ ಒಡೆಯರಾದ ಗೆಳೆಯ ಜಿ. ಜಿ. ಕಲ್ಯಾಣಿಯವರಿಗೂ, ಮುಖಪುಟಕ್ಕೆ ಪಡಿಯಚ್ಚುಗಳನ್ನೊದಗಿಸಿದ ಆತ್ಮೀಯ ಸ್ನೇಹಿತರಾದ ಗೆ. ರಾಮಚಂದ್ರ ಕಲಬುರ್ಗಿ ಸಂಪಾದಕರು 'ಕಲ್ಪನಾ' ಅವರಿಗೂ, ಮುಖ ಪುಟವನ್ನು, ಅಂದವಾಗಿ ಮುದ್ರಿಸಿದ 'ಹುಬ್ಬಳ್ಳಿಯ' 'ಸುಧಾ ಪ್ರೆಸ್ಸಿನ' ಒಡೆಯರಾದ ಶ್ರೀ ತಾಪಸರಿಗೂ ನಾನು ಕೃತಜ್ಞ.

ನಮ್ಮ ಮುಂದಿನ ಕುಸುಮ ಕೀರ್ತಿವೆತ್ತ ಕತೆಗಾರರು, ವಿಮರ್ಶಕ ರಾದ ಪ್ರೊ. ಎಲ್. ಎಸ್. ಶೇಷಗಿರಿರಾವ್ ಎಮ್. ಎ. ಅವರ ಕಥಾ ಸಂಗ್ರಹ '**ಜಗದ ಜಾತ್ರೆಯಲ್ಲಿ**' ಎಂದು ತಿಳಿಸಲು ತುಂಬ ಸಂತೋಷ ವೆನ್ನಿಸುತ್ತದೆ.

—ಸಂಪಾದಕ

ಶಾಂತಿ ಸಾಹಿತ್ಯ ಮಾ

# ಹೊಸ ಬಾಳು

( ಸಾಮಾಜಿಕ ಸರಸ ಕಾದಂಬರಿ )



ಶ್ರೀ ಕೃಷ್ಣಮೂರ್ತಿ ಪುರಾಣಿಕ

ಪ್ರಕಾಶಕರು:--

ಶಾಂತಿ ಸಾಹಿತ್ಯ ಮಾಲೆ

ಬಾದಾಮಿ

ಅಕ್ಟೋಬರ

೧೯೫೨

ಬೆಲೆ

# ಮಾರ್ಗದರ್ಶಕರು

ಶ್ರೀ 'ಮಧುರ ಚನ್ನರು' ಹಲಸಂಗಿ
ಡಾ. ಡಿ. ಎಸ್. ಕರ್ಕಿ ಎಮ್. ಎ. ಪಿ. ಎಚ್. ಡಿ. ಬೆಳಗಾಂವ
ಶ್ರೀ ಸಿಂಪಿ ಲಿಂಗಣ್ಣ ಚಡಚಣ
ಶ್ರೀ ಕೃಷ್ಣಮೂರ್ತಿ ಪುರಾಣಿಕ ಬಿ. ಎ. ಬಿ. ಟಿ. ಗೋಕಾಕ
ಶ್ರೀ ಎಸ್. ಡಿ. ಇಂಚಲ ಬಿ. ಎ. ಬಿ. ಟಿ. ಹುಬ್ಬಳ್ಳಿ
ಶ್ರೀ ಎಲ್. ಎಸ್. ಶೇಷಗಿರಿರಾವ್ ಎಮ್. ಎ. ದಾವಣಗೆರೆ
ಶ್ರೀ ಬ. ಗಂ. ತೂರಮರಿ ಬಿ. ಎ. ಬಿ. ಟಿ. ಬೆಳಗಾಂವ

ಸಂಪಾದಕರು
**ಕುಲಕರ್ಣಿ ಬಿಂದುಮಾಧವ**

ಪ್ರಕಾಶಕರು
**ಮಧುಗಿರಿ ಶಂಕರನಾರಾಯಣರಾವ್**
ಬಿ. ಎಸ್. ಸಿ.





ಮುದ್ರಕರು
**ಜಿ. ಜಿ. ಕಲ್ಯಾಣಿ**
ಕಲ್ಯಾಣಿ ಮುದ್ರಣ, ಹೊಳೆ-ಆಲೂರ

# ಅರಿಕೆ

'ಶಾಂತಿ ಸಾಹಿತ್ಯ ಮಾಲೆ'ಯ ಸಂಪಾದಕರಾದ ಶ್ರೀ ಕುಲಕರ್ಣಿ ಬಿಂದುಮಾಧವರು ಕನ್ನಡದ ಉದಯೋನ್ಮುಖ ಸಾಹಿತಿಗಳು. ಪ್ರತಿಭಾವಂತರಾದ ಕತೆಗಾರರು. ಅವರು ಕನ್ನಡದ ಕಥಾ ಸಾಹಿತ್ಯಕ್ಕೆ ನೀಡುತ್ತಿರುವ ಸೇವೆ ಅದೆಷ್ಟು ವಿಪುಲವಾಗಿದೆಯೆಂಬುದನ್ನು ಕನ್ನಡದ ಕಥಾ ಪ್ರೇಮಿಗಳೆಲ್ಲರೂ ಬಲ್ಲರು.

ಈ ಸಾಹಿತ್ಯ ಸೇವೆ ಇನ್ನೂ ವಿವಿಧ ರೀತಿಯಲ್ಲಿ ಹರಿಯಬೇಕೆಂಬ ಉದ್ದೇಶದಿಂದ ಶ್ರೀಯುತರು ಈ ಗ್ರಂಥಮಾಲೆಯನ್ನು ನಡೆಯಿಸುತ್ತಿದ್ದಾರೆ. ಇಂದಿನ ದಿನಮಾನದಲ್ಲಿ ಒಂದು ಗ್ರಂಥಮಾಲೆಯನ್ನು ಸುವ್ಯವಸ್ಥಿತವಾಗಿ ನಡೆಯಿಸಿಕೊಂಡು ಹೋಗುವದು ತುಂಬಾ ಕಷ್ಟದ ಕೆಲಸ. ಈ ಹೊಣೆಯನ್ನು ಶ್ರೀ ಬಿಂದು ಮಾಧವರು ಬಹಳ ಉತ್ಸಾಹದಿಂದ ಹೊತ್ತಿದ್ದಾರೆ. ಸಾಹಸವನ್ನು ತೋರುತ್ತಿದ್ದಾರೆ. ಕನ್ನಡ ಜನತೆ ಇವರಿಗೆ ಬೆಂಬಲವಾಗಿ ನಿಲ್ಲಬೇಕು. ಸಾಹಿತಿಗಳು ಯೋಗ್ಯವಾದ ನೆರವನ್ನು ನೀಡಬೇಕು.

ನನ್ನ 'ಈ ಕಾದಂಬರಿ' ಈ ಗ್ರಂಥಮಾಲೆಯಲ್ಲಿ ಪ್ರಕಟವಾಗುತ್ತಿರುವದು ಸಂತೋಷದ ವಿಷಯ.

ಜೀವನವು ವಿಸ್ತಾರವಾಗಿರುವಂತೆ ವೈವಿಧ್ಯ ಪೂರ್ಣವೂ ಆಗಿದೆ. ಈ ವಿವಿಧತೆ ಅನಂತ ಮುಖದಲ್ಲಿ ಹರಿಯುತ್ತಿರುತ್ತದೆ. ಬಾಳಿಗೊಂದು ಆದರ್ಶ ವಿರುತ್ತದೆ. ಅದಕ್ಕೊಂದು ಗುರಿಯಿರುತ್ತದೆ. ಈ ಗುರಿಯನ್ನು ಸಾಧಿಸಲು ನಿರ್ದಿಷ್ಟವಾದ ಮಾರ್ಗವೂ ಇರುತ್ತದೆ. ಈ ಮಾರ್ಗವು ಸರಳವಾಗಿರುವಂತೆ ಅಂಕು ಡೊಂಕಾಗಿಯೂ ಇರುತ್ತದೆ. ಮಾರ್ಗಕ್ರಮಣ ಮಾಡುವವರು ಸಂಸ್ಕಾರ ಬಲದಿಂದ ಈ ಮಾರ್ಗಗಳನ್ನು ಗುರುತಿಸಬೇಕಾಗುತ್ತದೆ. ಗುರುತು ಸಿಕ್ಕದಿದ್ದುದು ದಾರಿಯ ತಪ್ಪಲ್ಲ. ಹೆಜ್ಜೆಯ ತಪ್ಪು.

ಬಾಳಿನಲ್ಲಿ ಆದರ್ಶವನ್ನು ಕಂಡುಕೊಂಡು ಜೀವನದಲ್ಲಿ ಸಫಲತೆಯನ್ನು ಪಡೆದುಕೊಂಡವರೂ ಇದ್ದಾರೆ. ಅದು ವಿಫಲವಾಗಲು ಸೋತು ಕಂಗೆಟ್ಟವರೂ ಇದ್ದಾರೆ. ಮತ್ತೆ ಹೋರಾಡಿ ಚೇತರಿಸಿಕೊಳ್ಳುವವರೂ ಇದ್ದಾರೆ. ವಿಷಮ ಜೀವನದಲ್ಲಿ ಬಾಳನ್ನು ಕಹಿ ಮಾಡಿಕೊಳ್ಳುವವರನ್ನೂ ನಾವು ಕಾಣಬಹುದಾಗಿದೆ. ಜೀವನವನ್ನೇ ಮೋಸ ಗೊಳಿಸಿ ಆತ್ಮವಂಚನೆಯಲ್ಲಿ ಬಾಳನ್ನು ಸಾಗಿಸುವವರನ್ನು ಜೀವನವೆಂದಿಗೂ ಕ್ಷಮಿಸಲಾರದು. ನಿತ್ಯ ನೂತನವಾದ ಬಾಳನ್ನು ಸಾಗಿಸಲು ಜೀವನದ ಅರ್ಥ ಮಾಡಿಕೊಳ್ಳಬೇಕು. ಸರಸ–ವಿರಸಗಳನ್ನು ತೂಗಿ ನೋಡುವ ಶಕ್ತಿಯನ್ನು ಸಂಪಾದಿಸಿಕೊಳ್ಳಬೇಕು. ಬಾಳಿನ ಸಂಸಾರದಲ್ಲಿ 'ಹೊಸ ಬಾಳು' ಮೂಡಿ ನಿಲ್ಲಬೇಕು. ಜೀವನದ ವಿಷಮತೆಯಲ್ಲಿ ಸುಭಗತೆಯನ್ನು ಕಂಡುಕೊಳ್ಳುವ ದಾರಢ್ಯವನ್ನು ಪಡೆದುಕೊಳ್ಳಬೇಕು. ಜೀವನವು ಅನಂತವಾಗಿದೆ; ಅಂತೆಯೇ ನಿತ್ಯ ನೂತನವಾಗಿದೆ.

ಶ್ರೀ ಕುಲಕರ್ಣಿ ಬಿಂದುಮಾಧವರು 'ಹೊಸ ಬಾಳು' ಕಾದಂಬರಿಯನ್ನು ತಮ್ಮ ಮಾಲೆಯಲ್ಲಿ ಪೋಣಿಸಿಕೊಂಡದ್ದಕ್ಕಾಗಿ ಅವರಿಗೆ ಕೃತಜ್ಞನಾಗಿದ್ದೇನೆ. ಅವರ "ಶಾಂತಿ ಸಾಹಿತ್ಯ ಮಾಲೆ" ಅನೇಕ ಹೂಗಳನ್ನು ಅರಳಿಸಲೆಂದು ಹಾರೈಸುತ್ತೇನೆ.

ಸಾಹಿತ್ಯ ಸೇವಾ ಮಂದಿರ
ಗೋಕಾಕ
೧೨ ಅಕ್ಟೋಬರ ೧೯೫೨

ಕೃಷ್ಣಮೂರ್ತಿ ಪುರಾಣಿಕ

# ಹೊಸ ಬಾಳು

೧

ಆ ಕೋಣೆಯಲ್ಲಿ ಕಂದೀಲು ತೀರ ಮಂದವಾಗಿ ಉರಿಯುತ್ತಿತ್ತು ನಿಲುಕದ ಎಣ್ಣೆಯನ್ನು ಜಗ್ಗಿ ಜಗ್ಗಿ ಆಯಾಸಗೊಂಡ ಅದರ ಬತ್ತಿ ತನ್ನ ಒಣಗಿದ ಕೆನ್ನಾಲಿಗೆಯನ್ನು ತೆರೆದು ತೋರಿಸುವಂತೆ ಕುಡಿಯೇರಿ ನಿಂತಿತ್ತು. ಕಾಡಿಗೆ ಬಳಿದು ಕಪ್ಪಾದ ಅದರ ಕನ್ನಡಿ ಕೋಣೆಯ ಕತ್ತಲೆಯೊಡನೆ ಸ್ಪರ್ಧಿಸತೊಡಗಿತ್ತು. ಜೀವನ ಮರಣಗಳ ಹೋರಾಟದ ಮಧ್ಯದಲ್ಲಿ ಸಿಕ್ಕು ನಿತ್ರಾಣವಾದ ದರಿದ್ರ ವ್ಯಕ್ತಿಯಂತಾಗಿತ್ತು ಅದರ ಪರಿಸ್ಥಿತಿ. ಪೂರ್ಣ ಬೆಳಕೂ ಅಲ್ಲ; ಸಂಪೂರ್ಣ ಕತ್ತಲೆಯೂ ಅಲ್ಲ. ಒಮ್ಮೊಮ್ಮೆ ಕಿಟಕಿಯ ಮಾರ್ಗವಾಗಿ ತೂರಿ ಬರುವ ಗಾಳಿಗೆ ಬೆದರಿದ ಬೆಳಕು ತತ್ತರಿಸಿ ಆಗಲೆ ನಂದಿ ಹೋಗುವಂತೆ ಕಂಡರೂ ಬದುಕಿನಾಸೆಯಲ್ಲಿ ಜೀವವನ್ನು ಗಟ್ಟಿಮುಟ್ಟಾಗಿ ಹಿಡಿದುಕೊಂಡಿರುವ ಜಿಪುಣನಂತೆ ಮತ್ತೆ ಸ್ಥಿರವಾಗಿ ನಿಲ್ಲುತ್ತಿತ್ತು. ಬಾಳಿ ಬದುಕುವ ಆಶೆಯಾಗಲಿ, ಬಾಳಿನಲ್ಲಿ ಸ್ಥಿರತೆಯಾಗಿ ಹಂಬಲಿಸುವದಾಗಲಿ ಕೇವಲ ಮಾನವನಿಗೆ ಮಾತ್ರ ಮೀಸಲಾಗಿಲ್ಲವೆಂದು ಸಾರಿ ಹೇಳುತ್ತಿತ್ತು. ಮೋಡದ ಮಧ್ಯದಲ್ಲಿ ಗ್ರಹಣ ಹಿಡಿದ ಚಂದಿರನು ನಿಸ್ತೇಜನಾಗಿ ಕಾಣುವಂತೆ ಆ ಕೋಣೆಯ ಮಧ್ಯದಲ್ಲಿ ಅದು ನಿರಾಸೆಯ ವ್ಯಕ್ತ ಸ್ವರೂಪದಂತೆ ಕಂಗೆಟ್ಟು ನಿಂತಿತ್ತು. ಈಗಲೊ ಆಗಲೊ ಆರಿ ಹೋಗುವದು ಸ್ಪಷ್ಟವಾಗಿತ್ತು.

ಊಟಮಾಡಿ ತನ್ನ ಕೋಣೆಗೆ ನೇರವಾಗಿ ನಡೆದ ವಿಶ್ವಾಸನಿಗೆ ಕೋಣೆಯ ಈ ವಾತಾವರಣ ಅಸಹನೀಯವಾಗಿ ತೋರಿತು. ಅದನ್ನೊಮ್ಮೆ ಅವನು ದುರುಗುಟ್ಟಿಕೊಂಡು ನೋಡಿದ. ಆ ಕ್ಷಣ ಅವನಿಗೆ ಮನೆಯಲ್ಲಿ ಇತ್ತೀಚೆಗೆ ನಡೆದ ರದ್ಧಾಂತಗಳ ಹದಗೆಟ್ಟ ವಾತಾವರಣವೆಲ್ಲ ಕಣ್ಮುಂದೆ ಕುಣಿಯತೊಡಗಿತು. ಅವನು ಗಡಗಡ ನಡುಗಿದ. ಅವನ ಈ ಭೀತಿಗೆ

ಕಾರಣವೂ ಇತ್ತು. ಮನೆಯ ವಾತಾವರಣ ಹೀಗೆ ಹಸಗೆಟ್ಟಿದ್ದು ತೀರ ಇತ್ತೀಚೆಗಿನ ಮಾತಾಗಿರಲಿಲ್ಲ. ಕಳೆದೆರಡು ವರುಷಗಳಿಂದಲೂ ಮನೆಯಲ್ಲಿ ವಿರಸತೆ ಹೊಗೆಯಾಡತೊಡಗಿತ್ತು. ಆದರೆ ಎಂತಹ ಪ್ರಸಂಗದಲ್ಲೂ ತಾರಾ ಅವನಿಗೆ ಅಸಾನುಕೂಲತೆಯನ್ನುಂಟು ಮಾಡಿರಲಿಲ್ಲ. ಅಂತೆಯೆ ಅವನ ಕಾವ್ಯಯೋಗ ಅಡೆ-ತಡೆಯಿಲ್ಲದೆ ಸುಸೂತ್ರವಾಗಿ ಸಾಗಿತ್ತು. ಕನ್ನಡ ನಾಡಿನಲ್ಲೆಲ್ಲ ಅವನು ಪ್ರಖ್ಯಾತ ಕವಿಯೆಂದು ಹೆಸರು ಗಳಿಸಿದ್ದ. ಇದಕೆ ತಾರಾ ಬಹುಮಟ್ಟಿಗೆ ಕಾರಣಳೆಂದು ಅವನಿಗೆ ಗೊತ್ತಿತ್ತು. ದೈನಂದಿನ ಜೀವನದಲ್ಲಿ ಬರುವ ಕಹಿಯನ್ನೆಲ್ಲ ನುಂಗಿ ಯಾವಾಗಲೂ ಹಸನ್ಮುಖಿ ಯಾಗಿ ತನ್ನೆದುರು ಸುಳಿಯುತ್ತಿರುವ ತಾರಾ ತನ್ನ ಸ್ಫೂರ್ತಿದೇವತೆ ಎಂಬುದನ್ನು ಅವನು ಮರೆಯಲಾರ. 'ಆದರೆ..ಆದರೆ.. ಅವಳೂ ಮನುಷ್ಯಳು. ಆವಳ ಸಹನಶೀಲತೆಗೂ ಒಂದು ಮಿತಿಯಿದೆ. ಇಂದು ತೋರಿದ ಅವಳ ಅಲಕ್ಷಕ್ಕೆ ಪ್ರಬಲ ಕಾರಣಗಳಿರಲೇಬೇಕು. ಇದು ಹೀಗೆಯೆ ಇನ್ನೆಷ್ಟು ದಿನ ನಡೆಯಬೇಕು? ..ನಡೆಯಲಾರದು'– ಎಂದು ವಿಚಾರಿಸಿದ ಅವನು ತುಟಿ ಕಚ್ಚಿಕೊಂಡು ಮೆಲ್ಲನೇ ಕಂದೀಲನ್ನು ಕೈ ಗೆತ್ತಿಕೊಂಡ. ಆ ವೇಳೆಗೆ ಅದು ಶಾಂತವಾಗಿ ಹೊಗೆ ಕಾರತೊಡಗಿತ್ತು. ಕತ್ತಲಲ್ಲಿಯೇ ಕೈಯಾಡಿಸುತ್ತ ಅವನು ಒಂದು ವೃತ್ತಪತ್ರದ ಹಾಳೆಯಿಂದ ಕನ್ನಡಿಯನ್ನು ಸ್ವಚ್ಛಮಾಡಿದ. ಮಾಡದಲ್ಲಿದ್ದ ಚಿಮಣೀ ಎಣ್ಣೆಯ ಬುಡ್ಡೆಯಿಂದ ಎಣ್ಣೆಹಾಕಿದ. ಕೈಯಿಂದಲೇ ಕುಡಿಯನ್ನು ತಿದ್ದಿದ. ಹಾಸಿಗೆಯ ಬುಡದಲ್ಲಿದ್ದ ಕಡ್ಡಿಪೆಟ್ಟಿಗೆ ತೆಗೆದುಕೊಂಡು ಕಡ್ಡಿ ಗೀರಿ ದೀಪ ಹೊತ್ತಿಸಿದ. ಕೋಣೆ ಜಗ್ಗನೇ ಬೆಳಗಿತು.

ಆ ಬೆಳಕು ವಿಶ್ವಾಸನಲ್ಲಿ ಹೆಚ್ಚಿನ ಉತ್ಸಾಹವನ್ನೇನೂ ತರಲಿಲ್ಲ. ಅವನು ಕಂದೀಲನ್ನು ಹತ್ತಿರದ ಟ್ರಂಕಿನಮೇಲಿರಿಸಿ ನಿರುತ್ಸಾಹದಿಂದ ಕೋಣೆ ಯನ್ನೊಮ್ಮೆ ನೋಡಿದ. ಒಂದೇ ಹಾಸಿಗೆಯ ಮೇಲೆ ಬೆತ್ತಲೆಯಾಗಿ ನಾಲ್ಕು ವರುಷದ ಕಿರಣ ಮುದುಡೆಯಾಗಿ ಮಲಗಿದ್ದ. ಎರಡು ವರುಷದ ಉಷಾ ಅಸ್ತವ್ಯಸ್ತವಾಗಿ ನೆಲದ ಮೇಲೆ ಉರುಳಿ ಹೋಗಿದ್ದಳು. ಅವ ನೊಮ್ಮೆ ಆ ಮಕ್ಕಳನ್ನು ಕಣ್ತುಂಬ ನೋಡಿದ. ಕರುಳು ಕಿವುಚ

ತೊಡಗಿದವು. ಕಿರಣನಿಗೆ ಚಾದರ ಹೊದ್ದಿಸಿ ನೈತಟ್ಟಿದ. ಉರುಳಿ ಹೋದ ಕೂಸನ್ನು ಮೇಲೆ ಮಲಗಿಸಿದಾಗ ಅದು ಅಳತೊಡಗಿತು. ಅದಕ್ಕೆ 'ಚುಕ್ಕು' ತಟ್ಟತೊಡಗಿದ. ತುಸು ಹೊತ್ತಿನಲ್ಲೇ ಅದು ಹಾಯಾಗಿ ನಿದ್ರೆಯಾರಂಭಿಸಲು ಅಲ್ಲಿಯೇ ಮಲಗಿಸಿ ಒಂದು ದುಪ್ಪಟಿಯನ್ನು ಹೊಚ್ಚಿದ. ಅಷ್ಟುಮಟ್ಟಿಗೆ ಅವನ ಮನಸ್ಸಿಗೆ ನೆಮ್ಮದಿಯಾಯಿತು. ಆದರೆ ಕೂಡಲೆ ಅಂದಿನ ಪರಿಸ್ಥಿತಿಯ ಅರಿವಾಗಿ ಅವನ ಹೃದಯ ಕಲಕತೊಡಗಿತು. ಅವನು ಚಟ್ಟನೆ ಎದ್ದು ತನ್ನ ಮುರುಕು ಪೆಟ್ಟಿಗೆ ಯೊಳಗಿನ ಕಾಗದಗಳ ಕಟ್ಟನ್ನು ತೆಗೆದುಕೊಂಡು ಏನೇನೊ ಗೀಚಲು ತೊಡಗಿದ. ಸೀಸು ಮುಂದೆ ಸಾಗದಾಯಿತು. ದಿಗ್ಗನೆ ಎದ್ದು ಕೋಣೆ ಯಲ್ಲಿ ಎಡೆಯಾಡತೊಡಗಿದ.

ಎಂಟು ವರುಷಗಳ ಹಿಂದೆ ತಾಯಿ ಅಸ್ವಸ್ಥಳಾಗಿ ಹಾಸಿಗೆ ಹಿಡಿದು ಮಲಗಿದಾಗ ತಾನು ಅಣ್ಣನೊಡನೆ ಅವಳ ಶುಶ್ರೂಷಣೆ ಮಾಡುತ್ತಿರುವಾಗ ತಾವಿಬ್ಬರೂ ಅಗಲದೆ ಇರುತ್ತಿದ್ದುದು-ತನಗಾಗಿ ಅಣ್ಣನ ಹೆಂಡತಿ ಬಿಸಿ ಬಿಸಿಯಾದ ತಿನಿಸುಗಳನ್ನು ಮಾಡಿಟ್ಟು ಕರೆಯ ಕಳಿಸುವದು-ತಾಯಿಯ ಕೊನೆಗಾಲ ಸನ್ನಿಹಿತವಾದಾಗ ಅಣ್ಣ ತನ್ನನ್ನು ತಬ್ಬಿಕೊಂಡು ಅತ್ತುದು- ಅಣ್ಣನ ಹೆಂಡತಿ ವ್ಯಾಕುಲಳಾಗಿ ತನ್ನನ್ನು ಬಹಳವಾಗಿ ಆರೈಕೆ ಮಾಡಿದ್ದು- ಅಂದು ರಾತ್ರಿ ತಾಯಿ ತಮ್ಮಿಬ್ಬರನ್ನು ಕರೆದು ಹೇಳಿದ್ದು-ಅಣ್ಣನ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ತಾಯಿ- 'ಮಗು' ವಿಶ್ವಾಸ ನಿನ್ನ ತಮ್ಮನಲ್ಲ;- ಮಗುವೆಂದು ಭಾವಿಸು. ನನ್ನ ಕೆಲಸ ಮುಗಿದಂ ತಾಯಿತು. ನೀನು ಅವನ ರಕ್ಷಣೆಯನ್ನು..' ತಾಯಿ ಮುಂದೆ ಮಾತ ನಾಡದೆ ಕಣ್ಣೀರು ಸುರಿಸಿದ್ದು-ಅಣ್ಣ ಅವಳೆದುರು ತನ್ನ ಬೆನ್ನಮೇಲೆ ಕೈಯಾಡಿಸುತ್ತ ತಾಯಿಗೆ- 'ಅವ್ವಾ ಅವನ ಬಗ್ಗೆ ಚಿಂತಿಸಬೇಡ. ಅವನು ನನ್ನ ಮುದ್ದು ತಮ್ಮ' ಎಂದು ಹೇಳಿ ಕಣ್ಣೀರು ಹಾಕಿದ್ದು-ಅಣ್ಣನ ಹೆಂಡತಿ ಕೂಡ ತಾಯಿಗೆ ತನ್ನನ್ನು ಜೋಪಾನದಿಂದ ನೋಡುವದಾಗಿ ಮಾತು ಕೊಟ್ಟಿದ್ದು-ಹಿಂದಿನ ಈ ಘಟನೆಗಳೆಲ್ಲ ಅವನಿಗೆ ನೆನಪಾಗತೊ ಡಗಿದವು. ಈ ಎಂಟು ವರುಷಗಳ ಹಿಂದೆ ಇದ್ದ ಪರಿಸ್ಥಿಯೊಡನೆ

ಇಂದಿನ ಸ್ಥಿತಿಯನ್ನು ಹೋಲಿಸಿ ನೋಡಿದಾಗ ಅವನಿಗೆ ದಿಗ್ಭ್ರಮೆ ಯಾಗತೊಡಗಿತು. 'ಅದೇ ಅಣ್ಣ..ಅದೇ ಅಣ್ಣನ ಹೆಂಡತಿ..ಅದೇ ಮನೆ ಆದರೆ ಇಂದು ಆ ಅಣ್ಣನಿಲ್ಲ. ಆ ಅತ್ತಿಗೆ ವಚನವನ್ನು ಮರೆತಿದ್ದಾಳೆ. ಮನೆಯ ಮಾತು ತಿರುವು ಮುರುವಾಗತೊಡಗಿದೆ. ಏತಕ್ಕೆ ಹೀಗಾ ಯಿತು ? ಯಾವ ಕಾರಣ?'

ಎಡೆಯಾಡುವದನ್ನು ನಿಲ್ಲಿಸಿ ವಿಶ್ವಾಸ ಹಾಸಿಗೆಯಮೇಲೆ ನಿಶ್ಪ್ರಾಣ ನಾದವನಂತೆ ಕುಳಿತು ಬಿಟ್ಟ. ಅವನ ದೃಷ್ಟಿ ಗೋಡೆಯತ್ತ ಹೋದಾಗ ಅಲ್ಲಿ ತಾರಾನೊಡನೆ ತೆಗೆಯಿಸಿಕೊಂಡ ಭಾವಚಿತ್ರ ಕಂಗೊಳಿಸಿತು. ಮದುವೆಯ ದಿನ ಅವನ ಗೆಳೆಯ ತೆಗೆದ ಚಿತ್ರವದು. ಐದು ವರುಷಗಳ ಹಿಂದಿನ ಮಾತು. ಅದನ್ನು ನೋಡಿದಾಗ ಅವನಿಗೆ ಹೊಸ ಸ್ಫೂರ್ತಿಯೇ ಬರುತ್ತಿತ್ತು. ಇಂದು ಮಾತ್ರ ಅದನ್ನು ನೋಡಿದಾಗ ಅವನಲ್ಲಿ ವಿಚಾರ ತರಂಗಗಳೇ ಎದ್ದವು.- 'ಹೌದು ಅತ್ತಿಗೆಯ ರೋಷದ ಕಾರಣವನ್ನು ನಾನು ಗ್ರಹಿಸಿರುವೆ. ಮದುವೆಯಾಗುವ ಮೊದಲು ನಾನವಳಿಗೆ ಅಚ್ಚು ಮೆಚ್ಚಿನ ಮುದ್ದು ಮೈದುನನಾಗಿದ್ದೆ. ಮದುವೆಯಾದ ಮೇಲೂ ನಾನವಳ ಮೆಚ್ಚಿನವನಾಗಬಹುದಿತ್ತು. ಆದರೆ ನನ್ನ ಮದುವೆ ಅವಳಿಷ್ಟದಂತೆ ಈಡೇರಲಿಲ್ಲ. ಅವಳ ತವರು ಮನೆಯ ಹೆಣ್ಣನ್ನು ನಾನು ಮದುವೆ ಯಾಗದೆ ನೆರೆಮನೆಯ ತಾರಾನನ್ನೇ ನಾನು ಮದುವೆಯಾದೆ. ಅವಳ ತವರು ಮನೆಯ ಹೆಣ್ಣು ರೂಪವತಿಯಾಗಿದ್ದಳೇನೊ ನಿಜ. ಮದುವೆ ಯಾಗಿದ್ದರೆ ಹಣವನ್ನು ತರುತ್ತಿದ್ದಳು. ಮನೋರಮೆಯೆಂಬ ಅವಳ ಹೆಸರು ಕೂಡ ಮುದ್ದಾಗಿಯೇ ಇತ್ತು. ಆದರೆ ತಾರಾ ನನ್ನಂತರಂಗ ದಲ್ಲಿ ಎಂದೋ ಮನೆ ಮಾಡಿದ್ದಳು. ಅವಳ ಸುಗುಣಗಳನ್ನು ನಾನು ತಿಳಿದಿದ್ದೆ. ಅವಳ ರೂಪವನ್ನು ಆರಾಧಿಸುತ್ತಿದ್ದೆ;- ವಿದ್ಯೆಯನ್ನು ಕೊಂಡಾ ಡುತ್ತಿದ್ದೆ. ಬಡವರ ಮಗಳೆಂದು ನಾನವಳನ್ನು ಉಪೇಕ್ಷಿಸಲಿಲ್ಲ. ಅವ ಳನ್ನೇ ಮದುವೆಯಾಗುವ ಹಟಹಿಡಿದು ಯಶಸ್ವಿಯಾದೆ. ಅಣ್ಣ ಮೊದಲ ಬಾರಿಗೆ ಪ್ರತಿಭಟಿಸಿದ. ಅತ್ತಿಗೆ ಆಗದೆಂದಳು. ಆದರೆ ನನ್ನ ನಿರ್ಧಾರ ಅಚಲವಾಗಿತ್ತು. ಭವಿಷ್ಯ ಜೀವನದ ಸೌಖ್ಯಕ್ಕೆ ನಾನವಳ ಕೈಹಿಡಿದೆ.

ತಾಯಿಗೆ ನನ್ನ ಹಿತ ನೋಡಿಕೊಳ್ಳುವ ವಚನವಿತ್ತ ಅಣ್ಣ ನನ್ನ ಮದುವೆಯಿಂದ ಸಂತೋಷಭರಿತನಾಗಬೇಕಿತ್ತು. ಆಗಲಿಲ್ಲ. ಅತ್ತಿಗೆ ಮನೋರಮೆಯನ್ನುಪೇಕ್ಷಿಸಿದೆನೆಂದು ಸಿಡಿಮಿಡಿಗೊಂಡಳು. ಆ ಭಾವ ಬಲಿತು ನಿಂತು ಇಂದಿನ ಅನರ್ಥವನ್ನು ತಂದೊಡ್ಡಿದೆ. ಇದರಲ್ಲಿ ನಾನು ಮಾಡಿದ ಅನ್ಯಾಯವಾವುದು? ತಾರಾ ಯಾವ ಮಾತಿನಲ್ಲಿ ಕಡಿಮೆ ಯಾಗಿದ್ದಾಳೆ? ಅವರು ಬಡವರ ಮಗಳಾಗಿ ಹಣ ತರಲಿಲ್ಲವೆಂದ ಮಾತ್ರಕ್ಕೆ ಅವಳ ಹೃದಯ ಸಂಪತ್ತೂ ಬಡವಾಗಿದೆಯೆ? ಊರಿನ ಜನ ವೆಲ್ಲ ಅವಳನ್ನು ಹೊಗಳುತ್ತದೆ. ಆದರೆ ಅತ್ತಿಗೆ ಮಾತ್ರ....'

ಅಡಿಗೆ ಮನೆಯಿಂದ ಅತ್ತಿಗೆಯ ಕರ್ಕಶ ನುಡಿಗಳು ತೂರಿಬರ ತೊಡಗಿದ್ದರಿಂದ ವಿಶ್ವಾಸನ ಗತಕಾಲದ ನೆನಹುಗಳು ಹಠಾತ್ತನೆ ನಿಂತು ಬಿಟ್ಟವು. ಅತ್ತಿಗೆಯ ಇಂತಹ ಮಾತುಗಳ ಅಬ್ಬರವೇನೂ ಈಗವನಿಗೆ ಹೊಸದಾಗಿರಲಿಲ್ಲ. ಪ್ರತಿದಿನವೂ ನಡೆಯುವ ಈ ಹಗರಣವನ್ನವನು ಕೇಳಿದರೂ ಕೇಳಿಸದಂತೆ ನಟಿಸುತ್ತಿದ್ದ. ದಿನ ಹೋದಂತೆ ಅವಳು ತಾರಾಳ ಗುಣಗಳನ್ನು ಕಂಡು ತಾನಾಗಿಯೇ ಸುಧಾರಿಸುವಳೆಂದು ತಿಳಿ ದಿದ್ದ. ಅಲ್ಲದೆ ಹೆಣ್ಣುಮಕ್ಕಳ ದಿನದ ಮಾತುಗಳಲ್ಲಿ ಗಂಡಸು ಮನಸ್ಸು ಹಾಕಬಾರದೆಂದು ಸುಮ್ಮನಿರುತ್ತಿದ್ದ. ತಾರಾನೊಡನೆ ಆ ಮಾತುಗಳ ಬಗ್ಗೆ ಚರ್ಚಿಸಲು ಅವನು ಮನಸ್ಸು ಮಾಡಿದಾಗ ಅವಳು ಚಿಲ್ಲರೆ ವಿಷಯದಲ್ಲಿ ಗಂಡಸರು ತಲೆಹಾಕಬಾರದೆಂದು ಹೇಳಿ ಹಸನ್ಮುಖಿಯಾಗಿ ಬಿಡುತ್ತಿದ್ದಳು. ಈದಿನ ಮಾತ್ರ ಅವನಿಗೆ ತಡೆಯುವದಾಗಲಿಲ್ಲ. ಒಮ್ಮೆ ಅತ್ತಿಗೆಯನ್ನು ಚನ್ನಾಗಿ ಮಾತನಾಡಿಸಿ ಬಿಡಬೇಕೆಂದು ನಿರ್ಧರಿಸಿದ. ಈ ಕೆಲಸಕ್ಕಾಗಿ ಅವನು ಬಾಗಿಲವರೆಗೆ ಸಾಗಿದನು ಕೂಡ. ಕೂಡಲೆ ಅವನಿಗೆ ತನ್ನ ಪತ್ನಿ ಈ ಕೆಲಸವನ್ನು ಮೆಚ್ಚಲಾರಳೆಂಬ ಅರಿವಾಗಿ ತಡೆದು ನಿಂತ. ಅತ್ತಿಗೆಯ ಆರ್ಭಟೆ ಒಂದೇ ಸವನೇ ಸಾಗಿತ್ತು.—"ಮನೆಯಲ್ಲಿ ನಾನೊಬ್ಬಳೇ ದುಡಿಯುವ ಕತ್ತೆಯೆಂದು ತಿಳಿದುಕೊಂಡಿದ್ದೀಯೇನೆ? ಮುಂಜಾನೆ ಹೊತ್ತಿಲ ಸಾರಿಸಿ ರಂಗವಲ್ಲಿ ಇಡುವದರಿಂದ ಮೊದಲ ಮಾಡಿಕೊಂಡು ಸಂಜೆಯ ಸಾರಣೆಯ ತನಕ ಎಲ್ಲ ಕೆಲಸಗಳನ್ನು

ನಾನೇ ಮಾಡಬೇಕು. ಅಡಿಗೆಯನ್ನು ನಾನೇ ಕುಚ್ಚಬೇಕು. ಕಸ, ಮುಸುರೆಗಳನ್ನು ನಾನೇ ಕಿತ್ತಿಹಾಕಬೇಕು. ನಿನ್ನ ಪಾಲಿಗೆ ನಾನು ಗಾಣದ ಎತ್ತಾಗಿ ಬಿಟ್ಟಿದ್ದೇನೆ.

"ನಾನು ಯಾವ ಕೆಲಸವನ್ನೂ ಮಾಡುವದಿಲ್ಲವೆ ಅಕ್ಕ?" ತಾರಾನ ಧ್ವನಿಯಲ್ಲಿ ಪ್ರತಿಭಟನೆ ತುಂಬಿತ್ತಾದರೂ ಮೃದುವಾಗಿಯೇ ಕೇಳಿದಳು.

"ಮಾಡತೀಯವಾ; ಎಲ್ಲಾ ಕೆಲಸ್ಹಾನೂ ನೀನೇ ಮಾಡತಿ. ನಿನ್ನ ಮಕ್ಕಳ ವೈ ತೊಳಸ್ತೀದಿ. ಕಸೂತಿ ಹಾಕತೀದಿ. ಅರಿವಿ ಹೊಲೀತೀದಿ. ಪುಸ್ತಕ ಓದತೀದಿ. ಇವೇನು ಕೆಲಸಲ್ಲೇನು ಬಾಳಾ?" ತುಂಗಮ್ಮನ ಧ್ವನಿಯಲ್ಲಿ ವ್ಯಂಗತೆ, ಕಠೋರತೆ ತುಂಬಿದ್ದವು.

"ನೀವು ಹೇಳಿಕೊಟ್ಟ ಕೆಲಸ ಮಾಡಿ ಮುಗಿಸಿದ ಮೇಲೆ ವೇಳೆ ಉಳಿದರೆ ಪುಸ್ತಕ ಓದತೀನಿ. ಕಸೂತಿ ಹಾಕತೀನಿ. ಇದರಾಗೇನ ತಪ್ಪು ಅದ? ಸುಮ್ಮನ ಏನಾರೆ ನೆವ ಹುಡುಕಿ ಬೈತಿದ್ದರಬೈರಿ. ನಾಯಾಕ ಬ್ಯಾಡಲ್ಲಿ? ಎಷ್ಟಂದ್ರೂ ನೀವು ಹಿರೇರು."

"ಹೌದ ನಮ್ಮವ್ವ;- ನೆವಾ ಹುಡಕಿ ಬೈಯೂದ ನನ್ನ ಕೆಲಸ. ನಾ ಭಾಳಖೊಟ್ಟಿ. ನೀ ಮಾತ್ರ ಸಂಭಾವಿತ ಸಜ್ಜಿಗಿ. ಸಣ್ಣ ಹುಡುಗರ ಕಡಿಂದ ಸುದ್ದಾ ಅನಿಸಿಗೊಂಬೂಹಂಗಾತಲ್ಲ ನನ್ನ ಹಣೇಬರಾ." ತುಂಗಮ್ಮ ಈ ಮಾತುಗಳನ್ನು ದನಿ ಎಳೆದುಕೊಂಡೇ ಹೇಳಿದಳು. ಅವಳಿಗೆ ಅಳು ಬಂದೇ ಬಿಟ್ಟಿತು.

"ನಾನು ನಿಮ್ಮ ಮನಸು ನೋಯಿಸಬೇಕೆಂದು ಮಾತನಾಡಲಿಲ್ಲ ಅಕ್ಕ. ನಾಳೆಸಿಂದ ಕಸೂತಿ ಹಾಕುವದಿಲ್ಲ. ಪುಸ್ತಕ ಓದುವದರಿಂದ ನಿಮಗೆ ತಲೆಶೂಲಿ ಏಳುತ್ತಿದ್ದರೆ ನಾಳೆನಿಂದ ಅವನ್ನೂ ಮುಟ್ಟುವದಿಲ್ಲ. ಆಯಿತಿಲ್ಲೊ?"

"ಯಾಕ, ಇಷ್ಟುದಿನಾ ಮಾಡಿದ ಹಗ್ಲಿ ಸಾಕಾಗಲಿಲ್ಲ ಅಂತ

ಈಗ ಮತ್ತ ನಾಕ ಮಂದ್ಯಾಗ ನನ್ನ ಛಲಸಾ ಮಾಡಬೇಕಂತ ಮಾಡೀ
ಏನು? ನಾಯಾಕ ಬ್ಯಾಡಲ್ಲಿ? ಪುಸ್ತಕ ಓದು. ಕಸೂತಿ ಹಾಕು. ಸೆಟರ್
ಪೋಣಿಸು. ತಂದು ಕೊಡುವವರು ಸಮರ್ಥರಿದ್ದಾಗ ನಾಯಾಕ ಬ್ಯಾಡಲ್ಲಿ?
ಆದೇನೋ ಅಂತಾರಲ್ಲ ಸುಟ್ಟಬರ್ಲಿ...."

"ಮೊನ್ನೆ ಭಾವನವರು– ಕೃಷ್ಣ ಹಾಯಸ್ಕೂಲ ಹುಡುಗ. ಅವ
ನಿಗೊಂದು 'ಸ್ವೆಟರ್' ಬೇಕೆಂದು ಹೇಳಿ ಲೌಕರಿ ತಂದು ಕೊಟ್ಟರು.
ಅದನ್ನು ಹೆಣೆಯಬೇಕಾಯಿತು. 'ರೇಶನ್ ಕಾರ್ಡ ಮೇಲೆ ಅರಿವೆ
ಸಿಕ್ಕಿತು. ಎಲ್ಲರಿಗೂ ಹೊಲಿದು ಬಿಡು' ಎಂದು ಹೇಳಿದರು. ಸಾವಿತ್ರಿ
ಗೊಂದು ಲಂಗ ಹೊಲಿದೆ. ಸುಮನೆಗೊಂದು ಪರಕಾರ ಪೋಲ್ಕಾ
ಹೊಲಿದೆ. ಕಿರಣನಿಗೊಂದು ಅದರಲ್ಲೇ ಒಂದು ಅಂಗಿಯೂ ಆಯಿತು.
ಉಳಿದ ತುಣುಕಿನಲ್ಲಿ ಉಷಳಿಗೊಂದು ಜುಬ್ಬವನ್ನು ಹೊಲಿದೆ."

"ಹೇಳಬ್ಯಾಡ ಬಿಡs ನಿನ್ನ ಜಂಭಾನ. ಆದೇನೊ ಅಂತಾರಲ್ಲ.
ಆನೆ ಅಂತಾರಲ್ಲ ಖರ್ಚು ಮಾಡುವವರ್ಗೆ ಈ ಕೂಲಿ ಉಳಿಸೋದೇನು
ಉಪಕಾರ ಅಲ್ಲ."

"ನಾನು ಕೂಲಿಯವಳೆಂದು ಈ ಕೆಲಸ ಮಾಡಲಿಲ್ಲ ಅಕ್ಕ.
ಕೃಷ್ಣ ನನ್ನ ಮಗುವೇ ಅಲ್ಲವೆ? ಸಾವಿತ್ರಿ-ಸುಮನೆಯರು ಕಿರಣನ ಅಕ್ಕ
ತಂಗಿಯರೇ ಇರುವಾಗ ನಾನು ಯಾರ ಮೇಲೆ ಉಪಕಾರ ಮಾಡಲಿ?
ಭಾವನವರು ಹೇಳಿದರು. ನಾನು ಮಾಡಿದೆ. ಏನೋ ಮಾತಿಗೆ ಮಾತು
ಬಂತು–ಹೇಳಿದೆ. ಮನೆ ಕೆಲಸದಲ್ಲಿ ಈ ಕೆಲಸ ಅಡ್ಡಿ ಬರಲಿಲ್ಲ ಅಕ್ಕ.
ನನ್ನ ಮಕ್ಕಳ ಕೆಲಸ ನನಗೆ ಭಾರ ಆಗಲಿಲ್ಲ."

ಸಾಕುಬಿಡು ಇಂಥಾ ಬುಬ್ಬುಣಚಾರದ ಮಾತಾಡಿ ನನ್ನ ತಲೀ
ಏಬ್ಬಿಸಬೇಡ. ತಂದು ಹಾಕುವವರರೇ ಎಷ್ಟಂತ ತಂದು ಹಾಕಬೇಕು.
ದುಡಿದು ದುಡಿದು ಸತ್ತು ಸುಣ್ಣಾಗತಾರ ನಿಮ್ಮ ಕಾಲಾಗ. ಅವರ
ಖಬರೇನಾರ ನಿಮಗಿದ ಏನು? ನೀ ಯಾ ಮೂರ್ತಲೇ ಮನೀ ತುಂಬಿದ್ಯೋ
ಮಾರಾಯಳೆ? ಬರೇ ಖರ್ಚೇ ನಡದದ. ಎರಡು ಮಕ್ಕಳ ತಂದೆಯಾ

ದರು ಭಾವಜಿಯವರು. ಇನ್ನೂ ಅವರಿಗೆ ಬುದ್ಧಿ ಬರವಲ್ಲದು. ಹೇಳು ವವರರೇ ಎಷ್ಟಂತ ಹೇಳತಾರ? ಸ್ವಲ್ಪ ಏನಾರೆ ಸೂಕ್ಷ್ಮ ತಿಳೀಬೇಕೊ ಬೇಡವೊ? ಮನುಸ್ಯಾ ಆದ ಬಳಿಕ ನಾಕ ಮಂದೀವಳಗ ಛಂದ ಕಾಣಿಸೂ ಹಂಗಿರಬೇಕು." ತುಂಗವ್ವನ ಈ ವಾಕ್ಪ್ರವಾಹವನ್ನು ನಿಂತಲ್ಲಿಯೆ ಕೇಳಿ ವಿಶ್ವಾಸ ಹೌಹಾರಿ ಹೋದ. ತಾನು ಗಳಿಸಲಾರದೆ ಮನೆಯಲ್ಲಿ ಅನಾ ಮಾಥೇಯನಂತೆ ಕುಳಿತು ತಿನ್ನುವ ಉಂಡಾಡಿಗನೆಂದು ಅತ್ತಿಗೆ ತಿಳಿದು ಕೊಂಡದ್ದು ಅವನಲ್ಲಿ ಜಾಗ್ರತೆಯನ್ನುಂಟು ಮಾಡಿತು. ಈ ಮಾತಿನ ವಿವರವನ್ನು ಆಗಲೇ ಕೇಳಿ ಬಿಡಬೇಕೆಂದು ಅವನು ಯೋಚಿಸುತ್ತಿರುವಾಗ ಪಡಸಾಲೆಯಲ್ಲಿಯೆ ಅಣ್ಣನಿರುವ ಸಂಗತಿ ಗೊತ್ತಾಗಿ ಆ ವಿಚಾರವನ್ನು ಅಷ್ಟಕ್ಕೇ ನಿಲ್ಲಿಸಿದನು. ಅತ್ತಿಗೆಯ ಮಾತಿನಪೆಟ್ಟು ಹೆಂಡತಿಗೆ ಅಸಹ ನೀಯವಾಗಿ ಅವಳೂ ಕಿಡಿಕಾರಬಹುದೆಂದು ಭಾವಿಸಿ ಅವಳ ಉತ್ತರ ವನ್ನು ಕಾಯಲು ಕುತೂಹಲನಾದ.

ತುಂಗವ್ವನ ಮಾತಿನ ಓಘ ಈ ರೀತಿ ಹರಿಯಬಹುದೆಂದು ತಾರಾ ಕೂಡ ಭಾವಿಸಿರಲಿಲ್ಲ. ಈ ಮಾತುಗಳು ಬಹಳ ಅನಿರೀಕ್ಷಿತವಾಗಿದ್ದವು. ಪ್ರತಿದಿನ ರಾತ್ರಿಯ ಊಟವಾದ ಮೇಲೆ ತುಂಗವ್ವ ತನ್ನನ್ನು ಚುಚ್ಚಿ ಮಾತಾಡುವ ಸಾಂಪ್ರದಾಯ ಅವಳಿಗೆ ಹೊಸದಾಗಿರಲಿಲ್ಲ. ಯಾವ ಪ್ರಸಂಗದಲ್ಲಿಯೂ ಅವಳು ಗಂಡಸರ ವಿಷಯವನ್ನು ಕುರಿತು ಮಾತನಾ ಡಿರಲಿಲ್ಲ. ಇಂದಿನ ಮಾತು ಅವಳ ಹೃದಯಕ್ಕೆ ಕಾಸಿದ ಬರೆಯಾಗಿ ಪರಿಣಮಿಸಿತು. ತುಂಗವ್ವನಿಗೆ ಅದೇ ಧಾಟಿಯಲ್ಲಿ ಉತ್ತರಕೊಡಲು ತಾನು ಅಸಮರ್ಥಳೆಂದು ಅವಳಾಗಲೆ ಕಂಡುಕೊಂಡಳು. ಸುಮ್ಮನೆ ಕಿಡಿ ಹಾರಿಸಿ ಗಂಡಸರ ನೆಮ್ಮದಿಯನ್ನು ಹಾಳು ಮಾಡುವದು ಅವಳಿಗೆ ಬೇಕಾಗಿರಲಿಲ್ಲ. ಅವಳ ಸ್ವಭಾವ ತಾರಾನಿಗೆ ಚನ್ನಾಗಿ ಗೊತ್ತಿತ್ತು. ಕಡ್ಡಿ ಇದ್ದದ್ದನ್ನು ಗುಡ್ಡಮಾಡಿ ಹೇಳುವ ಸ್ವಭಾವ ಅವಳದು. ತಾರಾ ಅವಳನ್ನು ನೇರವಾಗಿ ನೋಡಿದಳು ಮಾತ್ರ. ಆ ನೋಟದಲ್ಲಿ ವೇದನೆ ತುಂಬಿತ್ತು. ಅದನ್ನವಳು ಹತ್ತಿಕ್ಕಿಕೊಂಡು "ಗಂಡಸರು ತಮ್ಮ ಹೊಣೆ ಯನ್ನು ಬಲ್ಲರು ಅಕ್ಕ. ಆ ಮಾತನ್ನು ನಾವೇಕೆ ಆಡಬೇಕು?" ಎಂದು ಮೃದುವಾಗಿ ಕೇಳಿದಳು.

ಮಾತು ಮೃದುವಾಗಿದ್ದರೂ ತುಂಗಮ್ಮನಿಗೆ ಅದು ಕಠೋರವಾಗಿಯೆ ಪರಿಣಮಿಸಿತು. ಅವಳು ಅದನ್ನು ಸಹಿಸಲಾರದೆ- "ಗಿಡದ ಮೇಲೆ ಗಾಳಿ ಬೀಸುತ್ತಿದ್ದರೆ ಚಕ್ಕಂದವಾಡಲಿಕ್ಕೆ ಹೊಣೆಗಾರಿಕೆ ಏನೂ ಬೇಕಾಗುವದಿಲ್ಲ. ತಿಳೀತಿಲ್ಲೊ? ಈಗ ಐದಾರು ವರುಷಾತು ಬಿ. ಎ. ಆಗಿ. ಮಾರಾಯರು ಒಂದು ಕವಡೀ ಸುದ್ದಾ ತಂದು ಹಾಕಿಲ್ಲ. ಮನೆಯೊಳಗ ಏನದ, ಏನಿಲ್ಲಾ-ತರುಬರೂ ವ್ಯವಸ್ಥಾ ಹ್ಯಾಂಗ-ಇದನ್ನೇನಾರ ಕೇಳ್ಯಾನೇನು ನಿನ್ನ ಪತಿರಾಯ? ಮನ್ಯಾಗ ಕೂತು ರಗಳೀ ಬರೀಲಿಕ್ಕೆ ಈ ಬಿ. ಎ. ಆಗಿ ದುಡ್ಡು ಯಾಕ ಹಾಳ ಮಾಡಬೇಕಾಗಿತ್ತು? ನನ್ನ ಮಕ್ಕಳ ಕೈಯಾಗ ಪರಟೀ ಯಾಕ ಕೊಡಬೇಕಾಗಿತ್ತು? ಗಂಡಸು ಅದಮೇಲೆ ದುಡೀಬೇಕೊ ಬೇಡೊ? ಮತ್ತ ಹೇಳತಾಳ ದೋಡ್ಡ ತಿಳಿದವರಂಗ...."

"ಅವರಿಗೆ ದುಡಿದು ದುಡ್ಡು ತರಲಿಕ್ಕೆ ನಾನು ಬೇಡವೆಂದೆನೆ ಅಕ್ಕ?"

"ನೀಯಾಕ ಬ್ಯಾಡಂದಿ ಮಾರಾಯಳs. ಬಣ್ಣದ ಬೀಸಣಿಕಿ ಹಾಂಗ ಅವರ ಮುಂದ ಸುಳದು ಮನ್ಯಾಗ ಮಾತ್ರ ಕೂಡ್ರುಹಂಗ ಮಾಡೀದಿ. ತವರು ಮನೆಯಿಂದ ದುಡ್ಡು ತಂದಿದ್ರುನಕಾ ಏನ ಮಾಡ ತಿದ್ಯೊ ಏನೊ. ಈಗs ಇಷ್ಟು ಉರಿದುರಿದು ಬೀಳತೀದಿ. ಅದೇನೋ ಅಂತಾರಲಾ-ಬಡವರಿಗೆ ಸೊಕ್ಕು ಬಾಳಾ ಕಲಗಡಿಗಿಗೆ ಉಕ್ಕು ಭಾಳಾ ಅಂತ."

ತವರು ಮನೆಯ ಬಡತನವನ್ನು ಚುಚ್ಚಿ ಮಾತಾಡುವ ತುಂಗಮ್ಮನ ಮಾತುಗಳನ್ನು ಕೇಳಿ ತಾರಾನ ಕಣ್ಣೊಳಗಿಂದ ಪಳಕ್ಕನೆ ನೀರು ಸುರಿದವು. ಆ ಸತ್ಯವಾದ ಮಾತನ್ನು ಅವಳರಿತ್ತಿದ್ದರೂ ಅವಹೇಳನವನ್ನು ಕೇಳುವದು ಅವಳಿಗೆ ಅಸಾಧ್ಯವಾಗತೊಡಗಿತು. ಆದರೂ ಅವಳು ಸಂಯಮವನ್ನು ಬಿಡದೆ- "ತವರು ಮನೆಯಿಂದ ದುಡ್ಡು ತರುವ ಭಾಗ್ಯ ನಾನು ಪಡೆದು ಬರಲಿಲ್ಲ ಅಕ್ಕ;- ನಿಮ್ಮ ಮಾತು ಸತ್ಯವಾಗಿದೆ. ಆದರೆ ನಿಮ್ಮ ಮನೆ ಯನ್ನು ತುಂಬಿ ಬಂದಮೇಲೆ ನಿಮ್ಮ ಸಂಪತ್ತೇ ನನ್ನದು. ನಿಮ್ಮ ಬಡತನವೇ ನನ್ನದು. ಅದಕ್ಕಾಗಿ ಈಗ ನೀವು ಚುಚ್ಚಿ ಮಾತನಾಡಿದರೂ

ಏನು ಪ್ರಯೋಜನ? ಮಾತು ಮಿಂಚಿಹೋಗಿದೆ. ನನ್ನನ್ನು ತುಂಬಿಕೊಳ್ಳುವ ಮೊದಲು ನೀವು ವಿಚಾರ ಮಾಡಬೇಕಿತ್ತು."

ಕೊನೆಯ ವಾಕ್ಯವು ಅವಳಿಗೆ ತಿಳಿಯದಂತೆ ಜಾರಿಬಿಟ್ಟಿತು. ತುಂಗಮ್ಮನಿಗೆ ಅವಳು ಬೇಕೆಂದೇ ತನ್ನನ್ನು ಕೆಣಕುತ್ತಿರುವಂತೆನ್ನಿಸಿತು. ಈ ಮದುವೆಯ ಮಾತಿನಲ್ಲಿ ತನ್ನ ಕೈಸಾಗದಿರುವ ಮಾತನ್ನು ಬೇಕೆಂದೇ ಅವಳು ಎಬ್ಬಿಸಿ ಚುಚ್ಚತೊಡಗಿದ್ದಾಳೆಂದು ತುಂಗಮ್ಮ ಕೆರಳಿದಳು. ಅವಳಿಗೆ ಅವಮಾನವಾದಂತಾಗಿ ಗಂಗಾಪ್ರವಾಹವೇ ಕಣ್ಣುಗಳೊಳಗಿಂದ ಹೊರಡತೊಡಗಿತು. ಕರ್ಕಶವಾದ ಧ್ವನಿಯಲ್ಲಿ– "ನನ್ನ ವಿಚಾರ ನಡೀಲಿಲ್ಲಾಂತ ಈಗ ಚುಚ್ಚಿ ಮಾತಾಡಿ ಅಣಕಿಸಲಿಕ್ಕೆ ಹತ್ತೀದೇನು? ಭಾವಜೀ ಅವರಿಗೆ ಮದವೀ ಮೊದಲ–ನೀನು ನಿಮ್ಮವ್ವ ಕೂಡಿ ಏನು ಮಾಟಾ ಮಾಡಿದಿರೊ ಯಾರಿಗೆ ಗೊತ್ತು? ಮನೋರಮೆಯಂಥ ಭಾಗ್ಯಲಕ್ಷ್ಮಿನ್ನ ಬಿಟ್ಟು ಇದಿಲಕ್ಷ್ಮಿ ಆಗಿ ಬಂದುಬಿಟ್ಟಿ. ಸಂಭಾವಿತರು ಮಾಡೂ ಕೆಲಸಲ್ಲಿದು. ಸುಮ್ಮನ ನನ್ನ ಸಿಟ್ಟಿಗೆಬ್ಬಿಸಬ್ಯಾಡ. ಹುಳುಕು ತೆಗೆಯೂದರಾಗ ಏನೇನೂ ಅರ್ಥವಿಲ್ಲ."

"ಒಂದು ಹಿರಿಯ ಮನೆತನದ ಹಿರಿಯ ಮುತ್ತೈದೆಯರಾದ ನೀವು ಹೀಗೆಲ್ಲ ಮಾತನಾಡಬಾರದು. ಸುಳ್ಳು ದೊಡ್ಡವರಿಗೆ ಶೋಭಿಸದು ಅಕ್ಕ. ನಾನು ಇದಿಲಕ್ಷ್ಮಿಯಾಗಿ ಬಂದಿರಬಹುದು. ನನಗಿಂತ ಮೊದಲು ಬಂದ ನೀವೇ ಭಾಗ್ಯಲಕ್ಷ್ಮಿಯಾಗಿರಬಹುದು. ನಾನು ಬಂದು ನಿಮ್ಮ ಮನೆತನದ ಭಾಗ್ಯಕ್ಕೆ ಹೇಗೆ ಕಂಟಕಳಾದೆನೊ ನನಗಂತೂ ತಿಳಿಯದು."

"ಏನು ಹೇಳೂಹಂಗಿಲ್ಲ ನಿನ್ನ ಭಾಗ್ಯ. ಇದ್ದ ಭಾಗ್ಯವನ್ನೆಲ್ಲ ಮುರಿದು ತಿಂದುಬಿಟ್ಟಿ. ಈಗ ಹೇಳಲಿಕ್ಕೆ ಬಂದಾಳ. ಒಂದಿನಾರೆ ವಿಶ್ವಾಸರಾಯರಿಗೆ ಹೇಳಿ ಏನು ಕೂತು ತಿನ್ನಬ್ಯಾಡಾ ಅಂತ?"

"ಈ ಮಾತನ್ನು ನಾನೇ ಏಕೆ ಹೇಳಬೇಕು? ಹಿರಿಯರಾದ ನೀವು ಅವರಿಗೆ ಹೇಳಬೇಕಾಗಿತ್ತು;- ಭಾವನವರು ಹೇಳಬೇಕಾಗಿತ್ತು.

"ನಾವು ಹೇಳಲಿಲ್ಲಂತ ನೀವೂ ನಾಚಿಕಿ ಬಿಡಬೇಕೇನು?"

"ನಾವು ನಾಚಿಕೆ ಇಲ್ಲದ ನಾಯಿಗಳೆಂದು ಈ ಮೊದಲು ತಿಳಿದಿರಲಿಲ್ಲ ಅಕ್ಕ. ಇವರು ನಾಚಿಕೆ ಬಿಟ್ಟವರಲ್ಲ. ಹಾಗಿದ್ದರೆ ಇಷ್ಟು ಪ್ರಖ್ಯಾತರಾಗುತ್ತಿದ್ದಿಲ್ಲ."

"ಸುಟ್ಟಿತು ಪ್ರಖ್ಯಾತಿ. ಒಂದು ಕವಡೀ ತರೂ ಯೋಗ್ಯತಾ ಇಲ್ಲ. ವ್ಯಾಲೆ ಪ್ರಖ್ಯಾತಿ ಜಂಬ ಬ್ಯಾರೆ ಅವರ ಪ್ರಖ್ಯಾತಿ ಒಳಗ ಒಬ್ಬರ ಜೀವ ಹೋಗಲಿಕ್ಕೆ ಹತ್ತೇದ."

"ನೀವು ಅವರನ್ನು ತಿಳಿದುಕೊಂಡಿಲ್ಲ ಅಕ್ಕ."

"ಸಾಕು ಸುಮ್ಮನಿರು. ಬಂದು ನಾಲ್ಕು ದಿನ ಆಗಿಲ್ಲ ನನಗೆ ಬುದ್ಧಿ ಹೇಳಲಿಕ್ಕೆ ಬರತಾಳ. ಬಿಟ್ಟೀ ಕೂಳು ತಿನ್ನೂ ನಾಲಿಗೆ ಇಷ್ಟುದ್ದ ಹೋಗಬಾರದು."

"ಈ ಮನೆತನದ ಅನ್ನ ಬಹಳ ಪವಿತ್ರವಾಗಿದೆ ಅಕ್ಕ. ನಾವು ತಿನ್ನೂಕೂಳು ಹಿರಿಯರ ಆಶೀರ್ವಾದವಾಗಿದೆ...."

"ಮನೆತನದ ಮೂರಾಬಟ್ಟೆಗೆ ಈ ಬಿಟ್ಟೀ ಕೂಳೇ ಕಾರಣವಾಗುತ್ತದೆ. ಸುಮ್ಮನೇ ಎದ್ದು ಹೋಗು ಮಾರಾಯಳ. ನನ್ನ ತಲೀ ಕೆಡಿಸಬ್ಯಾಡ." ಎನ್ನುತ್ತ ತುಂಗವ್ವ ಭರದಿಂದ ಸಾರಣೆ ಮಾಡತೊಡಗಿದಳು. ಮಾತು ಬೆಳೆಯಿಸುವದರಲ್ಲಿ ಯಾವ ಅರ್ಥವೂ ಇಲ್ಲವೆಂಬಂತೆ ತಾರಾ ಸಾವಕಾಶವಾಗಿ ಹೆಜ್ಜೆಗಳನ್ನಿಡುತ್ತ ತಂಬಿಗೆ ತೆಗೆದುಕೊಳ್ಳಲು ಸಾಗಿದಳು. ಅವಳ ಮನಸ್ಸು ಕದಡಿ ಹೋಗಿತ್ತು. ಹೃದಯ ಕಂಗೆಟ್ಟು ನಿಂತಿತ್ತು. ಅಡಕಲು ಏರಿಸಿದ ತಂಬಿಗೆಯನ್ನು ತೆಗೆದುಕೊಳ್ಳುವಾಗ ಕೈಜಾರಿದ್ದರಿಂದ ತಂಬಿಗೆಗಳ ಮೇಲೆ ತಂಬಿಗೆಗಳು ಬಿದ್ದು ಸಪ್ಪಳ ಮಾಡುತ್ತ ಉರುಳಿಬಿಟ್ಟವು. ಬಚ್ಚಲ ಮನೆಯಲ್ಲಿ ಕೈತೊಳೆಯುತ್ತಿದ್ದ ತುಂಗವ್ವ ಓಡಿ ಬಂದು ಹಣೆಗಟ್ಟಿಸಿಕೊಳ್ಳುತ್ತ ಗದ್ದರಿಸಿದಳು.

"ನಿನ್ನ ಸಿಟ್ಟು ತಂಬಿಗಿ ಮ್ಯಾಲ ಯಾಕ ಹಾಕ್ತೀಯೆ ಪುಣ್ಯಾತಗಿತ್ತಿ?

ನಾಲ್ಕುದಿನ ಆವಾರೆ ಯಾಕ ಬಾಳಬೇಕಂತದಃ ಏನು ನಿನ್ನ ಮನಸು? ಛೀ-ಛೀ! ಹಿಂಗಾದರ ಹೆಂಗ ನಡೀಬೇಕು ಮಣ್ಣು."

ತಂಬಿಗೆಗಳನ್ನು ಜೋಡಿಸಿಡುತ್ತ ತಾರಾ ಹೇಳಿದಳು "ಕೈಜಾರಿತು ಅಕ್ಕ"

"ಜಾರದೆ ಏನು ಮಾಡೀತವಾ ನಿನ್ನ ಕೈಃ. ಮಂದಿ ಭಾಂಡಿ ಅಂದಮ್ಯಾಲೆ ಅವು ಒಡ ವರೇನು-ತುಂಡಾಗಿ ಸಿಡಿದರೇನು?" ತುಂಗವ್ವ ತಾರಾಳನ್ನು ಸರಿಸಿ ಆ ಭಾಂಡಿಗಳನ್ನು ರವ್ವಿಸುವಂತೆ ಒರೆಸುತ್ತ ಅಡ ಕಲು ಏರಿಸತೊಡಗಿದಳು. ಕೊನೆಯ ಒಂದನ್ನು ತೆಗೆದುಕೊಂಡು ನೀರನ್ನು ಬಾಗಿಸಿಕೊಳ್ಳಲು ದಡದಡನೆ ಕೊಡದ ಹತ್ತರ ಹೋದಳು. ಅವಳ ಸರ್ವಾಂಗ ನಡುಗುತ್ತಿತ್ತು. ಸಿಟ್ಟಿನ ಭರದಲ್ಲಿ ತಂಬಿಗೆ ತುಂಬಿದ ಕಡೆಗೆ ಅವಳ ಲಕ್ಷ್ಯವೇ ಇಲ್ಲ. ನೀರೆಲ್ಲ ಹಳ್ಳಹರಿದಂತೆ ಅಡಿಗೆಮನೆಯಲ್ಲಿ ಹರಿಯ ತೊಡಗಿತು.

"ನಿಮಗೆ ಆಗಿದೆಯಾದರೂ ಏನು ಅಕ್ಕ? ನೀರೆಲ್ಲ ಹರಿಯತೊಡ ಗಿದೆ." ಎನ್ನುತ್ತ ತಾರಾ ಒಂದು ಸಾರಣೆಯ ಅರಿವೆ ತಂದು ನೀರನ್ನು ಬಳಿಯುತೊಡಗಿದಳು.

ನನಗೆ ಧಾಡಿ ಆಗಿದೆ. ನಾನು ಚಲ್ಲಿದ ನೀರನ್ನು ನೀನು ಬಳಿ ಯುವ ಕಾರಣವಿಲ್ಲ. ಸುಮ್ಮನೆ ಎದ್ದು ಹೋಗು" ಎನ್ನುತ್ತ ತುಂಗವ್ವ ಅವಳ ಕೈಯಲ್ಲಿಯ ಒದ್ದೆಯನ್ನು ಕಸಿದುಕೊಂಡು ತಾನೇ ರಭಸದಿಂದ ಎಳೆಯತೊಡಗಿದಳು. ಅವಳು ಹೀಗೆ ಒದ್ದೆಯನ್ನು ಕಸಿದುಕೊಳ್ಳುವಾಗ ತಾರಾ ಜೋಲಿತಪ್ಪಿದಳು;- ಬೀಳುವದನ್ನು ತಪ್ಪಿಸಿಕೊಳ್ಳಲು ಪಕ್ಕದ ನೆಲುವಿಗೆ ಕೈನೀಡಿದಳು. ಅವಳ ಭಾರವನ್ನು ತಾಳಲಾರದೆ ನೆಲುವು ಕಿತ್ತಿಹೋಯಿತು. ಅದರ ಒಡಲಲ್ಲಿದ್ದ ಗಡಿಗೆ ಮಡಿಕೆಗಳೆಲ್ಲ ಒಡೆದು ಚೂರಾಗಿಬಿಟ್ಟವು. ಹೆಸರು ಬೇಳೆ, ಅಲಸಂದಿ ಬೇಳೆ ಚಲ್ಲಾಪಿಲ್ಲಿಯಾಗಿ ಅಳ್ಳಿಟ್ಟು ಅವಕ್ಕೆ ಸ್ನಾನ ಮಾಡಿಸಿತು. ಇದೆಲ್ಲವನ್ನು ನೋಡಿದ ತುಂಗವ್ವ ತಪ್ಪಳಾಗಿ-

"ಇಂಥ ಬೇಜವಾಬದಾರಿ ಹೆಂಗಸಿನ ಕೂಡ ಬಾಳವಿ ಮಾಡೂದು ನನಗಂತೂ ಶಕ್ಯನೇ ಇಲ್ಲ. ಭಾಂಡಿ ಒಡೀಲಿಲ್ಲಂತ ಗಡಗೀ ಒಡೆದು ಎಲ್ಲಾ ಹಾಳು ಮಾಡಿಬಿಟ್ಟಳು. ನಿನ್ನ ಕೂಡ ನನಗೆ ಕೂಡಿ ನಡಿಯೂದು ಮರ್‍ಯೀ ಆಗೂದಿಲ್ಲವಾ. ನಾವು ಬಡವರು. ನಾಲ್ಕು ಭಾಂಡಿ ಇಟಗೊಂಡು ಸಂಸಾರ ಮಾಡತೀವಿ..ನೀವು...."

"ಅಕ್ಕ, ನಾನು ತಪ್ಪು ಮಾಡಲಿಲ್ಲ" ಎನ್ನುತ್ತ ತಾರಾ ಬಿಕ್ಕಳಿಸಿ ಸಾಮಾನುಗಳನ್ನು ಸಾವರಿಸತೊಡಗಿದಳು.

ಈ ಮಾತುಗಳನ್ನೆಲ್ಲ ಕೇಳುತ್ತಿದ್ದ ವಿಶ್ವಾಸನಿಗೆ ಇನ್ನೂ ತಡೆಯುವದೆಂದರೆ ಅನ್ಯಾಯವೆನ್ನಿಸಿತು. ಅವನು ಒಂದು ಹೆಜ್ಜೆ ಮುಂದಿಡುವ ಹೊತ್ತಿಗೆ ಪಡಸಾಲೆಯಿಂದ ಅಣ್ಣನ ಗರ್ಜನೆ ಕೇಳಬಂತು.– "ಮನೀ ಒಳಗ ಗಂಡಸರು ಜೀವಂತಿದ್ದಾರ ಅನ್ನೂ ಖಬರರs ಅದ ಏನು ನಿಮಗs? ಹುಚ್ಚನಾಯಿಗಳಂಗ ಕಚ್ಚಾಡತೀರಿ. ನನಗಂತೂ ನಿಮ್ಮ ಸಲುವಾಗಿ ಸಾಕಾಗಿ ಹೋಗೇದ. ಏ ತಾರಾ, ರಾತ್ರಿ ಹನ್ನೆರಡಾಗಲಿಕ್ಕೆ ಬಂತು. ಸುಮ್ಮನ ಹೋಗಿ ಮಲಕೊ. ಹೆಂಗಸರಂದ ಮೇಲೆ ಸ್ವಲ್ಪರೇ ಗಂಡಸರ ಅಂಜಿಕಿ ಇರಬೇಕು."

ಅಚ್ಯುತರಾಯರ ಗರ್ಜನೆಯ ಪರಿಣಾಮವಾಗಿ ಇಡಿಯ ಮನೆಯೇ ಸ್ತಬ್ಧವಾಯಿತು. ತಾರಾ ಪಿಟ್ಟೆನ್ನಲಿಲ್ಲ. ತುಂಗವ್ವ ಮುಳು ಮುಳು ಅಳುತ್ತ ಬಿದ್ದ ಸಾಮಾನುಗಳನ್ನೆತ್ತಿಡತೊಡಗಿದಳು. ತಾರಾ ತಂಬಿಗೆ ತುಂಬಿಕೊಂಡು ತನ್ನ ಕೋಣೆಯತ್ತ ಸಾಗಿದ್ದಳು. ಹಸನ್ಮುಖಿಯಾಗಿಯೇ ಪತಿಯನ್ನು ಸ್ವಾಗತಿಸಿದಳು. ಅವಳ ಮುಗುಳುನಗೆ ಅದೆಷ್ಟು ಕೃತ್ರಿಮವಾಗಿತ್ತೆಂದು ತಿಳಿದುಕೊಳ್ಳಲು ವಿಶ್ವಾಸನಿಗೆ ಬಹಳ ವೇಳೆ ಹಿಡಿಯಲಿಲ್ಲ. ಅವಳ ನಗುವಿನ ಹಿಂದೆ ಅವಿತುಕೊಂಡ ಪತ್ನಿಯ ವೇದನೆ ಅವನ ಹೃದಯವನ್ನಾಗಲೆ ಕದಡಿ ಬಿಟ್ಟಿತು. ಪರಿಸ್ಥಿತಿ ಹೀಗೆಯೆ ಹತೋಟಿ ತಪ್ಪಿ ಹರಿಯುತ್ತ ಹೋದರೆ ಈ ನಗೆಗೆ ಬರಗಾಲವಾದೀತೆಂದು ಎಣಿಕೆ ಹಾಕಿದ. ಆದಕ್ಕೆಂದೇ ಹೆಂಡತಿ ಒಳಕ್ಕೆ ಬರುತ್ತಲೇ ಅವನು ಕಳವಳ

ದಿಂದ "ಏನು ರಂಬಾಟವದು ತಾರಾ? ಮತ್ತಾವ ವಿಷಯ ಬಂದಿತ್ತು ಈ ಹೊತ್ತು?" ಎಂದು ತನಗೆ ಎಲ್ಲವೂ ಗೊತ್ತಿದ್ದರೂ ಮಾತು ತೆಗೆಯಬೇಕೆಂದು ಕೇಳಿದ. ಇಂತಹ ಪ್ರಶ್ನೆಯನ್ನು ಕೇಳಿದಾಗ ತಾರಾ-'ಕಿರುಕಳ ವಿಷಯ ಹೆಂಗಸರಿಗೆ ಸಂಬಂಧಿಸಿದ್ದು' ಎಂದು ಹೇಳುವದು ಸಾಂಪ್ರದಾಯವಾಗಿತ್ತು. ಈದಿನ ಮಾತ್ರ ಅವಳು ಹಾಗೆ ಹೇಳಲಿಲ್ಲ. ಗಂಡನು ಕೇಳಿದ ಪ್ರಶ್ನೆಯಿಂದ ಅವಳ ದುಃಖ ಒತ್ತರಿಸಿ ಬಂದಿತು. ಅವಳ ಕಣ್ಣಾಲಿ ತುಂಬಿಕೊಂಡವು. ಅವನ ಹತ್ತರ ಸರಿಯುತ್ತ-

"ನಾನು ಉಪವಾಸವನ್ನು ತಾಳಿಕೊಂಡೇನು. ಈ ಉಪದ್ರವನ್ನು ತಾಳಿಕೊಳ್ಳುವದು ನನ್ನಿಂದ ಇನ್ನು ಮೇಲೆ ಸಾಧ್ಯವಿಲ್ಲ." ಎಂದು ಹೇಳುತ್ತಲೇ ಅವಳ ಮೊಗ ಪತಿಯ ಹೃದಯವನ್ನು ತೋಯಿಸತೊಡಗಿತ್ತು. ಅವಳ ಮೊಗವನ್ನು ತನ್ನೆರಡೂ ಕೈಗಳಿಂದ ಮೆಲ್ಲನೆ ಸರಿಸುತ್ತ-

"ಆದದ್ದಾದರೂ ಏನು ತಾರಾ?" ಎಂದು ಗೊತ್ತಿದ್ದರೂ ಕೇಳಿದ.

ನಮ್ಮೊಡನೆ ಇರುವದು ಅಕ್ಕನಿಗೆ ಬೇಡವಾಗಿದೆ. ಇಷ್ಟು ದಿನ ನಡೆದಂತೆ ಇನ್ನು ನಡೆಯುವ ಹಾಗಿಲ್ಲ. ಕೂಳಿಗೆ ಬಿದ್ದ ನಾಯಿಗಳಂತೆ ಅವರು ನಮ್ಮನ್ನು ಕಾಣತೊಡಗಿದ್ದಾರೆ."

ವಿಶ್ವಾಸ ನಿಟ್ಟುಸಿರು ಬಿಟ್ಟು ಹೇಳಿದ- "ಹಿರಿಯರ ಆಸ್ತಿಯಲ್ಲಿ ನೆಮ್ಮದಿಯಾಗಿರಬಹುದೆಂದು ತಿಳಿದಿದ್ದೆ ತಾರಾ. ಈ ಮನೆ, ಈ ಆಸ್ತಿ...."

"ಅಕ್ಕ ಹಾಗೆ ತಿಳಿದುಕೊಳ್ಳುವದಿಲ್ಲ. ಈ ಆಸ್ತಿಯನ್ನು ನಾವು ಹಾಳುಮಾಡಿ ಅವರ ಮಕ್ಕಳ ಕೈಯಲ್ಲಿ ಪರಟೆ ಕೊಡುವೆವೆಂದು ಅವರು ನಂಬಿದ್ದಾರೆ. ಅಲ್ಲದೆ ಅವರು ನನ್ನ ಮೇಲೆ ಹೆಚ್ಚಿನ ಸಿಟ್ಟು. ಅವರು ನಿಮ್ಮನ್ನು ಪ್ರೀತಿಸಿದರೂ ನನ್ನನ್ನು ಪ್ರೀತಿಸಲಾರರು. ಅವರ ಹೃದಯದಲ್ಲಿ ಕಹಿ ತುಂಬಿದೆ."

"ಅವರು ನನ್ನನ್ನು ಪ್ರೀತಿಸುವರು, ನಿನ್ನನ್ನು ಪ್ರೀತಿಸುವದಿಲ್ಲ ಈ ಮಾತಿನಲ್ಲಿ ಯಾವ ಅರ್ಥವೂ ಇಲ್ಲ."

"ನಿಮ್ಮ ಮಾತು ಯಥಾರ್ಥವಾಗಿದೆ. ನೀವು ನಿರುದ್ಯೋಗಿಗಳಾಗದೆ ದುಡುಮೆಯವರಾಗಿದ್ದರೆ...." ದುಃಖ ಸಮಯದಲ್ಲೂ ತಾರಾನ ಮುಖದಲ್ಲಿ ತುಂಟು ತುಂಬ ಹಾಸ್ಯವಾಡಿತು.

ನಾನು ಮನೋರಮೆಯನ್ನು ಮದುವೆಯಾಗಿದ್ದರೆ ನೀನು ಇಲ್ಲಿ ಬಗುತ್ತಿರಲಿಲ್ಲ. ನೀನಿಲ್ಲಿ ಬಾರದಿದ್ದರೆ ನಾನು ಮನೆಯಲ್ಲಿರುತ್ತಿರಲಿಲ್ಲ." ಅವಳ ನಗೆಗೆ ವಿಶ್ವಾಸನೂ ಚೇಷ್ಟೆಯ ಉತ್ತರವಿತ್ತ.

"ಈಗ ನನ್ನ ಸಲುವಾಗಿ...."

"ಮನೆಯನ್ನು ತ್ಯಜಿಸಬೇಕಾಗಬಹುದೆಂದು ಬೆದರಿಕೆಯೆ ನಿನಗೆ? ನಾನು ಮನೆಯನ್ನು ಬಿಡುವದು ನಿನ್ನ ಸಲುವಾಗಿ ಅಲ್ಲ ತಾರಾ; ನನ್ನ ಸಲುವಾಗಿ, ನನ್ನ ಮುದ್ದು ಮಕ್ಕಳ ಸಲುವಾಗಿ."

ಹಾಗೇನೂ ಮಾಡಬೇಡಿರಿ. ನಿಮ್ಮ ಕಾಲು ಬೀಳುತ್ತೀನೆ. ಅಕ್ಕನ ಸ್ವಭಾವ ಒಮ್ಮೆ ಹೀಗೆ, ಒಮ್ಮೆ ಹಾಗೆ...."

"ಸರಿ. ಈಗ ನೀನು ಮಲಗು ತಾರಾ. ನಿನ್ನ ದಣಿವಿನಲ್ಲಿ ಇಲ್ಲದ್ದನ್ನು ಯೋಚಿಸುವದು ಬೇಡ."

"ನೀವು?...."

"ಇಷ್ಟು ದಿನ ಮಾಡದ ಯೋಚನೆಯನ್ನು ಮಾಡಬೇಕಾಗಿದೆ."

ತಾರಾ ಬೆದರಿದಳು. ಪತಿಯ ಭಾವನಾಮಯ ಹೃದಯದ ಪರಿಚಯ ಅವಳಿಗೆ ತುಂಬ ಇತ್ತು. ಅವನ ಅನೇಕ ಭಾವಪೂರ್ಣವಾದ ಕವಿತೆಗಳನ್ನೋದಿ ಅವಳು ಅಭಿಮಾನ ತಾಳುತ್ತಿದ್ದಳು. ಆ ಚಿಕ್ಕ ಕತೆಗಳ ಶೈಲಿ ಅವಳನ್ನು ಮೈಮರೆಯಿಸುತ್ತಿತ್ತು. ಆದಕ್ಕಾಗಿಯೆ ಅವಳು ತನ್ನ ಬನ್ನಗಳನ್ನು ಹೇಳಿಕೊಳ್ಳದೆ ಅವನ ಮನದ ನೆಮ್ಮದಿಯನ್ನು ಎಂದೂ ಕಲಕುತ್ತಿರಲಿಲ್ಲ. ಇಂದು ಮಾತು ಈ ಮಟ್ಟಕ್ಕೆ ಬಂದಿದ್ದರಿಂದ ಗಂಡನ ಕ್ಷೇಮ ಚಿಂತನೆಗಾಗಿಯೇ ಅವಳು ತನ್ನ ನಿರ್ಧಾರವನ್ನು ಸೂಚಿಸಬೇಕಾಯಿತು. ಕೂಡಿ ಕಚ್ಚಾಡಿ ಸಾಯುವದಕ್ಕಿಂತ ಸಿಡಿದು ಹೋಗಿ ಅಂತಃ

ಕರಣವನ್ನು ಉಳಿಸಿಕೊಳ್ಳುವದೇ ಮೇಲೆಂದು ಅವಳು ನಿರ್ಧರಿಸಬೇಕಾಯಿತು. ಇಷ್ಟು ದಿನ ತುಂಗಮ್ಮ ಅವಳನ್ನು ಮಾತ್ರ ಛಲಿಸುತ್ತಿದ್ದಳು. ಅದನ್ನು ಅವಳೂ ತಾಳಿಕೊಳ್ಳುತ್ತಿದ್ದಳು. ಈಗ ಛಲನೆ ಗಂಡನ ಪಾಲಿಗೂ ಬಂದಿದ್ದರಿಂದ ತಾರಾ ದೀರ್ಘವಾಗಿ ಯೋಚಿಸಬೇಕಾಯಿತು.

"ತಾರಾ, ಈ ಮನೆಯ ರಿಣ ತೀರಿತೇನೊ?"

"ಛೇ, ನೀವು ಹೀಗನ್ನಬಾರದು. ಈ ಮನೆಯ ರಿಣ ಎಂದಿಗೂ ತೀರದು. ಅಕ್ಕನ ಸ್ವಭಾವ ನಿಮಗೂ ಗೊತ್ತು. ಅವರು ಒಂದು ರೀತಿಯಿಂದ ನಮಗೆ ಉಪಕಾರವನ್ನೇ ಮಾಡತೊಡಗಿದ್ದಾರೆ. ಸ್ವತಂತ್ರರಾಗಿ ಬಾಳಿರೆಂದು ಹೇಳುವದು ಅನ್ಯಾಯವೆ?"

"ಅದನ್ನು ಹೇಳುವ ರೀತಿಯಲ್ಲಿ...."

"ಪಾಪ! ಅವರ ರೀತಿಯೇ ಅವರದು. ನೀವು ಅದನ್ನು ತಿದ್ದಬಹುದೆ?"

"ನಿನ್ನ ಸೌಜನ್ಯ ನಿನಗೊಂದು ದೌರ್ಬಲ್ಯವಾಗಿದೆ ತಾರಾ."

ತಾರಾ ಮಂದವಾಗಿ ನಕ್ಕು ಹೇಳಿದಳು- "ಸಧ್ಯ ಮಲಗಿರಿ. ನಾಳೆ ಮತ್ತೆ ವಿಚಾರಿಸಬಹುದು."

ತಾರಾ ಬಹಳ ದಣಿದಿದ್ದಳು. ಈದಿನ ನಡೆದ ರದ್ಧಾಂತದಿಂದ ಅವಳಿಗೆ ಆಯಾಸವಾಗಿತ್ತು. ಹೇಳಬೇಕಾದ ಒಂದೆರಡು ಮಾತುಗಳನ್ನು ಗಂಡನಿಗೆ ಹೇಳಿಬಿಟ್ಟಿದ್ದರಿಂದ ಅವಳ ಭಾರ ಕಡಿಮೆಯಾಗಿ ದೇಹ ವಿಶ್ರಾಂತಿ ಬಯಸಿತು. ಆದಕ್ಕೆಂದೇ ಅವಳು ಪತಿಗೆ ಮಲಗಲು ಹೇಳಿ ತಾನೊಂದು ದುಪ್ಪಟಿ ಹೊದ್ದುಕೊಂಡು ದೀಪ ಸಣ್ಣದು ಮಾಡಿ ಮಲಗಿದಳು. ಅವಳು ಮಲಗಿದಳು ಮಾತ್ರ. ಆದರೆ ನಿದ್ರೆ ಅವಳ ಸನಿಯದಲ್ಲಿ ಸುಳಿಯಲಿಲ್ಲ. ಮುಸುಕಿನಲ್ಲೇ ಅನೇಕ ಭವಿಷ್ಯ ಚಿತ್ರಗಳನ್ನು ಕಲ್ಪಿಸತೊಡಗಿದಳು. ತಮ್ಮ ಬಾಳು ಸರಾಗವಾಗಿ ಹೇಗೆ ಸಾಗಬಹುದೆಂದು ಚಿಂತಿಸಲಾರಂಭಿಸಿದಳು. "ತುಂಗಮ್ಮನ ಮಾತಿನಂತೆ ಹೊರಬಿದ್ದು ಹೋದರೆ ಸಂಸಾರ ರಥ ಹೇಗೆ ಸಾಗಬೇಕು? ವಿಭಾಗವಾಗಿ ಬರುವ

ಆಸ್ತಿಯಿಂದ ನಾಲ್ಕು ಜೀವಿಗಳ ಕುಟುಂಬ ನಿರ್ವಹಣವಾಗಬಹುದೆ? ಆಗಲಾರದು. ಆದಕ್ಕಾಗಿ ಇವರು ದುಡಿಯಬೇಕು. ಮಡಿದ ಮೈಯಿಂದ ಸಾಹಿತ್ಯ ನಿರ್ಮಾಣವಾಗಲಾರದು. ಅವರಿಗೆ ಅದೇ ಜೀವನವಾಗಿದೆ. ಹಾಗಾದರೆ ಮುಂದಿನ ಗತಿಯೇನು? ಮೊದಲು ಬದುಕಬೇಕು. ಆಮೇಲೆ ಕಾವ್ಯ. ಆಮೇಲೆ ಸಾಹಿತ್ಯ. ಸಾಹಿತ್ಯದಿಂದ ಇವರು ಬದುಕಲಾರರೆ? ಸಾಧ್ಯವಿಲ್ಲ. ಕನ್ನಡ ನಾಡಿನಲ್ಲಿ ಸಾಹಿತಿಗೆ ಜೀವನ ಮಾರ್ಗವಿಲ್ಲ. ಜೀವನದ ಸಮಾಧಿಯನ್ನು ಮಾಡಿ ಸಾಹಿತ್ಯ ನಿರ್ಮಾಣವಾಗಬೇಕು. ಇಲ್ಲವೆ ಸಾಹಿತ್ಯದ ಸಮಾಧಿ ಕಟ್ಟಿ ಜೀವನವನ್ನು ಸಾಗಿಸಬೇಕು. ಆದರೆ..ಇವರು ಸಾಹಿತ್ಯ ನಿರ್ಮಾಣ ಕಾರ್ಯವನ್ನೂ ಸಾಗಿಸಬೇಕು. ಜೀವನ ಮಾರ್ಗ ವನ್ನು ಕಲ್ಪಿಸಿಕೊಳ್ಳಬೇಕು. ಇದು ಹೇಗೆ ಸಾಧ್ಯವಾಗಬೇಕು?...."ತಾರಾ ಮುಸುಕಿನಲ್ಲಿ ಒಂದು ದೀರ್ಘವಾದ ನಿಟ್ಟುಸಿರನ್ನು ಸೂಸಿದಳು. ಆ ಉಸಿರು ತಾಕಿ ಎಚ್ಚರವಾದಂತೆ ವಿಶ್ವಾಸ ಒಮ್ಮೆಲೇ ದೀಪ ದೊಡ್ಡದು ಮಾಡಿ "ತಾರಾ" ಎಂದು ಕೂಗಿದ.

ತಾರಾ ಗಡಬಡಿಸಿ ಎದ್ದು ಕುಳಿತು- "ಇನ್ನೂ ಮಲಗಲಿಲ್ಲವೆ?" ಎಂದು ಕೇಳುತ್ತ ಹತ್ತಿರ ಬಂದಳು.

"ನಾನು ಕೂಳಿಗಾಗಿ ಬಿದ್ದವನೆಂದು ಅತ್ತಿಗೆ ಅನ್ನಬಾರದಾಗಿತ್ತು" ವಿಶ್ವಾಸನ ಆದಾವುದೊ ಆಂತರಿಕ ವೇದನೆ ಈ ಮಾತನ್ನಾಡಿಸಿತು."

"ಅವರಂದರೆಂದು ನೀವೇಕೆ ಮನಸ್ಸಿಗೆ ಹಚ್ಚಿಕೊಳ್ಳಬೇಕು? ಸಿಟ್ಟಿ ನ ಭರದಲ್ಲಿ ಆವರು ಆಡಿರಬಹುದು" –ಪತಿಯಲ್ಲಿ ಹೆಚ್ಚಿನ ಉದ್ರೇಕವ ನ್ನುಂಟು ಮಾಡಬಾರದೆಂದು ತಾರಾ ಸಮಾಧಾನದಿಂದ ಹೇಳಿದಳು.

"ಸಿಟ್ಟಿನ ಭರದಲ್ಲಿ ಕೂಡಾ ಅತ್ತಿಗೆ :ಇಂತಹ ಮಾತುಗಳನ್ನಾಡ ಬಾರದಿತ್ತು ತಾರಾ. ಮನಸ್ಸು ಮಾಡಿದರೆ ನಾನು ಸ್ವತಂತ್ರ ಸಂಸಾರ ಹೂಡಬಲ್ಲೆ." ಅವನಲ್ಲಿ ಮೂಡಿದ ನಿರ್ಧಾರದ ಮಾತಿದು.

"ಇದನ್ನೇ ಕೃತಿಯಲ್ಲಿಳಿಸಿ ತೋರಿಸಿದರೆ ಅಕ್ಕನಿಗೆ ಯೋಗ್ಯ ಉತ್ತರ ಕೊಟ್ಟಂತಾಗಲಿಲ್ಲವೆ?"

ಹೆಂಡತಿಯ ಮಾತನ್ನು ಕೇಳಿ ಅವನು ತುಟಿ ಕಚ್ಚಿಕೊಂಡು ಸುತ್ತಲೂ ನೋಡತೊಡಗಿದ. ಅವನಲ್ಲಿ ಭಾವನೆಗಳ ತಾಕಲಾಟ ಒಂದೇ ಸಮನೆ ಸಾಗಿತ್ತು. ಅವನೊಮ್ಮೆ ಪತ್ನಿಯನ್ನು ನೋಡಿ– "ತಾರಾ, ನೀನು ಕಷ್ಟ ಸಹನೆಗೆ ಸಿದ್ಧವಾಗಬೇಕು" ಎಂದ.

"ಇದು ಕೇಳುವ ಮಾತೆ?" ಎಂದು ನುಡಿದ ತಾರಾನ ಮುಖದಲ್ಲಿ ಪತಿ ಬಯಸುವ ಧೈರ್ಯ ತುಂಬಿತ್ತು.

ಇದೇ ಸಮಯದಲ್ಲಿ ಅಚ್ಯುತರಾಯರ ಕೋಣೆಯನ್ನು ತುಂಗಮ್ಮ ಅಳುತ್ತ ಪ್ರವೇಶಿಸಿದಳು. ಆ ಮಂದವಾದ ದೀಪದ ಬೆಳಕಿನಲ್ಲಿ ಅವರು ಯೋಚನಾ ಪರವಶರಾಗಿ ಸ್ವಸ್ಥವಾಗಿ ಕುಳಿತಿದ್ದರು. ನಿದ್ರೆ ಮಾಡಬೇಕೆಂಬುದನ್ನೇ ಅವರು ಮರೆತಂತಿತ್ತು. ಮನೆಯಲ್ಲಿ ಈಚೆಗೆ ನಡೆಯುತ್ತಿರುವ ಹಗರಣಗಳನ್ನೆಲ್ಲ ನೋಡಿ, ನೋಡಿ ಅವರಿಗೂ ಸಾಕಾಗಿತ್ತು. ಇದಕ್ಕೆ ಹೆಂಡತಿಯ ಅಸಹನೆಯೇ ಮುಖ್ಯ ಕಾರಣವೆಂದು ಅವರಿಗೆನ್ನಿಸಿದರೂ ಅವಳಿಗೆ ಆ ರೀತಿಯಾಗಿ ಹೇಳುವದೂ ಕಠಿಣವಾಗಿತ್ತು. ಇನ್ನೂ ಅನನುಭವಿಯಾದ ತಾರಾನೊಂದಿಗೆ ಕಲಹಕ್ಕೆ ನಿಲ್ಲುವದು ತರವಲ್ಲವೆಂದು ಹೇಳಿದಾಗಲೆಲ್ಲ ಅವರ ಮುಖಕ್ಕೆ ಮಂಗಳಾರತಿಯಾಗುತ್ತಿತ್ತು. ಆದರೆ ಹೀಗೆ ಸುಮ್ಮನೆ ಕುಳಿತುಕೊಂಡು ನೋಡಿದರೆ ಮನೆಯಲ್ಲಿ ನಡೆಯುವ ಈ ರಸಕಸಿಯ ಹೊಗೆಯನ್ನು ಅವರು ಸಹಿಸಿಕೊಳ್ಳಬೇಕಾಗಿತ್ತು. ತಮ್ಮನಿಗೆ ಈ ಮಾತನ್ನು ಹೇಳುವಂತಿಲ್ಲ. ಮಡದಿಗೆ ಹೇಳಿದರೆ ಅವಳುರಿದು ಬೀಳುತ್ತಿದ್ದಳು. ಹೀಗೆ ಅವರ ಪರಿಸ್ಥಿತಿ ಅಡಕೊತ್ತಿನಲ್ಲಿ ಸಿಕ್ಕ ಅಡಿಕೆಯಂತಾಗಿತ್ತು. ಈದಿನ ಹೆಂಡತಿ ತಮ್ಮನಿಗೆ ಆಡಿದ ಮಾತುಗಳನ್ನು ಕೇಳಿ ಅವರಿಗೆ ಬಹಳ ನೋವಾಗಿತ್ತು. ಈ ಮಾತುಗಳು ತಾರಾನ ಮುಖಾಂತರ ಅವನಿಗೆ ತಲುಪುವದು ಖಂಡಿತ. ಇಂತಹ ಮಾತುಗಳನ್ನು ಕೇಳಿ ಅವನೂ ಸುಮ್ಮನಿರಲಾರ. ಯಾವ ಒಂದು ಸಂಗತಿಯನ್ನು ತಪ್ಪಿಸಲು ಅವರು ಪ್ರಯತ್ನಿಸುತ್ತಿದ್ದರೋ ಅದು ಬೇಗ ಬರಬಹುದೆಂದು ಅವರು ತೀರಾ ಕಂಗೆಟ್ಟರು. ಆದದ್ದಾಗಲಿ ಎಂದು ಸುಮ್ಮನೆ ಕುಳಿತುಕೊಳ್ಳುವದು ಈಗವರಿಗೆ ತುಂಬ ದುಸ್ತರವೆನ್ನಿಸತೊಡಗಿತು. ಹೆಂಡತಿಗೆ

ಸಮಾಧಾನ ಹೇಳಿ ದಿನಗಳನ್ನು ಮುಂದೂಡಬಹುದು. ಆದರೆ ಇದರಿಂದ ಸಮಸ್ಯೆಯು ಪರಿಹಾರವೇನೂ ಆಗುವಂತಿರಲಿಲ್ಲ. ಒಮ್ಮೆ ಎಲ್ಲವನ್ನೂ ಸೋದರನೊಡನೆ ಚರ್ಚಿಸಿ ಇತ್ಯರ್ಥ ಮಾಡಿಕೊಂಡು ಮಾರ್ಗವನ್ನು ಸುಲಭ ಮಾಡಿಕೊಳ್ಳಬಹುದೆಂದು ಯೋಚನೆ ಬಂದಾಗ ಅವರಿಗೆಷ್ಟೋ ಸಮಾಧಾನವಾಯಿತು. ಅವರು ಸಮಾಧಾನದ ಉಸಿರನ್ನೆಳೆಯುವ ವೇಳೆಗೆ ಒಳಕ್ಕೆ ಬಂದ ತುಂಗಮ್ಮ ದನಿಯನ್ನು ಎತ್ತರಿಸಿ– "ನನ್ನ ಕಡಿಂದ ಇನ್ನಮ್ಯಾಲ ಮರ್‍ಯ್ಯಾ ಇವರಗೂಡ ಸಂಸಾರ ಮಾಡೂದಾಗೂದುಲ್ಲ ನಮ್ಮಣ್ಣಾ. ಹಾಳ ಮಾಡೂದೇನಾರೆ ಆಳಕಿs ಅದ ಇಲ್ಲೊ? ಮ್ಯಾಲೆ ನನಗೆ ಉಪದೇಶ ಮಾಡತಾಳ. ಚೋಟುದ್ದ ಹುಡಗೀ ಕಡಿಂದ ನಾ ಅನಿಸಿಕೊಳ್ಳೂದಾರ ಎಷ್ಟು? ಏನ ಹಿರೇರ, ಕಿರೇರ;-ಏನದ? ಆದೇನೊ ಅಂತಾರಲಾ ಸಲಗೀ ಕೊಟ್ಟ ನಾಯಿ ತಲಿಗೇರತುಂತ...."

ಅವರು ಹೆಂಡತಿಯನ್ನೊಮ್ಮೆ ತೀಕ್ಷ್ಣವಾಗಿ ನೋಡಿದರು. ಆ ನೋಟದಲ್ಲಿ ಅಡಗಿರುವ ನೋವನ್ನು ಅವರೇ ಬಲ್ಲರು– "ಅವಳು ಎಷ್ಟಂದ್ರೂ ಹುಡುಗಿ ತುಂಗಾ. ಅವಳನ್ನು ನೀನೇ ಸಂಬಾಳಿಸಿಕೊಂಡು ಹೋಗಬೇಕು. ಹೀಗೆ ದಿನಾಲು ನೀವು ಕಚ್ಚಾಡುತ್ತಿದ್ದರೆ ಯಾರಿಗೆ ಸುಖ ಹೇಳು?"

"ಸುಖಾ ಕೊಡೂ ಜೀವೇನವಳದು? ಆಕಿ ಹೇಳಿದಾಂಗ ಅವರು ಕುಣಿತಾರ. ನೀವು ತಾಳಾ ಹಾಕತೀರಿ. ನಾನೇ ಖೊಟ್ಟಿ."

"ಹೆಂಗಸರ ಜಗಳದಲ್ಲಿ ಗಂಡಸರು ಕೈಹಾಕಿ ಏನು ಮಾಡುವದಿದೆ?"

"ಸುಮ್ಮನೆ ಕೂತು ಹೆಂಗಸರ ಜೀವಾ ತಗೋಬೇಕಂತೆ ಮಾಡೀರೇನು ನೀವು?"

"ಏನು ಮಾಡಬೇಕು ನೀನಾರೆ ಹೇಳು."

"ನಾ ಹೇಳಿದಂಗ ಕೇಳಿದ್ದರ ಇಷ್ಟೆಲ್ಲಿ ಆಗತಿತ್ತು? ಸ್ಪಷ್ಟವಾಗಿ ಹೇಳಬೇಕು. ದಿವಸ ಕಾಲ ಕೆಟ್ಟ ಬಂದಾವ. ನಿಮ್ಮ ಸಂಸಾರ ನೀವು ನೋಡಿಕೋರಿ ಅಂತ."

"ಯಾರ ಸಂಸಾರವೆ ಇದು? ಈಗಿರುವದು ಒಂದೇ ಸಂಸಾರ. ತಮ್ಮನ ಸಂಸಾರ ಬೇರೆ ನನ್ನದು ಬೇರೆ ಇದೆಯೆ? ಹೀಗೇಕೆ ಹುಚ್ಚಿಯಂತೆ ಮಾತಾಡುತ್ತೀ?"

"ನಾಹುಚ್ಚಿ, ನೀವು ಮಾತ್ರ ಶಾಣ್ಯಾರು. ಆತಿಲ್ಲೊ ದಿನ ಬೆಳಗಾದರ ನೋಡತೀರಲ್ಲ ಒಂದೇ ಸಂಸಾರದ ಮಾದರಿ."

"ಈ ಮಾದರಿ ಒಳ್ಳೆಯದಲ್ಲ ಅನ್ನೂದನ್ನ ನೀನು ತಿಳಕೋಬೇಕು. ದಿನ ಹೋದಂಗ ಎಲ್ಲಾ ಸುಧಾರಸತದ-ತಿಳಿತಿಲ್ಲೊ?"

"ದಿನಾ ಹೋದಂಗ ನನ್ನ ಹೆಣಾನೂ ಮಲಗತದ. ಅಲ್ಲಿಂದ...."

"ತುಂಗಾ, ನಿನ್ನ ಮನಸ್ಸಿನಲ್ಲಿ ಇರುವದಾದರೂ ಏನು ಹೇಳಿಬಿಡು."

"ಎಷ್ಟು ಸಾರೆ ಹೇಳ್ಲಿ. ಅವರಿಗೆ ಬ್ಯಾರೆ ಹೋಗಲಿಕ್ಕೆ ಹೇಳಿ...."

"ಹಾಗೆ ಹೇಳುವದು ನನ್ನಿಂದ ಸಾಧ್ಯವಿಲ್ಲ."

"ಅವರಗೂಡ ಕೂಡಿ ಇರಲಿಕ್ಕೆ ನನಗೂ ಸಾಧ್ಯ ಇಲ್ಲ ಹೆಂಗಾರ."

ಇಷ್ಟು ಸ್ಪಷ್ಟವಾಗಿ ತುಂಗಮ್ಮ ಎಂದೂ ಹೇಳಿರಲಿಲ್ಲ. ಅವರಿಗೆ ಬರಸಿಡಿಲೆರಗಿದಂತಾಯಿತು. ಅವಳಿಗೆ ಸಮಾಧಾನ ಹೇಳುವಂತೆ- "ಮನೆತನದ ಹಿರಿಯಳು ನೀನು. ನೀನೇ ಹೀಗೆ ಕಟ್ಟಿಗೆ ಮುರಿದಂತೆ ಮಾತಾಡಿದರೆ ನಾಲ್ಕು ಜನರು ಏನಂದಾರು ನೋಡು. ಅವರು ಹೊರಗೆ ಹೋಗಿ ಸಂಸಾರ ಹೂಡುವದು ನಮಗೆ ಮರ್ಯಾದೆಯಲ್ಲ. ಈಗ ಬರುವ ಆಸ್ತಿಯಲ್ಲಿ ಒಟ್ಟಿಗೆ ತಿನ್ನಬಹುದು ತುಂಗಾ. ನಾಳೆ ಅವನು ಎದ್ದು ಹೋದರೆ..ಸಂಸಾರದ ಹರವಿ ಒಡೆದು ಹೋಗಬಹುದು...."

ತಮ್ಮ ಆರ್ಥಿಕ ಪರಿಸ್ಥಿತಿಯ ನಿವೇದನೆಯನ್ನೆ ಮಾಡಿದರು. ಇದರಿಂದಲಾದರೂ ಅವಳು ಸುಮ್ಮನಾಗಬಹುದೆಂದು ಭಾವಿಸಿದ್ದರೇನೊ ಆದರೆ ಅವಳ ನಿಲುಮೆಯೇ ಬೇರೆಯಾಗಿತ್ತೆಂದು ಅವರೇನು ಬಲ್ಲರು' ಅವಳು ಕೂಡಲೇ- "ಇದ್ದ ಆಸ್ತೀ ಎಲ್ಲಾ ಹಾಳಮಾಡಿ ತಮ್ಮನ

ಬಿ. ಎ. ಮಾಡಿಸಿದಿರಿ. ಆವರಿಗೆಲ್ಲಿ ಬರ್ತದಿನ್ನ ಆಸ್ತಿ? ಬಿ. ಎ. ಕಂತ್ರಿ ಹೊಲಾ ಮಾರಿದಿರಿ. ಅವರ ಲಗ್ನಕ್ಕಂತ ತೋಟಾ ಮಾರಿದಿರಿ. ಅವರ ಭಾಗ ಅವರಿಗೆ ಮುಟ್ಟಿ ಹೋಗೇದ. ಅವರೇನು ಬಿ. ಎ. ಅಂದರ ವಸ್ತಾ ಅಂತ ತಿಳದಾರೇನು? ಎಲ್ಲ್ಯಾರ ನೌಕರಿ ಮಾಡ್ಲಿ;-ಚಾಕರಿ ಮಾಡ್ಲಿ."

ಹೆಂಡತಿಯ ಮನಸ್ಥಿತಿಯು ಅರಿವಾಯಿತು ಅವರಿಗೆ. ಅವರು ವ್ಯಗ್ರವಾಗಿ- "ಇದು ಹೆಂಗಸರಿಗೆ ತಿಳಿಯೂ ಮಾತಲ್ಲ. ಹೆಚ್ಚು ಮಾತಾ ಡದ ಸುಮ್ಮನ ಮಲಕೋ. ಒಣ ಕಾರಭಾರ ಮಾಡಿ...."

"ಕಾರಭಾರ ಮಾಡಿ ದರಿದ್ರ ಹೆಣ್ಣ ತಂದು ಮನೀ ಒಳಗ ಕುಕ್ಕ ರಿಸಿಕೊಂಡವರು ಮಂದಿಗೆ ಕಾರಭಾರ ಮಾಡಬ್ಯಾಡಂತ ಹೇಳಬಾರದು. ನಂದೇನ ಹೋಗ್ತದ. ಆಕಿನ್ನ ಮುಂದೆ ಕೂಡ್ರಿಸಿಕೊಳ್ಳಿರಿ. ಆಕಿ ಸಂಸಾ ರನೂ ಮಾಡ್ರಿ. ನನ್ನ ಮಕ್ಕಳ ಕೈಯಾಗ ಸರಟೀ ಕೊಡರಿ. ಅಂದರಾರೆ ನಿಮಗ ಸಮಾಧಾನಾಗತಏಲ್ಲೊ?"

ಪತ್ನಿಯ ತೀಕ್ಷ್ಣವಾದ ನಾಲಿಗೆಯೊಂದಿಗೆ ಹೋರಾಡುವದರಲ್ಲಿ ಯಾವ ಅರ್ಥವೂ ಇಲ್ಲವೆಂದು ಅವರಿಗೆ ಸ್ಪಷ್ಟವಾಯಿತು. ಅದಕ್ಕಾಗಿಯೆ ಅವರಾಗ ಹೆಚ್ಚಿಗೆ ಮಾತು ಬೆಳೆಯಿಸದೆ ಮುಸುಕೆಳೆದುಕೊಂಡರು. ಅವಳು ಬಹಳ ಹೊತ್ತಿನ ವರೆಗೆ ಮಲಗಲೇ ಇಲ್ಲ. ಒಂದೇ ಸವನೇ ಒಟಗುಡುತ್ತ ಏನನ್ನೋ ಮಾತನಾಡುತ್ತಿದ್ದಳು. ಆ ಮಾತುಗಳನ್ನೆಲ್ಲ ಅವರು ಮುಸು ಕಿನಲ್ಲಿಯೇ ಪಿಟ್ಟೆನ್ನದೆ ಕೇಳುತ್ತಿದ್ದರು. ತನ್ನ ಮಾತುಗಳನ್ನು ಅವರು ಕೇಳುತ್ತಿರುವರೆಂಬ ಅರಿವು ಅವಳಿಗೂ ಇತ್ತು. ಕೊನೆಗೆ ಅವಳು ಹೇಳಿದಳು- "ನಿಮ್ಮ ಕಡೆಯಿಂದ ಹೇಳುವದಾಗದಿದ್ದರೆ ನಾನೇ ಹೇಳಿಬಿಡು ತ್ತೇನೆ ಭಾವಜಿ ಎಂಬ ಮಾತು ಮಾತ್ರ ಅವರ ಹೃದಯಕ್ಕೆ ಶಲ್ಯದಂತೆ ನಟ್ಟಿತು. ಅವರು ಹೊದ್ದ ಮುಸುಕನ್ನು ಬಿರ್ರನೆ ಸರಿಸಿ ಎದ್ದು ಕುಳಿ ತರು. ದೀಪವನ್ನು ದೊಡ್ಡದು ಮಾಡಿ ಹೆಂಡತಿಯನ್ನು ಹರಿದು ತಿನ್ನುವಂತೆ ದುರದುರನೆ ನೋಡುತ್ತ- "ಹಾಗೆ ನೀನು ಹೇಳಿದೆಯಾದರೆ ನಾನೇ ಮನೆ ಬಿಟ್ಟು ಎದ್ದು ಹೋಗಿಬಿಡುತ್ತೇನೆ. ಈ ಉದ್ಧಟತನ

ವನ್ನು ಸಹಿಸುವದು ನನ್ನಿಂದ ಶಕ್ಯವಿಲ್ಲ" ಎಂದು ಹೇಳಿ ಕಣ್ಣು ಕೆಂಪಗೆ ಮಾಡಿದರು.

ಗಂಡನ ಮಾತಿನಿಂದ ಅವಳಿಗೆ ಅವಮಾನವಾದಂತಾದರೂ ಹರಿಯುವವರೆಗೆ ಹಗ್ಗವನ್ನು ಜಗ್ಗಬಾರದೆಂದು ತನ್ನ ಕೋಪವನ್ನು ಹತ್ತಿಕ್ಕಿಕೊಂಡಳು. ಅದೇ ಹೊತ್ತಿನಲ್ಲಿ ಸುಮನಾ ಗಡಗಡ ಉರುಳುತ್ತ ಹಾಸಿಗೆಯನ್ನು ದಾಟಿದಳು. ತುಂಗವ್ವ ಅವಳನ್ನು ದರದರನೆ ಎಳೆದು ತಂದು ಹಾಸಿಗೆಯ ಮೇಲೆ ಮಲಗಿಸಿ ರಪರಪನೆ ತಟ್ಟತೊಡಗಿದಳು. ಅದು ಪ್ರೀತಿಯ ಚುಕ್ಕು ಆಗಿರಲಿಲ್ಲವೆಂದು ತಿಳಿದ ಕೂಸು ಒಂದೇಸಮನೆ ಚೀರತೊಡಗಿತು. "ಸುಮ್ಮನೆ ಬೀಳು ನಿನ್ನ ಸುಟ್ಟಬರ್ಲಿ" ಎನ್ನುತ್ತ ತುಂಗವ್ವ ಅದಕ್ಕೆರಡು ಬಿಗಿದಳು. ಅವರಿಗೆ ಹೆಂಡತಿಯ ಕೋಪದ ಅರ್ಥವಾಯಿತು. ಅವಳನ್ನು ಮತ್ತೆ ತಡವಿ ಮಕ್ಕಳ ಪ್ರಾಣವನ್ನು ಗಂಡಾಂತರದಲ್ಲಿ ನೂಕುವದು ಬೇಡವಾಯಿತು.

ಆ ರಾತ್ರಿ ಬಹಳ ಹೊತ್ತಿನವರೆಗೆ ಅಣ್ಣ-ತಮ್ಮಂದಿರ ಕೋಣೆಗಳಲ್ಲಿ ದೀಪ 'ಢಾಳಾ'ಗಿ ಉರಿಯುತ್ತಿದ್ದವು. ಯಾರೂ ಕಣ್ಣಿಗೆ ಕಣ್ಣು ಹಚ್ಚಿದಂತೆ ತೋರಲಿಲ್ಲ. ಒಂದು ಕೋಣೆಯಲ್ಲಿ ರಾಯರು ನಿಟ್ಟುಸಿರು ಸೂಸುತ್ತಿದ್ದರೆ ಇನ್ನೊಂದು ಕೋಣೆಯಲ್ಲಿ ವಿಶ್ವಾಸ ತನ್ನ ಭಾವೀಜೀವನದ ಹೊಳಹನ್ನು ಹಾಕುವದರಲ್ಲಿ ಮಗ್ನನಾಗಿದ್ದ. ಒಂದಿಲ್ಲೊಂದು ರೀತಿಯಲ್ಲಿ ಅವರಿಬ್ಬರೂ ಚಡಪಡಿಸುತ್ತಿದ್ದರು. ವಿಶ್ವಾಸನಲ್ಲಿ ಒಂದು ನಿರ್ಧಾರ ಮೂಡಿ ನಿಂತಿತ್ತು. ರಾಯರಲ್ಲಿ ಏನಾದರೂ ಇತ್ಯರ್ಥವಾಗಬೇಕೆಂಬ ಮನೋಗತವು ಬಲಿಯತೊಡಗಿತ್ತು. ಅದಕ್ಕಾಗಿ ಇಬ್ಬರೂ ಬೆಳಗಿನ ದಾರಿ ಕಾಯುತ್ತಿದ್ದರು.

ಮೂಡಣ ದಿಕ್ಕಿನಲ್ಲಿ ಕೆಂಪು ಹರಿದು ಬೆಳಗು ಸನ್ನಿಹಿತವಾಯಿತೆಂದು ಸಾರುವ ಕೋಳಿಗಳ ದನಿ ಕೇಳಿಬರುವದಕ್ಕೆ ಮೊದಲೇ ತುಂಗವ್ವ ಎದ್ದು ಹೋಗಿದ್ದಳು. ಹೊಸ್ತಿಲ ಸಾರಣಿಯನ್ನು ಮುಗಿಸಿ ಹಿತ್ತಲಲ್ಲಿರುವ ತುಳಸೀ ಕಟ್ಟೆಗೆ ತಳೀ ಹಾಕಿ ಇದ್ದಿಲುವಲಿಯನ್ನು ಹೊತ್ತಿಸಿ ಚಹಾ

ಕ್ಕಾಗಿ ಎಸರಿಟ್ಟವಳು. ಅವಳ ನಿತ್ಯಕ್ರಮ ಯಾವ
ಸಾಗಿತ್ತು. ಅಕ್ಕ ಎದ್ದ ಸುಳಿವನ್ನು ತಿಳಿದ ತಾರಾ ಭಾರವಾದ ಹೆಜ್ಜೆ
ಗಳನ್ನು ತೂರಿಕೊಳ್ಳುತ್ತ ಸಾವಕಾಶವಾಗಿ ಹೋಗಿ ಮೊಗ ತೊಳೆದುಕೊಂಡು
ಬಂದು ಎಸರಿಟ್ಟ ನೀರಿಗೆ ಸಕ್ಕರೆ, ಪುಡಿ ಹಾಕತೊಡಗಿದಳು. ಇದೂ
ಅವಳ ನಿತ್ಯ ಕ್ರಮವೇ ಆಗಿತ್ತು. ದಿನಾಲು ಚಹವನ್ನು ಎರಡು ಬಟ್ಟ
ಲಗಳಿಗೆ ಸುರುವಿ ಪಡಸಾಲೆಗೆ ತಂದಿಡುವ ಕೆಲಸ ಅವಳದೇ ಆಗಿತ್ತು.
ಅಣ್ಣ, ತಮ್ಮ ಜತೆಯಾಗಿ ಅಲ್ಲೇ ಕುಳಿತು ಚಹ ಕುಡಿಯುವ ಪರಿ
ಪಾಠ ಹಳೆಯದಾಗಿತ್ತು. ಈ ದಿನ ಇದೇ ಹೊತ್ತಿನಲ್ಲಿ ಅಣ್ಣನನ್ನು ಕೇಳಿ
ಬಿಡಬೇಕೆಂಬ ತವಕದಲ್ಲಿ ವಿಶ್ವಾಸ ಆಗಲೆ ಅಲ್ಲಿಗೆ ಬಂದಿದ್ದ. ಅಣ್ಣ
ಇನ್ನೂ ಬಂದಿರಲಿಲ್ಲ. ತಾರಾ ಬಿಸಿನೀರನ್ನು ಅವರಿಗಾಗಿ ಇಟ್ಟು ಹೋದಳು.
ಆದರೆ ರಾಯರಿನ್ನೂ ಹೊರಗೆ ಬರಲಿಲ್ಲ. ವಿಶ್ವಾಸ ಕೋಣೆಯಲ್ಲಿ ಹಣಿ
ಕಿಕ್ಕಿದಾಗ ಅವರು ತೆಪ್ಪಗೆ ಕುಳಿತುಬಿಟ್ಟಿದ್ದರು. ಅತ್ತಿಗೆಯ ಪ್ರಭಾವ
ಅಣ್ಣನ ಮೇಲೂ ಆಗಿರಬೇಕೆಂದು ಅವನು- "ಚಹ ಕೋಣೆಯಲ್ಲಿಯೇ
ತರಲೇನಣ್ಣ?" ಎಂದ. ಅವರಿಂದ ಯಾವ ಉತ್ತರವೂ ಬಾರದ್ದರಿಂದ
ತಾನೇ ಚಹವನ್ನು ತೆಗೆದುಕೊಂಡು ಒಳಕ್ಕೆ ಹೋಗಿ ಅಣ್ಣನಿಗೆ ನೀಡಿದ
ಅವನ ಕೈಯೂ ನಡುಗುತ್ತಿತ್ತು. ತೆಗೆದುಕೊಳ್ಳುವ ಆ ಕೈಯೂ ನಡು
ಗುತ್ತಿತ್ತು. ಹೀಗೇಕೆಂದು ಕೇಳುವವನಂತೆ ಅವನು ಮುಖವೆತ್ತಿ ನೋಡಿದ.
ಅಣ್ಣನ ಕಣ್ಣಾಲಿಗಳು ತುಂಬಿ ತುಳುಕುತ್ತಿದ್ದವು. ಅವರ ಈ ಕಣ್ಣ
ಹನಿಗಳನ್ನು ಕಂಡು ಅವನು ಝುರ್ರನೆ ಇಳಿದು ಹೋದ. ಮಾತು
ಗಂಟಲಲ್ಲಿಯೇ ಉಳಿದವು. ಆಗ ಅವನಿಗೆ ಕಂಡ ಅಣ್ಣ ಅಂತಃಕರಣದ
ಮೂರ್ತಿಯಾಗಿದ್ದಾನೆ ವಿನಾ ಅತ್ತಿಗೆಯ ಗಂಡನಾಗಿರಲಿಲ್ಲ. ಅವನ
ಹೃದಯ ತುಂಬಿಬಂದಿತು. ಕಣ್ಣು ಹನಿಗೂಡಿತು- "ಅಣ್ಣ" ಎಂದ.

ರಾಯರು ಮೌನವಾಗಿದ್ದರು. ಕಣ್ಣುಗಳಂಚಿನಲ್ಲಿ ತುಂಬಿ ನಿಂತ ಕಂಬನಿ
ಗಳು ತಮ್ಮನ ದನಿಗೆ ಮರುಕಗೊಂಡಂತೆ ಉರುಳಿದವು. ವಿಶ್ವಾಸ ಗಡ
ಬಡಿಸಿದ ಬಹಳ ಹೊತ್ತಿನ ವರೆಗೆ ಅವರಿಬ್ಬರೂ ಮೌನವಾಗಿದ್ದರು.
ಯಾರು ಮೊದಲು ಮಾತಿಗಾರಂಭಿಸಬೇಕೆಂದು ಇಬ್ಬರಿಗೂ ತಿಳಿಯದಾಗಿತ್ತು.

ಕೊನೆಗೆ ನಿಶ್ವಾಸ ಕಣ್ಣೊರೆಯಿಸಿಕೊಂಡು ಅರ್ಧಮರ್ಧ ಸ್ವರದಲ್ಲಿ—"ನನ ಗಾಗಿ ಇನ್ನು ಮೇಲೆ ಈ ಕೊರಗು ಬೇಡಣ್ಣ. ನಾವು ಕೂಡಿ ಇರು ವದು ಅತ್ತಿಗೆಗೆ ಬೇಡವಾಗಿದೆ. ನನ್ನನ್ನು ಆಶೀರ್ವದಿಸಿ ಕಳುಹಿಸಿಬಿಡು. ಹೊರಗಿದ್ದುಕೊಂಡು ಅಂತಃಕರಣವನ್ನು ಉಳಿಸಿಕೊಳ್ಳೋಣ. ಸುಮ್ಮನೆ ಮನೆಯಲ್ಲಿದ್ದುಕೊಂಡು ಈ ದೃಶ್ಯವನ್ನು ನೋಡುವದು ನಿನಗೂ ಒಳ್ಳೇ ಯದಲ್ಲ. ನನಗೂ.." ಅವನು ತನ್ನ ಮೋರೆಯನ್ನು ಬೇರೆಡೆಗೆ ತಿರು ಗಿಸಿದ. ಅವನ ಕಣ್ಣೊಳಗಿಂದ ಅಶ್ರುಗಳು ಹೊರಹೊಮ್ಮಿದವು.

ಈ ವೇಳೆಗೆ ಅವರ ಉದ್ವೇಗ ಕಡಿಮೆಯಾಗಿದ್ದರಿಂದ ತಮ್ಮನೊಂ ದಿಗೆ ಮಾತನಾಡಲು ಅವರು ಗಂಟಲು ಸರಿಪಡಿಸಿಕೊಂಡರು— "ನಿನಗೆ ಮನೆಯಲ್ಲಿ ನಡೆಯುತ್ತಿರುವದೆಲ್ಲ ಅರ್ಥವಾಗುತ್ತಿದೆ, ತಮ್ಮ. ಆದರೆ ನೀನು ಹೊರಗೆ ಹೋಗುವದು ನನಗಿಷ್ಟವಿಲ್ಲ"

"ನಾವು ಹೊರಗೆ ಹೋಗದಿದ್ದರೆ ಈ ರಂಬಾಟ ನಿಲ್ಲುವಂತಿಲ್ಲ ಅಣ್ಣ. ಇದರಿಂದ ಯಾರ ಜೀವಕ್ಕೆ ಸುಖ ಹೇಳು. ನಾನು ಕೂಳಿಗೆ ಬಿದ್ದ ನಾಯಿಯೆಂದು ಅತ್ತಿಗೆ ಅನ್ನತೊಡಗಿದ್ದಾರೆ. ಈ ಮಾತನ್ನು ಕೇಳುತ್ತ ನಾನೆಷ್ಟು ದಿನ ಬಾಳಬಹುದು ನೀನೇ ಹೇಳು."

"ಹೆಂಗಸರ ಅಜ್ಞಾನದ ಮಾತನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರದು ವಿಶೂ. ಕೇವಲ ಭಾವನಾ ಪರವಶರಾಗಿ ಇಲ್ಲದ ಅಡಚಣಿಗಳನ್ನು ಮೈಮೇಲೆ ಹಾಕಿಕೊಳ್ಳುವದರಲ್ಲಿ ಯಾವ ಜಾಣತನವಿದೆ ಹೇಳು? ನಮ್ಮ ಉತ್ಪನ್ನ ಎರಡು ಸಂಸಾರಗಳಿಗೆ ಸಾಲುವಂತಿಲ್ಲ. ಇದ್ದದರಲ್ಲಿಯೆ ಎಲ್ಲರೂ ಕೂಡಿ ಹಾಯಾಗಿ ಬಾಳಬಹುದಾಗಿದೆ."

"ಸಾಧ್ಯವಿಲ್ಲದ ಮಾತುಗಳ ಚರ್ಚೆಯಿಂದೇನೂ ಉಪಯೋಗವಿಲ್ಲಣ್ಣ ನೀನು ಕೈಯೆತ್ತಿ ಕೊಡುವ ಒಂದು ಕಾಸಿನಲ್ಲಿಯೇ ನಾನು ಬಾಳುತ್ತೇನೆ ನನಗಾಗಿ ಮೀಸಲಿದ್ದ ಆ ಭತ್ತದ ಗದ್ದೆಯನ್ನು ಕೊಟ್ಟುಬಿಡು. ಉಳಿದ ದೆಲ್ಲ ನಿನ್ನದೇ ಆಗಲಿ. ನಿನ್ನ ಪ್ರಪಂಚಕ್ಕೆ ಖರ್ಚು ಬಹಳ. ನನ ಹೆಚ್ಚಿನ ಆಶೆಯಿಲ್ಲ"

ತಮ್ಮನ ಮಾತನ್ನು ಕೇಳಿ ಅವರಿಗೆ ಸಂಕಟವೇ ಆಯಿತು. ಈ ಹತ್ತು ವರ್ಷಗಳಲ್ಲಿ ನಡೆದು ಹೋದ ಆರ್ಥಿಕ ಅವಾಂತರವನ್ನು ಅವರು ಈಗ ಹೇಳಲೇಬೇಕಾದ ಸಂದರ್ಭ ಬಂದುದಕ್ಕೆ ಮರುಗಿದರು. ಈಗ ಹೇಳದೆ ನಡೆಯುವಂತಿರಲಿಲ್ಲ. ಹಿರಿಯರಿಂದ ಬಂದ ಹದಿನೈದುನೂರು ರೂಪಾಯಿಗಳ ಆಸ್ತಿ ದಿನದಿನವೂ ಕರಗಿಹೋದುದನ್ನು ಅವರು ದುಃಖ ದಿಂದ ನೆನೆಯತೊಡಗಿದರು. ಇಷ್ಟು ದಿನ ತಾವೇ ಮೇಲ್ವಿಚಾರಕರಾಗಿ ದ್ದುದರಿಂದ ಈ ಹೊಣೆಯೆಲ್ಲ ತಮ್ಮದೇ ಎಂಬುದನ್ನವರು ಅರಿತಿದ್ದರು. ಒಳ್ಳೆಯದಿನಗಳು ಬರಬಹುದೆಂದು ನಂಬಿದ್ದರು. ಆದರೆ ಕೇವಲ ಉತ್ಪನ್ನದ ಮೇಲೆಯೇ ಕೈಯೂರಿದ ಅವರು ಅದನ್ನು ಮುರಿಸಿಯೇ ತಿನ್ನುವ ಪ್ರಸಂಗ ಬಂದದ್ದು, ಅವರ ಬೆಳೆದ ಸಂಸಾರದ ಹೊಟ್ಟೆ ದಿನದಿನವೂ ಅಗಲವಾಗಿದ್ದು, ಇತ್ತೀಚೆಗೆ ರೈತರು ಕೊಡುವ ಬಾಕಿಯನ್ನೂ ಕೊಡದೆ ಇದ್ದದು—ಎಲ್ಲವೂ ಅವರ ಕಣ್ಣೆದುರು ಬಂದಿತು. ತಮ್ಮ ಮನೆತನದ ಅರಿವನ್ನು ತಮ್ಮನಿಗೆ ಮಾಡಿಕೊಡಬೇಕೆಂದು ಅವರು ಅನೇಕ ಸಲ ಇಚ್ಛಿಸಿದ್ದರು. ಆದರೆ ಎಲ್ಲವೂ ಸರಿ ಹೋದ ಮೇಲೆ ತಿಳಿಸಬೇಕೆಂದು ಸುಮ್ಮನಿದ್ದರು. ಪರಿಸ್ಥಿತಿ ಸುಧಾರಿಸಲಿಲ್ಲ; ತಮ್ಮನ ಮನಸ್ಸನ್ನು ಕುಗ್ಗಿಸುವ ಮನಸ್ಸನ್ನೂ ಅವರು ಮಾಡಲಿಲ್ಲ. ಕಲಿಯುತ್ತಿರುವ ತಮ್ಮನಿಗೆ ಈ ತೊಂದರೆ ಬೇಡವೆಂದು ದಿನವನ್ನು ಮುಂದೂಡುತ್ತಲಿದ್ದರು. ಈದಿನ ಅವರಿಗೆ ಎಲ್ಲ ಮಾತುಗಳನ್ನೂ ಹೇಳಬೇಕೆಂದೆನ್ನಿಸಿತು. ತಮ್ಮ ಮೇಲ್ವಿಚಾರಣೆಯಲ್ಲಿ ಮನೆತನದ ಆರ್ಥಿಕ ಸ್ಥಿತಿ ಹೇಗೆ ಕಂಗೆಟ್ಟಿತೆಂಬುದನ್ನು ಹೇಳುವ ಮಾತು ಅವರಿಗೆ ಪ್ರಿಯವಾಗಿರಲಿಲ್ಲ.

ರಾಯರ ಈ ಪ್ರಾಪಂಚಿಕ ತೊಂದರೆಯ ಪರಿಚಯವಿದ್ದ ಇನ್ನೊಂದು ವ್ಯಕ್ತಿಯೆಂದರೆ ತುಂಗಮ್ಮ. ಅವಳು ಆಗಾಗ ರಾಯರಿಗೆ ಎಚ್ಚರವನ್ನು ಕೊಡುತ್ತಿದ್ದಳು. ಸಾಲ ತರುವ ಉನ್ಮಾದದಲ್ಲಿ ರಾಯರು ಆ ಮಾತು ಗಳನ್ನು ಅಷ್ಟು ಕಿವಿಯ ಮೇಲೆ ಹಾಕಿಕೊಳ್ಳುತ್ತಿರಲಿಲ್ಲ. ಈ ಮಧ್ಯೆ ಅವರ ತೊಂದರೆ ನಿವಾರಣೆಯಾಗುವ ಒಂದು ಸಂದರ್ಭವೂ ಬಂದಿತ್ತು. ಅದಕ್ಕೆ ತುಂಗಮ್ಮ ಬಹುಮಟ್ಟಿಗೆ ಕಾರಣವಾಗಿದ್ದಳು. ಆದರೆ ಆ

ಮಾತೂ ಫಲಿಸಲಿಲ್ಲ. ಅವಳ ತವರಿನ ಬಳಗದವರಾದ ಮಾಧವರಾಯ ರಿಗೆ ಒಬ್ಬಳೇ ಮಗಳು ಮನೋರಮೆ. ಅವರು ಒಳ್ಳೇಯ ಹುಡುಗ ನೊಬ್ಬನಿಗೆ ಧಾರೆಯೆರೆದು ಕೊಟ್ಟು ಅವಳ ಸಲುವಾಗಿ ಐದು ಸಾವಿರ ರೂಪಾಯಿಗಳನ್ನೂ, ಐದು ನೂರು ರೂಪಾಯಿ ಬರುವ ಒಂದು ಗದ್ದೆ ಯನ್ನೂ ಕೊಡುವ ನಿಶ್ಚಯ ಮಾಡಿ ಸಂಬಂಧವನ್ನು ಹುಡುಕಾಡುತ್ತಿದ್ದರು. ಅವಳ ಮೈದುನನಾದ ವಿಶ್ವಾಸ ತಕ್ಕ ವರನೆಂದು ಗ್ರಹಿಸಿ ಸಂಬಂಧವನ್ನು ಬೆಳೆಯಿಸಿಕೊಳ್ಳುವ ಆತುರ ತೋರಿದರು. ರಾಯರೂ ಈ ಸಂಬಂಧವನ್ನು ಬಹಳವಾಗಿ ಮೆಚ್ಚಿದರು. ಎಲ್ಲವೂ ನಿಷ್ಕರ್ಷೆಯಾಗಿ ಮದುವೆ ಮುಹೂರ್ತ ವನ್ನು ನಿಶ್ಚಯಿಸುವದಷ್ಟೆ ಬಾಕಿಯಿತ್ತು. ಆ ವೇಳೆಗೆ ಕಾಲೇಜಿನಲ್ಲಿ ಕಲಿಯುತ್ತಿದ್ದ ವಿಶ್ವಾಸನ ಪತ್ರ ಬಂದು ಎಲ್ಲವೂ ತಲೆ ಕೆಳಗಾಯಿತು. ಅವನು ಆ ಪತ್ರದಲ್ಲ ಮನೋರಮೆಯನ್ನು ತಾನು ಖಂಡಿತ ಮಾಡಿ ಕೊಳ್ಳುವದಿಲ್ಲವೆಂದೂ, ಲಗ್ನವನ್ನು ಮಾಡಕೊಳ್ಳುವ ವಿಚಾರವೇ ಇಲ್ಲ ವೆಂದೂ, ಒಂದು ವೇಳೆ ಅಂತಹ ಸಮಯ ಬಂದರೆ ನೆರೆಮನೆಯ ಗೋದಪ್ಪನ ಮಗಳು ತಾರಾಳನ್ನೇ ಮದುವೆಯಾಗುವೆನೆಂದೂ ಸ್ಪಷ್ಟವಾಗಿ ತಿಳಿಸಿದ್ದ. ಅಚ್ಯುತರಾಯರು ಕಂಗೆಟ್ಟು ಧಾರವಾಡಕ್ಕೆ ಧಾವಿಸಿದರು. ತಮ್ಮನಿಗೆ ಮನೋರಮೆಯ ಸೌಂದರ್ಯ, ಅವಳಿಂದ ಬರುವ ಆಸ್ತಿ ಎಲ್ಲವನ್ನೂ ಹೊಗಳಿ ಅವನ ಮನಸ್ಸನ್ನು ಪರಿವರ್ತಿಸಲೆತ್ನಿಸಿದರು. ಆದರೆ ಅವರ ಮಾತು ನಡೆಯಲಿಲ್ಲ. ಅವನು ತನ್ನ ಹಟ ಬಿಡಲಿಲ್ಲ. ಇನ್ನು ಹೆಚ್ಚು ಜಗ್ಗುವದರಲ್ಲಿ ಯಾವ ಅರ್ಥವೂ ಇಲ್ಲವೆಂದು ಗ್ರಹಿಸಿ ರಾಯರು ಮರಳಿದರು. ತುಂಗಮ್ಮ ಉರಿದು ಬಿದ್ದಳು. ಅಂದಿನಿಂದಲೇ ಅವಳು ತಾರಾ, ಅವಳ ತಾಯಿ—ಇಬ್ಬರ ಮೇಲೂ ಕಿಡಿಕಾರಹತ್ತಿದಳು. ಈ ಸಂಬಂಧ ಆಗದಂತೆ ಅವಳು ಮಾಡಿದ ಪ್ರಯತ್ನ ವ್ಯರ್ಥವಾಗಿ ವಿಶ್ವಾಸ ತಾರಾಳ ಪತಿಯಾದ. ಇದರಿಂದಲಂತೂ ಅವಳು ತೀರಾ ಕಂಗೆಟ್ಟಳು. ಈ ಮದುವೆ ತನ್ನ ಹಿರಿಯತನದ ಸೋಲೆಂದು ಅವಳು ಮನಗಂಡಳು. ಆ ಸೋಲು ಅವಳಲ್ಲಿ ದಿನದಿನವೂ ಹೊಗೆಯನ್ನೆಬ್ಬಿಸುತ್ತಿತ್ತು. ತನ್ನ ಕೋಪದ ಪ್ರಭಾವದಿಂದ ಪತಿಯ ಮನಸ್ಸು ನೊಂದೀತೆಂದು ಅವಳದನ್ನು ಹತ್ತಿಕ್ಕಲು ಐದಾರು ವರುಷಗಳಿಂದ ಪ್ರಯತ್ನಿಸಿದ್ದಳು. ಆದರೆ ಹತ್ತಿಕ್ಕಿದ

ಆ ಭಾವ ಎಷ್ಟುದಿನ ಒಳಗೇ ಉಳಿಯಬಲ್ಲುದು? ಸಧ್ಯದ ಈ ವಾತಾವರಣದ ಹಿನ್ನೆಲೆಯನ್ನು ರಾಯರು ಚನ್ನಾಗಿ ತಿಳಿದಿದ್ದರು, ಸೋದರ ವಾತ್ಸಲ್ಯದಲ್ಲಿ ಅವರೆಲ್ಲವನ್ನೂ ಸಹಿಸಿದ್ದರು;- ಸಹಿಸುತ್ತಿದ್ದರು. ಆದರೆ ಅವರ ಸಹನೆ ಅವರ ಪತ್ನಿಗಿಲ್ಲವಾಯಿತು. ತಾರಾನನ್ನು ಕಂಡಾಗಲೆಲ್ಲ ಅವಳಿಗೆ ತನ್ನ ಸೋಲಿನ ನೆನಪಾಗುತ್ತಿತ್ತು. ತಾರಾ ಅವಳ ಮನಸ್ಸನ್ನೊಲಿಸಲು ತುಂಬ ಪ್ರಯತ್ನಿಸಿದಳು. ಆದರೆ ತುಂಗಮ್ಮ ತನ್ನ ಕೋಪ, ತಿರಸ್ಕಾರಗಳನ್ನು ಬಿಟ್ಟುಕೊಡಲಿಲ್ಲ.

ಹಿಂದೆ ಪ್ರಾಪಂಚಿಕ ತೊಂದರೆಯನ್ನು ಸಹಿಸಿದ ರಾಯರಿಗೆ ಈದಿನ ನಡೆದು ಹೋದ ಸಂದರ್ಭದ ಅರಿವು ಮರುಕಳಿಸಿತು. ಅದನ್ನವರು ಹತ್ತಿಕ್ಕಿಕೊಂಡು- "ಈಗ ಉಳಿದುದು ಅದೊಂದೇ ಗದ್ದೆ ತಮ್ಮ" ಎಂದು ನುಡಿದು ಸಂಕಟ ತುಂಬಿದವರಾದರು. ಅವರು ಈ ಮಾತನ್ನು ಹೇಳುವಾಗ ಆದ ಮನದ ನೋವು ಮುಖದ ಬಣ್ಣ ಬದಲಿಸಿತು.

ಅಣ್ಣನ ಮಾತನ್ನು ಕೇಳಿ ವಿಶ್ವಾಸನಿಗೆ ಸಿಡಿಲೆರಗಿದಂತಾಯಿತು. ತನ್ನ ಮನೆತನ ಈ ಪರಿಸ್ಥಿತಿಗಿಳಿದ ಮಾತು ತೀರಾ ಹೊಸದಾಗಿ ತೋರಿತು. ಈ ಹತ್ತು ವರುಷಗಳಲ್ಲಿ ಯಾವ ವಿಚಾರವನ್ನು ಕುರಿತೂ ಅವನು ವಿಚಾರಿಸಿರಲಿಲ್ಲ. ಕಾಲೇಜ ದಿನಗಳಲ್ಲಿ ಕಳೆಯುವದಾಯಿತು, ತಾನಾಯಿತು. ತನಗಾಗಿ ಹಿರಿಯರು ಗಳಿಸಿಟ್ಟ ಉತ್ಪನ್ನ ಸಾಕಷ್ಟಿದೆ ಎಂದೇ ಅವನ ನಂಬಿಕೆ. ಡಿಗ್ರಿ ಪಡೆದು ಮರಳಿ ತಾರಾನ ಕೈಹಿಡಿದು ಮನೆಯಲ್ಲಿ ನೆಲಸಿದ ಮೇಲೂ ಅವನಿಗೆ ಹಿರಿಯರ ಪುಣ್ಯವೇ ಆಸರವೆನ್ನಿಸಿತು. ಈ ಭಾವನೆಯಲ್ಲಿ ಅವನು ಹಾಯಾಗಿ ಜೀವಿಸುತ್ತ ಯಾವ ನೌಕರಿಗಾಗಿಯೂ ಆಶಿಸದವೆ ತನ್ನ ಜೀವನವನ್ನು ಸಾಹಿತ್ಯಕ್ಕೆ ಮೀಸಲಿರಿಸಿಬಿಟ್ಟ. ಜೀವನವೂ ಕಾವ್ಯವೆಂದು ಬಗೆದು ಯಾವಾಗಲೂ ಕಾವ್ಯಮಯ ವಾತಾವರಣದಲ್ಲಿ ಕಲ್ಪನಾ ಜೀವಿಯಾಗಿ ಬಾಳತೊಡಗಿದ. ಅನೇಕ ಕವನಗಳನ್ನು ಬರೆದು ಕತೆಗಳನ್ನು ನಿರ್ಮಿಸಿ ಜನಮೆಚ್ಚಿಗೆ ಪಡೆದ. ಅವನ ಬರಹಗಳಿಲ್ಲದ ಮಾಸ ಪತ್ರಿಕೆಗಳೇ ವಿರಳವಾದವು. ಆದರೆ ಈ ಕಾರ್ಯದಲ್ಲಿ ಅವನಿಗೆ ಕೀರ್ತಿ ಬಂದಿತೇ ಹೊರತು ಒಂದು ಬಿಡಿಕಾಸೂ ದೊರೆಯಲಿಲ್ಲ.

ಅವನಿಗದರ ಅಗತ್ಯವೂ ಇದ್ದಂತೆ ತೋರಲಿಲ್ಲ. ತನಗೆ ಸಾಕಷ್ಟು ಉತ್ಪನ್ನವಿದೆ. ಅದನ್ನು ನೋಡಿಕೊಳ್ಳಲು ಸಮರ್ಥನಾದ ಅಣ್ಣನಿದ್ದಾನೆ. ಇಂತಹ ಯೋಗ ಇನ್ನಾರಿಗೂ ಸಿಗದು. ಈ ಯೋಗವನ್ನು ಕಳೆದುಕೊಳ್ಳದೆ ಸಾಹಿತ್ಯ ಸೇವೆಯಲ್ಲಿ ತನ್ನ ಜೀವನವನ್ನು ಸವೆಯಬೇಕೆಂಬುದಾಗಿ ತಿಳಿದ ಅವನು ತನ್ನ ಹೃದಯವನ್ನೇ ಅವಳಿಗೆ ತೆರೆದು ತೋರಿಸಿದ್ದ. ಗಂಡನ ಬಗ್ಗೆ ಅವಳಿಗೂ ಅಭಿಮಾನ. ಅವನ ಕವಿತೆಗಳನ್ನವಳು ಸರಾಗವಾಗಿ ಹಾಡುವಳು; ಕತೆಗಳನ್ನು ಓದುವಳು. ಅವನ ಕವಿತೆಗಳನ್ನು ಮೆಚ್ಚಿ ಬರೆದ ಬರಹಗಳನ್ನೋದಿ ಹರ್ಷಪುಲಕಿತಳಾಗುವಳು. ಅವರ ಆನಂದವನ್ನು ಅಭಿಮಾನದಿಂದ ನೋಡುತ್ತಿರುವ ವಿಶ್ವಾಸನಿಗೆ ಜೀವನದ ಬೇರೆ ಮಾರ್ಗಗಳ ಸುಳಿವನ್ನು ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಕಾವ್ಯವೇ ಜೀವನ. ಜೀವನವೇ ಕಾವ್ಯವೆಂದು ತಿಳಿದುಕೊಂಡ ಅವನಿಗೆ ಮನೆಯ ಉತ್ಪನ್ನ ಕರಗತೊಡಗುವದರ ಅರಿವಾಗದಿರುವದು ಅಚ್ಚರಿಯ ಮಾತಲ್ಲ. ಈದಿನ ಮೊದಲ ಬಾರಿಗೆ ಅದನ್ನು ಕೇಳಿದ. ಆ ದಿನ ರಾತ್ರಿ ವಿಚಾರ ಮಾಡುತ್ತಿರುವಾಗ ಅಣ್ಣ ಕೈಯೆತ್ತಿ ಕೊಡುವ ಉತ್ಪನ್ನವನ್ನೆ ತೆಗೆದುಕೊಂಡು ಹಾಯಾಗಿ ಜೀವಿಸಬಹುದೆಂದೆಣಿಸಿದ್ದ. ಒಂದು ವೇಳೆ ಅಣ್ಣ ನಿರಾಕರಿಸಿದರೆ ಎಲ್ಲ ಆಸ್ತಿಯನ್ನೂ ಅವನಿಗೇ ಬಿಟ್ಟು ಹೋಗುವದೆಂದು ನಿರ್ಧರಿಸಿದ್ದ. ಎಂತಲೇ ಹೆಂಡತಿಗೆ– 'ನೀನು ಕಷ್ಟವನ್ನು ಸಹಿಸಲು ಸಿದ್ಧಳಾಗಬೇಕೆಂದು' ಹೇಳಿದ್ದ. ಈಗ ಆ ಮಾತು ನಿಚ್ಚಳವಾಗಿ ಅವನ ಕಣ್ಣ ಮುಂದೆ ಕುಣಿಯಿತು. ಅಣ್ಣನಿಗಾಗಿ ತನ್ನ ಆಸ್ತಿಯನ್ನು ತ್ಯಾಗಮಾಡಿ ಹೋದರೂ ಅವನಿಗದು ಸಾಲುವದಿಲ್ಲವೆಂದು ಈಗವನಿಗೆ ಖಚಿತವಾಯಿತು. ದಿಙ್ಮೂಢನಾಗಿ ಏನು ಹೇಳಬೇಕೊ ತಿಳಿಯದೆ ತೆಪ್ಪಗೆ ಕುಳಿತುಬಿಟ್ಟ ಅವನು.

ತಮ್ಮ ಮಾತಿನಿಂದ ತಮ್ಮನ ಮೇಲೆ ಉಂಟಾಗಬಹುದಾದ ಪರಿಣಾಮವನ್ನು ಮೊದಲೇ ಊಹಿಸಿದ್ದ ರಾಯರಿಗೆ ಅವನ ಮೌನ ಅಚ್ಚರಿಯನ್ನುಂಟು ಮಾಡಲಿಲ್ಲ. ಅವರು ಮುಂದುವರೆದರು– "ನಾನು ಹೇಳಿದ ಮಾತು ನಿನಗೆ ಅಚ್ಚರಿಯನ್ನುಂಟು ಮಾಡಿರಬಹುದು. ಆದರೆ

ಇದಕ್ಕೆ ಕೇವಲ ನಾನೇ ಹೊಣೆಗಾರನಲ್ಲ. ನಮ್ಮ ದುರ್ದೆಶೆಗೆ ಪರಸ್ಥಿತಿಯೇ ಕಾರಣವಾಗಿದೆ. ಉತ್ಪನ್ನದ ಮೇಲೆಯೇ ಕೈಯೂರಿದ ನಮಗೆ ಈ ದಿನಗಳು ಬಹಳ ಕಷ್ಟಕರವಾಗಿವೆ. ಬರುವಷ್ಟು ಬರದೇ ಬರಬೇಕಾದ ಉತ್ಪನ್ನಕ್ಕಾಗಿ ವ್ಯರ್ಥ ಶ್ರಮ ಮಾಡಿ ರೈತರ ಅಸಾನುಭೂತಿ ಪಡೆಯಬೇಕಾಯಿತು. ಹಣದ ಮುಗ್ಗಟ್ಟಿನಲ್ಲಿ ಹೊಲಗಳನ್ನು ಸುಧಾರಿಸುವದಾಗದೆ ಉತ್ಪನ್ನ ಕಡಿಮೆಯಾಗತೊಡಗಿತು. ಅನಿರೀಕ್ಷಿತ ತೊಂದರೆ ಬೇರೆ ನಡುವೆ ಸೇರಿಕೊಂಡಿತು. ನಮ್ಮ ಕಕ್ಕನ ಹೆಂಡತಿಯನ್ನು ನೀನು ಬಲ್ಲೆಯಷ್ಟೆ. ಅವಳು ಕಕ್ಕನೊಡನೆ ಸಂಸಾರ ಹೂಡುವ ಪುಣ್ಯ ಪಡೆದು ಬರದಿದ್ದರೂ ಅವನ ಆಸ್ತಿಯ ಹಕ್ಕು ಪಡೆದು ಬಂದಳು. ಅವಳ ಬಂಧುಗಳು ಅವಳಿಗೆ ದತ್ತಕಮಾಡಿ ನಮ್ಮ ಆಸ್ತಿಯ ಅರ್ಧಪಾಲು ಪಡೆಯುವರೆಂದು ಗೊತ್ತಾದೊಡನೆ ಅಲ್ಲಿಗೆ ಧಾವಿಸಿ ದತ್ತಕವನ್ನೇನೊ ನಿಲ್ಲಿಸಿದೆ. ಅದಕ್ಕಾಗಿ ಅವಳಿಗೆ ಅವಳ ಜೀವಮಾನದವರೆಗೆ ಎರಡು ಒಳ್ಳೆಯ ಹೊಲ ಕೊಡಬೇಕಾಗಿ ಬಂತು. ಸಹಿಮಾಡಿದ ನೀನು ಇದನ್ನು ಮರೆತಿರಲಿಕ್ಕಿಲ್ಲ. ಈ ಹೊಲಗಳು ಹೋಗಲಿ- ಆ ದತ್ತಕ ನಿಲ್ಲಿಸಲು ನಾನು ಅವಳ ಅಣ್ಣ ತಮ್ಮಂದಿರಿಗೆ ಹಣಕೊಡಬೇಕಾಯಿತು. ಅದಕ್ಕಾಗಿ ಒಂದು ಹೊಲ ಹೋಯಿತು. ನಿನ್ನ ಕಾಲೇಜ ವಿದ್ಯಾಭ್ಯಾಸಕ್ಕೂ ಮೂರು ಸಾವಿರ ರೂಪಾಯಿ ಖರ್ಚು ಮಾಡಬೇಕಾಯಿತು. ಇದೆಲ್ಲ ಮರೆತು ಹೋಗುವಂತೆ ಮನೆತನದ ಭಾಗ್ಯ ತೆರೆಯುವ ಕಾಲ ಬಂದಿತ್ತು. ಆದರೆ ನಿನ್ನ ಪ್ರೇಮ ವಿವಾಹ ಆ ಭಾಗ್ಯದ ಬಾಗಿಲನ್ನು ಮುಚ್ಚಿತು. ನಿನ್ನ ವಿವಾಹಕ್ಕಾಗಿ ನನಗೀಗ ದುಗುಡವಿಲ್ಲ. ತಾರಾ ಮುತ್ತಿನಂತಹ ಹುಡಿಗಿ. ನಾನು ಪರಸ್ಥಿತಿಯನ್ನು ಮಾತ್ರ ನಿವೇದಿಸುತ್ತಿದ್ದೇನೆ. ಬಡವರ ಹುಡಿಗಿಯನ್ನು ನೀನು ಮದುವೆಯಾದರೂ ನಮ್ಮ ಅಂತಸ್ತಿಗೆ ತಕ್ಕಂತೆ ನಡೆಯಿತೆಂದು ನೀನೂ ಬಲ್ಲೆ. ಅದಕ್ಕಾಗಿ ನಾಲ್ಕು ಸಾವಿರ ರೂಪಾಯಿ ವೆಚ್ಚ ಬಂತು. ಈಗಂತೂ ಏರಿಕೆಯ ಕಾಲ. ಬರುವ ಉತ್ಪನ್ನ ಎಷ್ಟಕ್ಕೂ ಸಾಲದು. ಇಂತಹ ಸಮಯದಲ್ಲಿ ನೀನು ಬೇರೆಯಾಗಿ ಹೊಣೆಯನ್ನು ಹೇಗೆ ನಿಸ್ತರಿಸಬಲ್ಲಿ ತಮ್ಮ! ಈಗ ಮನೆತನಕ್ಕೆ ಉಳಿದ ಆಸ್ತಿಯೆಂದರೆ ಆ ಗದ್ದೆ, ಈ ಮನೆ, ನಿನ್ನ ಹೆಂಡತಿಯ ಕೈಯಲ್ಲಿಯ ಎರಡು ಚಿನ್ನದ ಬಳೆಗಳು.

ಇದ್ದುದನ್ನೇ ಉಂಡು ಸುಖವಾಗಿರಬೇಕೆಂದರೆ...."

ರಾಯರು ಎದ್ದು ಎಡೆಯಾಡತೊಡಗಿದರು. ಅಸಹನೀಯವಾದ ವೇದನೆಯನ್ನನುಭವಿಸುವ ಮುಖದಲ್ಲಿ ಕಣ್ಣೀರಿನ ಹನಿ ತುಳುಕಾಡಿದವು. ವಿಶ್ವಾಸ ಅಣ್ಣನ ಮಾತುಗಳನ್ನು ಕೇಳಿದ. ಅವನ ಕಣ್ಣು ನಿಚ್ಚಳವಾಗಿ ತೆರೆದವು. ಕಾವ್ಯಜೀವನಕ್ಕೂ ನಿತ್ಯ ಜೀವನಕ್ಕೂ ಇರುವ ಸಂಬಂಧವನ್ನು ಮೊದಲಬಾರಿಗೆ ಕಂಡುಕೊಂಡ. ಅವನು ಉದ್ರೇಕದಿಂದ ಅಣ್ಣನನ್ನು ಕುರಿತು– "ಅತ್ತಿಗೆಯ ಮಾತೇ ನಿಜ ಅಣ್ಣ. ನಾನು ಕೂಳಿಗೆ ಬಿದ್ದ ಅನಾಮಧೇಯನೇ ಸರಿ." ಎಂದ.

"ಹುಚ್ಚು ಹೆಂಗಸು...."

"ಅತ್ತಿಗೆ ಹುಚ್ಚಳಲ್ಲ ಅಣ್ಣ. ಅವಳ ವ್ಯವಹಾರ ಸತ್ಯತೆಯನ್ನು ನಾವು ಕಡೆಗಾಣಿಸಬಾರದು."

"ಅದಕ್ಕಾಗಿ ನಾವು ಕೂಡಿಯೇ ಬಾಳಬೇಕು ತಮ್ಮ."

"ಅತ್ತಿಗೆ ನನ್ನ ಕಣ್ಣನ್ನು ತೆರೆಯಿಸಿದಳು."

"ಅವಳ ಮಾತನ್ನು ಹಚ್ಚಿಕೊಳ್ಳಬೇಡ. ನಿನಗೆ ನನ್ನ ಆಣೆಯಾಗಿದೆ."

"ಅವಳ ಮಾತಿನಿಂದಲೇ ನನ್ನ ಉದ್ಧಾರವಾದೀತಣ್ಣ. ನನಗೆ ಅತ್ತಿಗೆಯ ಮೇಲೆ ಕೋಪವಿಲ್ಲ" ಇಷ್ಟು ಹೇಳಿ ವಿಶ್ವಾಸ ಭಾರವಾದ ಹೆಜ್ಜೆಗಳನ್ನಿಡಿಯುತ್ತ ಹೊರಗೆ ನಡೆದ. ರಾಯರು ತಮ್ಮನು ಹೋದ ದಿಕ್ಕನ್ನೇ ನೋಡುತ್ತ ನಿಂತಲ್ಲಿಯೇ ಕುಳಿತುಬಿಟ್ಟರು. ಒಮ್ಮೆಲೇ ಹೊರ ಬಿದ್ದು ಹೋದ ಸೋದರನನ್ನು ಕೂಗಿ ಕರೆಯುವ ಮನಸ್ಸಾಯಿತು ಅವರಿಗೆ. ಆದರೆ ನಾಲಿಗೆ ಏಳಲಿಲ್ಲ. ಮನಸ್ಸು ಮುದುಡಿಕೊಂಡಾಗ ಮಾತಿನ ಶಕ್ತಿಯುಡುಗುವದು ಸ್ವಾಭಾವಿಕ ತಾನೆ?

ಒಂದೆರಡು ದಿನಗಳಲ್ಲೇ ಬರುತ್ತೇನೆಂದು ಹೋದ ವಿಶ್ವಾಸ ಎಂಟು ದಿವಸಗಳಾದರೂ ಇನ್ನೂ ಬಾರದಿರುವದನ್ನು ಕಂಡು ಅಚ್ಯುತರಾಯರು

ವಿವಂಚನೆಗೊಳಗಾದರು. ಅವರ ಹೃದಯ ಕಪಡಿಹೋದ ಕಾಸಾರವಾಯಿತು. ಇಲ್ಲದ ವಿಚಾರಗಳ ಸುಳಿಯಲ್ಲಿ ಸಿಕ್ಕ ಅವರ ಮನಸ್ಸು ಭೀತಿಗೊಂಡಿತು. ದಿನಾಲು ತಮ್ಮನ ಬರವನ್ನೇ ನಿರೀಕ್ಷಿಸುತ್ತಿರುವಾಗ ಅವನು ಬಾರದಿರುವದು ಅವರ ಸಹನೆಯನ್ನೇ ಕೆಣಕಿತು. ತಮಗಾಗಿ, ತಮ್ಮ ಹೆಂಡತಿಯ ಮಾತಿಗಾಗಿ ಅವನು ಎದ್ದು ಹೋದದ್ದು ಅವರೆದೆಯಲ್ಲಿ ಮುಳ್ಳಿನಂತೆ ಚುಚ್ಚತೊಡಗಿತು. ಹೆಂಡತಿಯನ್ನವರು ಪೂರ್ಣ ತಿರಸ್ಕಾರದಿಂದ ಕಾಣಲಾರಂಭಿಸಿದರು. ದೈನಂದಿನ ಕೆಲಸಗಳಲ್ಲಿ ಅವರ ಮನಸ್ಸು ನಿಲ್ಲದಾಯಿತು. ಸುಮ್ಮನೆ ಅತ್ತಿತ್ತ ತಿರುಗಾಡಿ ಬಂದು- "ವಿಶ್ವಾಸ ಇನ್ನೂ ಬರಲೇಯಿಲ್ಲ" ಎಂದು ಯಾರನ್ನೂ ಉದ್ದೇಶಿಸದೆ ಎಲ್ಲರನ್ನೂ ಉದ್ದೇಶಿಸಿ ನುಡಿಯುವರು. ಅವನ ಮಕ್ಕಳನ್ನು ತಮ್ಮ ಕೋಣೆಗೆ ಕರೆದುಕೊಂಡು ಹೋಗಿ ಅವರೊಡನೆ ಆಟವಾಡುವರು. ತಮ್ಮ ಮಕ್ಕಳು ಅಲ್ಲಿ ಸುಳಿದರೆ ಉರಿದು ಬೀಳುವರು.

ತಾರಾನ ಚಿಂತೆಯೂ ಕಡಿಮೆಯದಾಗಿರಲಿಲ್ಲ. ಆದರೆ ತಾನೂ ಅದನ್ನು ಪ್ರದರ್ಶಿಸಿ ಭಾವನವರ ದುಗುಡ ಹೆಚ್ಚಿಸಬಾರದೆಂದು ಅಕ್ಕನನ್ನುದ್ದೇಶಿಸಿ- "ಭಾವನವರು ಸುಮ್ಮನೆ ಚಿಂತೆ ಮಾಡುತ್ತಾರೆ. ಒಂದೆರಡು ದಿನಗಳಲ್ಲಿ ಅವರು ಬಂದೇ ಬರುತ್ತಾರೆ" ಎನ್ನುವಳು. ಈ ಮಾತನ್ನು ಕೇಳಿದ ರಾಯರು- "ನಿನ್ನ ಮುಂದೆ ಏನಾದರೂ ಹೇಳಿ ಹೋಗಿದ್ದಾನೇನು ಹೇಳು ಮಗು" ಎಂದು ಕೇಳುವರು. ತಾರಾ ಎಂದೂ ಅವರೆದುರು ಮಾತನಾಡಿದವಳಲ್ಲ. ಆದರೂ ತನ್ನ ಚಿಂತೆಯನ್ನನುಲಕ್ಷಿಸಿ- "ಒಂದೆರಡು ದಿನಗಳಲ್ಲಿ ಮಾತ್ರ ಬರುತ್ತೇನೆಂದು ಹೇಳಿದ್ದಾರೆ" ಎಂದು ಹೇಳಿ ಸುಮ್ಮನಾಗುವಳು.

"ಅವನು ಹೋಗಿದ್ದಾದರೂ ಎಲ್ಲಿ?"

"ಆ ಮಾತನ್ನವರು ನನ್ನ ಮುಂದೂ ಹೇಳಿಲ್ಲ."

"ಯಾಕ ಸುಳ್ಳ ಹೇಳತೀಯ ಮಾರಾಯಳ. ಗೊತ್ತಿದ್ದನ್ನ ಹೇಳಿದರ ನಿನ್ನ ಕುಲಕ್ಕ ಬಟ್ಟು ಬರತದೇನು?" ಎಂದು ತುಂಗಮ್ಮ ಹೆಣಿ ಹಾಯ್ದಳು.

"ನನ್ನಾಣೆಗೂ ನನಗೆ ಗೊತ್ತಿಲ್ಲಕ್ಕ"

ರಾಯರಿಗೆ ಇದರಿಂದ ಇನ್ನೂ ಹೆಚ್ಚಿನ ವ್ಯಥೆಯಾಯಿತು. ಒಮ್ಮೊಮ್ಮೆ ಅವರಿಗೆ ಅವನು ಬರುವದಿಲ್ಲವೆನ್ನಿಸುವದು. ಈ ವಿಚಾರ ಸುಳಿದಾಗ ಅವರು ಗದಗುಟ್ಟಿ ನಡುಗುವರು. ನಾಳೆ ಒಂದುದಿನ ದಾರಿಕಾಯ್ದು ಬಾರದಿದ್ದರೆ ಅವನ ಶೋಧನೆಗೆ ತೊಡಗಬೇಕೆಂದು ಆಗಲೆ ನಿಶ್ಚಯಿಸಿದರು. ಆದರೆ ಮರುದಿನ ತಮ್ಮ ನಿಶ್ಚಯವನ್ನು ಕಾರ್ಯರೂಪದಲ್ಲಿ ತರುವ ಸಂದರ್ಭ ಒದಗಲಿಲ್ಲ.

ಮೂಡಣದ ಕೆಂಪು ಹರಿಯುವದರಲ್ಲಿತ್ತು. ತುಂಗಮ್ಮ ಆಗಲೇ ಎದ್ದು ತಮ್ಮ ದಿನದ ನಿಯಮದಂತೆ ದೇವರ ಕೋಣೆ ಗುಡಿಸಿ, ಹಿತ್ತಲ ದಲ್ಲಿಯ ತುಳಸೀಕಟ್ಟೆಗೆ ತಳೀಹಾಗಿ, ಅಡಿಗೆ ಮನೆಗೆ ಬಂದು ಇದ್ದಲು ಒಲೆ ಹೊತ್ತಿಸಿ ಚಹಾಕ್ಕೆ ಎಸರಿಟ್ಟು, ರಂಗವಲ್ಲಿಯ ಪಂಚಪಾಳೆಯನ್ನೆತ್ತಿ ಕೊಂಡು ಹೊಸ್ತಿಲ ಸಾರಣೆಗಾಗಿ ಆದೇ ಹೊರಬಂದಿದ್ದರು. ಹೊಸ್ತಿಲ ಸಾರಿಸಿ ಜೋಡಳಿಯ ರಂಗವಲ್ಲಿಯನ್ನು ಹಾಕಿ, ಮಧ್ಯದಲ್ಲಿ ಗುಂಡು ಸುತ್ತುಗಳನ್ನು ತಿರುವಿ, ಕುಂಕುಮ ಹಚ್ಚಿ, ಹೊರಗಿರುವ ಎಡಬಲದ ಕಲ್ಲುಗಳಿಗೆ ಸ್ನಾನ ಮಾಡಿಸಿ ಅದಕ್ಕೂ ಕುಂಕುಮದ ತಿಲಕವನ್ನಿಟ್ಟು ಒಳಗೆ ಹೋಗುತ್ತಿರುವಾಗ ಸಮೀಪದಲ್ಲಿಯೇ ಬರುತ್ತಿರುವ ವಿಶ್ವಾಸನನ್ನು ಕಂಡರು. ಬಹಳ ದಿನಗಳ ಹಿಂದೆ ಅವನು ಕಾಲೇಜಿನಲ್ಲಿ ಓದುತ್ತಿರು ವಾಗ ಬಿಡುವಿನ ಪ್ರಾರಂಭದಲ್ಲಿ ಇಂತಹ ಬೆಳಗಿನಲ್ಲೇ ಬರುತ್ತಿರುವದನ್ನು ನೆನೆದ ತುಂಗಮ್ಮನಿಗೆ ಅವನು ತನ್ನ ಮೈದುನ ಎಂದು ತಿಳಿಯಲು ಬಹಳ ಸಮಯ ಹಿಡಿಯಲಿಲ್ಲ. ಅವನು ತಲಬಾಗಿಲಿಗೆ ಬರುತ್ತಲೇ ಅನಳು- "ಭಾವಜಿ ಬಂದರು" ಎಂದು ಕೂಗಿದಳು. ಸಕ್ಕರೆ ನಿದ್ರೆಯಲ್ಲಿದ್ದ ರಾಯರು ಹೆಂಡತಿಯ ದನಿಯನ್ನು ಕೇಳಿ ಚಂಗನೆ ನೆಗೆದು ಪಡಸಾಲೆಗೆ ಬಂದರು. ತಾರಾ ಆತುರಳಾಗಿ ಓಡಿ ಬಂದಳು. ತುಂಗಮ್ಮ ಪಂಚಪಾಳೆಯನ್ನು ಕೈಯಲ್ಲಿ ಹಿಡಿದುಕೊಂಡೇ- "ನೀವು ಇವತ್ತ ಬರತೀರಂತ ನನಗೆ ಗೊತ್ತಿತ್ತು ಅದಕ್ಕೆ ಎರಡು ಕಪ್ಪು ಎಸರಿಟ್ಟೀನಿ" ಎಂದು ನಕ್ಕಳು. ವಿಶ್ವಾಸ ಅವಳ ಪಾದಮುಟ್ಟಿ ನಮಸ್ಕಾರ ಮಾಡಿ ಅಣ್ಣನ ಕಾಲಿಗೆರಗಿದನು.

"ನಿನ್ನೆ ಎರಡು ದಿನಗಳೆಂದರೆ ಎರಡು ವಾರಗಳೇನೊ ವಿಶು?" ಎಂದು ರಾಯರು ಕಣ್ಣೊರೆಯಿಸಿಕೊಂಡರು. ಅವರ ತಲೆಯ ಮೇಲಿನ ಬಹುದೊಡ್ಡ ಭಾರ ಇಳಿದಂತಾಗಿ ಉತ್ಸಾಹ ನರನರಗಳಲ್ಲೂ ಹರಿದಾಡಿತು.

"ಹೋದ ಕೂಡಲೆ ನೌಕರಿ ಸಿಗಬೇಕಲ್ಲಣ್ಣ".

"ನೀನು ನೌಕರಿಗಾಗಿ ಅಲೆದಾಡಿದೆಯಾ?"

"ಬರೇ ಅಲೆದಾಡಲಿಲ್ಲ ಅಣ್ಣ. ಪಡೆದುಕೊಂಡೇ ಬಂದಿರುವೆ. ಗೋವಿನಪುರದ ಶಿಕ್ಷಕನಾಗಿ ಎರಡು ದಿನದ ಸೇವೆ ಸಲ್ಲಿಸಿ ಒಂದು ಮನೆಯನ್ನು ಹಿಡಿದು ಬಂದಿರುವೆ. ನಾಡದು ಹೋಗಬೇಕು. ಹಿರಿಯರ ಪುಣ್ಯ, ಇಷ್ಟು ಬೇಗ ಫಲಿಸಿದ್ದಕ್ಕೆ...."

ಗಂಡನ ಈ ಮಾತುಗಳನ್ನು ಕೇಳಿದ ತಾರಾನ ಮುಖ ಇಷ್ಟಗಲವಾಯಿತು. ಅನೇಕ ದಿನಗಳ ಉದ್ವಿಗ್ನತೆಯಲ್ಲಿ ಬಾಡಿ ಹೋದ ಮುಖದಲ್ಲಿ ಈದಿನ ನಗೆಮುಗುಳು ಮತ್ತೆ ಅರಳಿತು. ತಾರಾನನ್ನು ನೋಡಿ ತುಂಗಮ್ಮ– "ಒಳಗೆ ಎಸರು ಹೊಯ್ದಾಡುತ್ತಿರಬೇಕು. ಸಕ್ಕರಿ–ಪುಡಿ ಹಾಕಿ ಇಳಿಸು ಹೋಗು. ಗಂಡಸರ ಮಾತನ್ನು ಕೇಳುತ್ತ ಏಕೆ ನಿಲ್ಲುತ್ತಿ? ಭಾವಜಿಗೆ ಬಿಸಿ ನೀರನ್ನು ಇಲ್ಲಿಯೇ ತಾ. ಮುಖ ತೊಳೆದುಕೊಳ್ಳಲಿ" ಎಂದಕೂಡಲೇ ತಾರಾ ಒಳಗೆ ನಡೆದಳು. ರಾಯರ ಮುಖದಲ್ಲಿ ಯಾವ ಮಾರ್ಪಾಟೂ ತೋರಲಿಲ್ಲ. ಅವರು ಒಂದು ದೀರ್ಘವಾದ ನಿಟ್ಟುಸಿರು ಬಿಟ್ಟು– ನೀನು ನಾಡದೇ ಹೊರಡಬೇಕೆ?" ಎಂದರು.

"ಹೋಗದೆ ನಿರ್ವಾಹವಿಲ್ಲಣ್ಣಾ. ಹೆಚ್ಚಿನ ರಜೆ ಪಡೆದು ಬಂದಿಲ್ಲ" ಎಂದ ವಿಶ್ವಾಸ. ಅಣ್ಣ ತಮ್ಮಂದಿರು ಆ ದಿನ ಚಹ ಕುಡಿದರು. ರಾಯರ ಮೌನದ ಅರ್ಥವನ್ನು ಆವನು ತಿಳಿದುಕೊಂಡ. ವಿಶ್ವಾಸನ ಮೌನದ ಅರ್ಥವನ್ನು ರಾಯರು ಅರಿತರು.

ಹೊರಡುವ ದಿನ ರಾಯರು ತುಂಬ ಚಡಪಡಿಸತೊಡಗಿದರು

ಅನೇಕ ಬಾರಿ ಅಡಿಗೆ ಮನೆಗೂ, ಪಡಸಾಲೆಗೂ ಕೆಲಸವಿಲ್ಲದೆ ಎಡತಾಕ ತೊಡಗಿದರು. ಪಡಸಾಲೆಯಲ್ಲಿ ಬಿದ್ದ ಅರಿವೆಗಳನ್ನು ಸುಮ್ಮನೆ ಛಟಪಟ ಜಾಡಿಸಿಡತೊಡಗಿದರು. ತಮ್ಮ ಕೋಣೆಗೆ ಹೋಗಿ ಆಗಲೆ ದಿಂಬಿಗೊರಗಿ ಕುಳಿತು ಮರುಕ್ಷಣದಲ್ಲಿ ಮತ್ತೆ ಎದ್ದು ತುದಿಗಟ್ಟೆಯ ಹತ್ತಿರ ಬಿದ್ದ ಕಸಬರಿಗೆಯ ಕಡ್ಡಿಯನ್ನು ಹೊರಗೆ ಹೋಗಿ ಚಲ್ಲಿಬಂದರು. ತಾರಾ ಸಾಮಾನು ಕಟ್ಟುತ್ತಿದ್ದಳು. ತುಂಗವ್ವ ಭಾಂಡಿ ತಂದಿಡುತ್ತಿದ್ದಳು. ರಾಯರು ಬಾಗಿಲವರೆಗೆ ಹೋಗಿ– "ನಿನಗೆ ಬೇಕಾದ ಭಾಂಡಿ ನೀನೇ ತೆಗೆದುಕೋ ತಾರಾ ಎಂದು ಹೇಳಿದರು.

ತನ್ನಲ್ಲಿ ಅವಿಶ್ವಾಸವನ್ನು ತೋರಿದ ಗಂಡನ ಮಾತುಗಳನ್ನು ಕೇಳಿ ತುಂಗವ್ವ ಉರಿದುಬಿದ್ದಳು. ಅವಳು ಕೈಯಲ್ಲಿ ಅನ್ನದ ತಪ್ಪೇಲಿಯನ್ನು ಹಿಡಿದುಕೊಂಡೇ– "ಏನು ಹೇಳೂಹಂಗಿಲ್ಲ ಬುಬ್ಬುಣಚಾರ. ಹಾಂಗ ಮನ್ಯಾಗ ಭಾಂಡೀ ಇದ್ದರನಕಾ ಏನ ಮಾಡತಿದ್ದರೊ ಮಾರಾಯರು. ಒಬ್ಬ ಬ್ರಾಹ್ಮಣ, ಮುತ್ತೈದಿಗೆ ಹೇಳಿದ್ರ ನೆರಮನಿಗೆ ಹೋಗಬೇಕಾಗ ತದ ಭಾಂಡಿ ತರಲಿಕ್ಕೆ. ಮತ್ತ ಹೇಳತಾರ; ಹಂಗs...." ಎನ್ನುತ್ತ ಕೈಯಲ್ಲಿ ಹಿಡಿದ ಆ ತಪ್ಪೇಲಿಯನ್ನು ಚೀಲದೊಳಗೆ ಹಾಕಿದರು.

"ನನ್ನ ಮಾತು ಕೇಳಿದೇನು ತಾರಾ. ನಿನಗೆ ಬೇಕಾದ ಭಾಂಡಿ ಗಳನ್ನು ನೀನೇ ತೆಗೆದುಕೊ. ನಿನ್ನ ಕೈ ಯಾರೂ ತಡೆಯಲಾರರು" ಎಂದು ರಾಯರು ಮತ್ತೊಮ್ಮೆ ಗರ್ಜಿಸಿದರು. ಇಂತಹ ಹೊತ್ತಿನಲ್ಲಿ ರಸಕಸಿ ಮಾಡುವದು ತರವಲ್ಲವೆಂದು ತಿಳಿದ ತುಂಗವ್ವ ತೆಪ್ಪಗಾದಳು. ಯಾವ ತಪ್ಪನ್ನೂ ಮಾಡದ ತನ್ನ ಮೇಲೆ ಹರಿಹಾಯುತ್ತಿರುವ ಗಂಡ ನನ್ನು ಆ ಸಮಯದಲ್ಲಿ ಕೆಣಕುವದು ಅವಳಿಗೆ ಬೇಕಾಗಿರಲಿಲ್ಲ. ತಾರಾನ ಸಂಸಾರಕ್ಕೆ ಬೇಕಾಗುವ ಭಾಂಡಿಗಳನ್ನು ಅವಳು ಈ ಮೊದಲೇ ಕೊಟ್ಟಿದ್ದಳು. ಆದರೂ ಅನ್ನಿಸಿಕೊಳ್ಳುವ ಜೀವವಲ್ಲ ಅವಳದು. ಅವಳ ಕಣ್ಣಲ್ಲಿ ನೀರೂರಿದವು. ಅವಳು ಅಳುತ್ತಲೆ– "ಹಂಗಾರ ನೀನೇ ತಗೋಳವಾ ಬೇಕಾದದ್ದನ್ನ. ನಾಯಾಕ ಬ್ಯಾಡಲ್ಲಿ? ನನಗ್ಯಾಕ ಬೇಕ ಒಣಾ ಉಸಾಬರಿ." ಎಂದು ನೇರವಾಗಿ ಒಳಗೆ ನಡೆದಳು.

ತಾರಾನಿಗೆ ಭಾವನವರ ಮಾತು ರುಚಿಸಲಿಲ್ಲ. ಅವಳು ವಿನಯ ದಿಂದ– "ಸುಮ್ಮನೆ ಏಕೆ ಅಕ್ಕನನ್ನು ಗೋಳು ಹುಯ್ದುವಿರಿ? ನನಗೆ ಬೇಕಾದ ಭಾಂಡಿಗಳನ್ನು ಅವರೇ ಕೊಟ್ಟಿದ್ದಾರೆ. ನನಗೆ ನಿನ್ನ ಮನೆ ಯೊಂದು ಬೇರೆ ಇವೆಯೆ? ಎಲ್ಲವೂ ನಿಮ್ಮದೇ." ಎಂದು ಗದ್ಗದಿತಳಾ ದಳು. ರಾಯರ ಕಣ್ಣಲ್ಲೂ ನೀರೂರಿತು. ಅವರು ಅಲ್ಲಿಯೇ ಅಡುತ್ತಿದ್ದ ವಿಶ್ವಾಸನ ಮಗು ಕಿರಣನನ್ನು ಹತ್ತಿರೆಳೆದು ಬೆನ್ನಮೇಲೆ ಕೈಯಾಡಿಸಿದರು. ಆ ಮಗು ರಾಯರ ಅಪ್ಪಿಗೆ ಬಿಡಿಸಿಕೊಂಡು ಕೇಳಿತು.– "ದೊಡ್ಡಪ್ಪ ನೀ ಅತ್ತಿ ಯಾಕ?"

ರಾಯರು ಲಗುಬಗೆಯಿಂದ ಕಣ್ಣೊರೆಯಿಸಿಕೊಂಡು– "ನಾ ಎಲ್ಲಿ ಅಳತೀನೊ ಬಾಳಾ?" ಎಂದು ಅವನನ್ನು ಸರಿಸಿ ಕೋಣೆಯೊಳಗೆ ಹೋದರು. ತಾರಾ ಈ ದೃಶ್ಯವನ್ನು ನೋಡಿದಳು. ಚೀಲವನ್ನು ಹೊಲೆಯುತ್ತಿರುವ ಅವಳ ಕೈ ಗಕ್ಕನೆ ನಿಂತಿತು. ಚಿಮ್ಮಿ ಬರುವ ಕಣ್ಣೀರನ್ನು ಸೆರಗಿ ನಿಂದೊತ್ತಿದಳು.

ಸವಾರಿ ಕಟ್ಟಿದ ಬಂಡಿಯೊಂದು ತಲೆಬಾಗಿಲ ಬಳಿ ಬಂದು ನಿಂತಿತು. ಯಂತ್ರದ ಬೊಂಬೆಯಂತೆ ವಿಶ್ವಾಸ ಒಂದೊಂದೇ ಗಂಟನ್ನೆತ್ತಿ ಗಾಡಿಯಲ್ಲಿಡುತ್ತಿದ್ದ. ಅವನ ಮನಸ್ಸು ಭಾರವಾಗಿತ್ತು. ರಾಯರು ಆಗಲೆ ಪಡಸಾಲೆಗೆ ಬಂದು ನಿಂತಿದ್ದರು. ಇಷ್ಟು ಹೊತ್ತಿನವರೆಗೆ ಬೇಕೆಂದೇ ಅಣ್ಣನ ಕಣ್ಣು ತಪ್ಪಿಸುತ್ತಿರುವ ಅವನಿಗೆ ಈಗ ಹಾಗೆ ಮಾಡಲಾಗಲಿಲ್ಲ. ಈಗ ಆ ಸೋದರರಿಬ್ಬರ ಕಣ್ಣುಗಳೂ ಸಂಧಿಸಿದವು.– "ಸಾಮಾನುಗಳನ್ನು ಹಾಕಿ ಆಯಿತೆ?" ಎಂದು ಪ್ರಯಾಸದಿಂದ ಕೇಳಿದರು ರಾಯರು. ವಿಶ್ವಾಸನ ಹೃದಯದ ಒಡ್ಡು, ಒಡೆದುಬಿಟ್ಟಿತು. ಆವನು– "ಅಣ್ಣಾ" ಎಂದು ಅವರ ಪಾದಗಳಿಗೆ ಕಣ್ಣೀರಿನ ಅಭಿಷೇಕ ಮಾಡಿದ. ಆ ವೇಳೆಗೆ ಹಣೆಯ ತುಂಬ ಕುಂಕುಮ ಹಚ್ಚಿಕೊಂಡು, ಕೈಯಲ್ಲಿ ತುಂಗಮ್ಮನಿತ್ತ ಖಣವನ್ನು ಹಿಡಿದುಕೊಂಡು ಕಣ್ಣೀರಿನ ಹೊಳೆ ಹರಿಸುತ್ತ ತಾರಾ ತುಂಗಮ್ಮ ನೊಂದಿಗೆ ಅಲ್ಲಿಗೆ ಬಂದಳು. ಕಂಕುಳಲ್ಲಿ ಉಷೆಯನ್ನು ಕುಳ್ಳಿರಿಸಿಕೊಂಡ ತುಂಗಮ್ಮನ ಕಣ್ಣುಗಳಲ್ಲೂ ನೀರುಕ್ಕಿ ಹರಿಯುತ್ತಿತ್ತು.

ರಾಯರು ತಮ್ಮನ ಬೆನ್ನು ತಟ್ಟುತ್ತ– 'ತಮ್ಮ, ನಾನು ನಿನ್ನನ್ನು ಅಣ್ಣನಾಗಿ ಕಾಪಾಡಲಿಲ್ಲ. ಅಪ್ಪನು ಹೇಳಿದಂತೆ ನಾನು...." ಅವರ ಕಂಠ ತುಂಬಿ ಬಂದಿತು.

"ನಿನ್ನಂಥ ಅಣ್ಣನನ್ನು ಪಡೆಯಲು ಸಾವಿರ ವರುಷ ತಪಸ್ಸು ಮಾಡಬೇಕು. ನಾನೇ ದುರ್ದೈವಿ". ಎಂದು ವಿಶ್ವಾಸ ಬಿಕ್ಕಳಿಸಿದ. ಕುಂಕುಮಾಂಕಿತಳಾಗಿ ಬಂದ ತಾರಾನನ್ನು ನೋಡಿ ರಾಯರು "ಮಕ್ಕಳನ್ನು ಸಂಬಾಳಿಸಿಕೊಂಡಿರು" ಎಂದರು.

ತಾರಾ ಮೌನವಾಗಿ ತಲೆದೂಗಿ ರಾಯರಿಗೆ ನಮಸ್ಕರಿಸಲು ಮುಂದಾದಳು. ಆಗ ರಾಯರು ತಮ್ಮ ಮಡದಿಯನ್ನುದ್ದೇಶಿಸಿ– "ತಾರಾ ಹೋದಮೇಲೆ ನೀನು ಯಾರನ್ನು ಶಿಕ್ಷಿಸುತ್ತೀಯೆ?" ಎಂದು ಕೇಳಿದರು. ತುಂಗಮ್ಮ ಬಿಕ್ಕಳಿಸಿದಳು. ಅವಳಿಗೆ ಆ ಮಾತು ನುಂಗಲಾರದ ತುತ್ತಾಯಿತು. ತಾರಾನಿಗೆ ಅದನ್ನು ಸಹಿಸುವದಕ್ಕಾಗದೆ ಗದ್ಗದಿತಳಾಗಿ– "ಭಾವನವರೆ, ನಿಮ್ಮ ಕಾಲು ಬೀಳುತ್ತೇನೆ. ಅಕ್ಕನನ್ನು ಹೀಗೆ ಹಿಂಸಿಸಬೇಡಿರಿ. ಅವರು ನನಗೆ ಎಂದೂ ತೊಂದರೆ ಕೊಟ್ಟಿಲ್ಲ. ನನ್ನನ್ನು ತಂಗಿಯಂತೆ ನೋಡಿಕೊಂಡಿದ್ದಾರೆ. ಸಿಟ್ಟಿನ ಭರದಲ್ಲಿ ಅವರು ಅಂದ ಮಾತುಗಳನ್ನು ನಾನು ಮರೆತುಬಿಟ್ಟಿದ್ದೇನೆ. ಅವರು ಎಷ್ಟೆಂದರೂ ಹಿರಿಯರು...." ಎಂದು ರಾಯರ ಪಾದಗಳಿಗೆರಗಿದಳು.

ರಾಯರು ಕರಗಿ ಹೋದರು.– "ತಾರಾ, ತಾರಾ– ನೀನೀಮನೆಯ ಭಾಗ್ಯಲಕ್ಷ್ಮಿ. ಹೋಗಿ ಬಾ ತಾಯಿ" ಎಂದು ತಮ್ಮ ಹೆಂಡತಿಯ ಟೊಂಕದಲ್ಲಿಯ ಮಗುವನ್ನೆತ್ತಿಕೊಂಡು ಮುದ್ದು ಕೊಟ್ಟರು. ಆ ವೇಳೆಗೆ ಕಿರಣ ಓಡುತ್ತ ಅಲ್ಲಿಗೆ ಬಂದ. ವಿಶ್ವಾಸ ಅವನನ್ನು ತಡೆದು– "ಕಿರಣ, ದೊಡ್ಡಪ್ಪನ ಕಾಲು ಬೀಳು" ಎಂದ.

"ಹೋಗಿ ಬರ್ತೀನಿ ದೊಡ್ಡಪ್ಪ" ಎಂದು ಕಿರಣ ರಾಯರ ಪಾದಗಳನ್ನು ಮುಟ್ಟುವ ಹೊತ್ತಿಗೆ ಅವರು ಅವನನ್ನು ತಬ್ಬಿಕೊಂಡು ಸಣ್ಣ

ಹುಡುಗರ ಹಾಗೆ ಅತ್ತುಬಿಟ್ಟರು. ವಿಶ್ವಾಸ ಅತ್ತಿಗೆಗೆ ನಮಸ್ಕರಿಸಿ ಕಿವಿಯಲ್ಲಿ ಹೇಳುವಂತೆ– "ಅಣ್ಣನಿಗೆ ನನ್ನ ಅಗಲಿಕೆಯಿಂದ ವ್ಯಥೆಯಾಗುವದು ಸ್ವಾಭಾವಿಕ ಅತ್ತಿಗೆ. ಅವನನ್ನು ಸಂತೈಸುವವಳು ನೀನು" ಎಂದು ಹೊರಟು ನಿಂತ. ತುಂಗವ್ವ ಪೂರಾ ಕರಗಿದವಳಾಗಿ ತಾರಾನನ್ನು ತಟ್ಟಿ– "ತಾರಾ, ಸಿಟ್ಟಿನ ಹೊತ್ತಿನಲ್ಲಿ ಮಾತಾಡಿದ್ದನ್ನು ಮರೆತುಬಿಡು. ಈ ನಾಲಿಗ್ಗೆ ಮುಳ್ಳು ಮುರಿಯಲಿ. ಸಿಕ್ಕಂತೆ ಬಗಳುತ್ತದೆ. ನೀ ಹೋದರೇನು ಅತ್ಲಾಗ ಹೋಗತೀರೇನು? ಹಗಲೆಲ್ಲ ಬರತ ಬರ್ರಿ ನಮ್ಮವ್ವ. ಏ ಕಿರಣ, ಅವ್ವಗ ತ್ರಾಸ ಕೊಡಬ್ಯಾಡ ಕಳ್ಳ." ಎಂದು ಕಿರಣನನ್ನು ತಬ್ಬಿಕೊಂಡಳು.

"ಅಕ್ಕ, ಇಂತಹ ಮಾತನ್ನು ಆಡಬೇಡಿರಿ. ನನಗೆ ನೋವಾಗುತ್ತದೆ. ನೀವು ಅಂಥಾದೇನೂ ಮಾಡಿಲ್ಲ" ಎಂದು ತಾರಾ ತನ್ನ ಕೈಯಲ್ಲಿಯ ಚಿನ್ನದ ಬಳೆಗಳನ್ನು ತೆಗೆದು–"ಅಕ್ಕಾ, ಈ ಬಳೆಗಳನ್ನು ನೀವೇ ಹಾಕಿಕೊಳ್ಳಿರಿ. ನಿಮ್ಮ ಕೈಭಣಗುಡುತ್ತಿವೆ" ಎಂದು ಆ ಬಳೆಗಳನ್ನು ತೊಡಿಸಲು ಮುಂದಾದಳು. ರಾಯರಿಗೆ ಈ ಸನ್ನಿವೇಶ ತೀರಾ ಅನಿರೀಕ್ಷಿತವಾಗಿತ್ತು. ಹೆಂಡತಿ ಈ ಬಳೆಗಳನ್ನು ತೆಗೆದುಕೊಳ್ಳುವಳೆಂದು ಅವರು ವಿಹ್ವಲರಾದರು. ತುಂಗವ್ವ ಅವುಗಳನ್ನು ತೆಗೆದುಕೊಂಡು ಕಣ್ಣಿಗೊತ್ತಿಕೊಂಡು– "ತಾರಾ, ಈ ಬಳೆಗಳು ನಿನಗೇ ಚಂದ. ಮುದುಕಿಯಾಗಿ ನಾನು ಈ ಬಳೆಗಳನ್ನು ಹಾಕಿಕೊಂಡು ಮೆರೆಯಬೇಕೆ ಹುಚ್ಚಿ? ಬೇಡವಾ ಬೇಡ ನನ್ತಾಯಿ. ಇವುಗಳನ್ನು ನೀನೇ ತೆಗೆದುಕೋ." ಎಂದು ಕಣ್ಣೀರು ತುಂಬಿದಳು.

"ಅಕ್ಕ, ಈ ಬಳೆಗಳು ನನಗೆ ಬೇಡ. ನಾನು ಹಾಕಿಕೊಂಡರೇನು? ನೀವು ಹಾಕಿಕೊಂಡರೇನು? ನೀವೇ ಹಾಕಿಕೊಂಡು ನನ್ನನ್ನಾಶೀರ್ವದಿಸಿರಿ" ಎಂದು ಬಾಗಿದಳು. ವಿಶ್ವಾಸ ಹೆಂಡತಿಯನ್ನು ಅಭಿಮಾನದಿಂದ ನೋಡಿದ. ಇಷ್ಟು ಪ್ರಿಯವಾಗಿ ತಾರಾ ಅವನಿಗೆ ಈ ಮೊದಲೆ ಕಂಡಿರಲಿಲ್ಲವೇನೊ ಎಂಬಂತೆ ಆವಳನ್ನು ಕಣ್ಣುತುಂಬ ನೋಡಿದ.

"ಹುಚ್ಚಿಹಾಂಗ ಮಾಡಬೇಡ ತಾರಾ. ನಿನಗೆ ನನ್ನ ಆಣಿ ಆಗೇದ. ಸುಮ್ಮನೆ ಇವುಗಳನ್ನು ತೆಗೆದುಕೋ."

"ಅವು ನನ್ನವಾಗಿ ನಿಮ್ಮ ಹತ್ತಿರವೇ ಇರಲಿ ಅಕ್ಕ."

"ಹಂಗಾರೆ ಅಕ್ಕ ಕೊಡೂ ಈ ಬಳೆಗಳನ್ನು ತಂಗಿ ಬ್ಯಾಡ ಅಂತಾರೇನು? ತಗೋ ನನ್ನವ್ವ." ಎನ್ನುತ್ತ ತುಂಗಮ್ಮ ತಾರಾನ ಕೈಗಳಿಗೆ ಬಳೆ ತೊಡಿಸಿಯೇಬಿಟ್ಟಳು. ರಾಯರು ಅಭಿಮಾನ, ಸಂತೋಷಗಳಿಂದ ತಮ್ಮ ಮಡದಿಯನ್ನು ನೋಡುತ್ತ– "ಅಕ್ಕ-ತಂಗಿಯರ ಜಗಳ ಮುಗೀತಿಲ್ಲೊ?" ಎಂದು ಹಾಸ್ಯಮಾಡಿದರು.

ಬಂಡಿ ಸಾಗಿತು. ರಾಯರೂ, ವಿಶ್ವಾಸನೊಂದಿಗೆ ಹಿಂದಿನಿಂದ ನಡೆಯುತ್ತಿದ್ದರು.

"ಇನ್ನೂ ಎಷ್ಟು ದೂರ ಅಣ್ಣಾ ಬರುವದು?"

"ಆ? ನಮ್ಮೂರ ಹಳ್ಳ ದಾಟಿತೆ?"

"ಒಂದು ಮೈಲು ಹಿಂದೆಯೆ ಉಳಿಯಿತು ಅಣ್ಣಾ." ರಾಯರು ನಿಂತರು. ಗಾಡಿ ಮರೆಯಾಗುವವರೆಗೂ ನಿಂತಲ್ಲಿಯೇ ಅದನ್ನು ದಿಟ್ಟಿಸುತ್ತಿದ್ದರು. ಅನಂತರ ನಿಧಾನವಾಗಿ ಹೆಜ್ಜೆ ಹಾಕುತ್ತ ಮನೆಗೆ ನಡೆದರು. ಅವರ ಮನಸ್ಸು ಎಲ್ಲಿಯೋ ಸುಳಿಯುತ್ತಿತ್ತು. ಹೆಜ್ಜೆಗಳು ಮಾತ್ರ ಹಾದಿಯನ್ನು ತುಳಿಯುತ್ತಿದ್ದವು.

೩

ಗೋವಿನಪುರ ಪಟ್ಟಣದಂತೆ ಕಂಡರೂ ಅದು ಪಟ್ಟಣದ ಸೌಕರ್ಯವಿಲ್ಲದ ಒಂದು ಹಳ್ಳಿ. ಘಟಪ್ರಭಾ ನದಿಯ ಮೇಲೆ ಹಬ್ಬಿನಿಂತಿದೆ. ತಾಪತ್ರಯದಲ್ಲಿ ಸಿಕ್ಕು ಜಿಬ್ಬೆಯಾದ ಸಂಸಾರಿಗನು ಸೋತ ಹೆಜ್ಜೆಗಳನ್ನಿಡುವಂತೆ ಪ್ರವಾಹ ಮಂದವಾಗಿ ಹರಿಯುತ್ತಿದೆ. ಈ ಪ್ರವಾಹದ

ಮಂದಗತಿಗೆ ಇನ್ನೊಂದು ಕಾರಣವೂ ಉಂಟು. ಇಲ್ಲಿ ಹರಿದು ಬರುವ ನೀರು ಇಲ್ಲಿಂದ ಆರು ಮೈಲುಗಳ ಅಂತರದಲ್ಲಿದ್ದ ತಡಸಲಿನಿಂದ ಕೆಳಗೆ ಬಿದ್ದು ಬರುವ ನೀರು. ಪೆಟ್ಟು ತಿಂದು ಮೈಜಾಡಿಸಿ, ತತ್ತರಿಸಿ ಸಾಗುವ ಉಡಾಳ ಹುಡುಗನಂತೆ ಇದರ ಅವಸ್ಥೆಯಾಗಿದೆ. ಆದರೂ ದಂಡೆಯ ಮೇಲೆ ಬಿದ್ದ ಮಳಲು, ನೀರನ್ನು ಸಾಧ್ಯವಾದಷ್ಟು ತಿಳಿಯಾಗಿ ಮಾಡು ತ್ತದೆ. ಊರ ಸನಿಯದಲ್ಲಿಯೆ ಒಂದು ಗುಡ್ಡ. ಅದನ್ನು ಹಿಂದುಗಳು "ಪಾರ್ವತಿಯ ಗುಡ್ಡ' ವೆಂತಲೂ, ಮುಸಲ್ಮಾನರು 'ಪೀರಮುಹಮ್ಮದ"ನ ಗುಡ್ಡವೆಂತಲೂ ಕರೆಯುತ್ತಾರೆ. ಶಿವರಾತ್ರಿಯದಿನ ಗೋವಿನಪುರದ ಜನರೆಲ್ಲ ಈ ಗುಡ್ಡವನ್ನು ಹತ್ತಿ ಬರುವದು ವಾಡಿಕೆಯಾಗಿದೆ. ಅದರ ಮೇಲೆ ಒಂದು ಗುಡಿ ಇರಬಹುದೆಂಬ ಅವಶೇಷ ಕಂಡುಬಂದರೂ ಈಗ ಅಲ್ಲಿ ಗುಡಿ ಇಲ್ಲ. ಸುಣ್ಣದ ಪಟ್ಟಿಗಳಿಂದ ಅಲಂಕೃತವಾದ ಒಂದು ಚಿಕ್ಕ ಕಟ್ಟಡ ಮಾತ್ರ ಕಾಣುತ್ತದೆ. ಒಳಗೆ ಬಣ್ಣದ ಕಿನಕಾಪಿನ ಜುಬ್ಬ ತೊಟ್ಟ ಕಲ್ಲೊಂದು ಮಾತ್ರ ಈಗ ಶೋಭಿಸುತ್ತಿದೆ. ಇದರ ಹತ್ತಿರವೇ ನಿಂತು ಮುಸಲ್ಮಾನ ಬಂಧು ಪ್ರತಿದಿನ ಪ್ರಾರ್ಥನೆ ಸಲ್ಲಿಸುತ್ತಾನೆ. ಒಂದು ಕಾಲಕ್ಕೆ ಇದು ಪಾರ್ವತಿ ಅಮ್ಮನ ಸ್ಥಾನವಾಗಿತ್ತೆಂದು ಹೇಳುವ ಜನ ಈಗಲೂ ಅಭಿಮಾನದಿಂದ ಹೇಳುತ್ತಾರೆ. ಆದರೆ ಆ ಮಾತನ್ನು ನೆನಪಿಗೆ ತರುವ ಯಾವ ಕಾರ್ಯಾಚರಣೆಯೂ ನಡೆಯುತ್ತಿಲ್ಲ. ಊರ ಸುತ್ತು ಮುತ್ತಲೂ ನಿಸರ್ಗಸುಂದರಿ ತನ್ಮಯಳಾಗಿ ನಿಂತಿದ್ದಾಳೆ. ದೂರದ ಕಾಡು ರುದ್ರ ರಮಣೀಯವಾಗಿ ಶೋಭಿಸುತ್ತದೆ. ಮಳೆಗಾಲದಲ್ಲಿಯಂತೂ ಈ ಕಾಡಿನ ಸೌಂದರ್ಯ ಇನ್ನೂ ಹೆಚ್ಚುತ್ತಿದೆ. ರಸಿಕರನೇಕರು ಆ ಕಾಡಿ ನಲ್ಲಿರುವ ಕೊಳ್ಳಗಳಲ್ಲಿ ಸುತ್ತಿಬರುವದೂ ಉಂಟು. ಈ ಊರ ಸನಿಯ ದಲ್ಲಿ ಇನ್ನೊಂದು ಚಿಕ್ಕನದಿ ಘಟಪ್ರಭೆಯನ್ನು ಕೂಡುತ್ತದೆ. ಆ ಸ್ಥಳ ದಲ್ಲಿ ಒಂದು ದೇವಾಲಯ ಕಂಗೊಳಿಸುತ್ತದೆ. ಅದಕ್ಕೆ ಸಂಗಮೇಶ್ವರ ದೇವಾಲಯ ಎಂದು ಹೆಸರು. ನದಿಗೆ ಮಹಾಪೂರ ಬಂದಾಗ ಈ ದೇವಾ ಲಯದ ಸುತ್ತಲೂ ನೀರು ನಿಲ್ಲುತ್ತದೆ. ಹೀಗೆ ಗೋವಿನಪುರ ನಿಸರ್ಗದ ಮಡಿಲಲ್ಲಿ ಮಲಗಿದೆ.

ತನ್ನ ಕಾವ್ಯ ಜೀವನದಲ್ಲಿಯೇ ಬಾಳ ಸಾರ್ಥಕತೆಯ ಕನಸು

ಕಾಣುತ್ತಿದ್ದ ವಿಶ್ವಾಸನಿಗೆ ಗೋವಿನಪುರದ ವಾಸ್ತವ್ಯ, ಕಾವ್ಯ ದೇವಿಯ ವರಪ್ರಸಾದವೆನ್ನಿಸಿತು. ನಿಸರ್ಗಸುಂದರಿ ತನ್ನನ್ನು ಕೈಮಾಡಿ ಕರೆದಳೆಂದೇ ಅವನು ಭಾವಿಸಿದ. ಈ ನಿಸರ್ಗ ಸುಂದರಿಯ ಸಹವಾಸದಲ್ಲಿ ಸ್ವರ್ಗೀಯ ಸುಂದರಿಯಾದ ಹೆಂಡತಿಯೊಡನೆ ಬಾಳುವ ತನ್ನ ಬಾಳು ನಿಜವಾಗಿಯೂ ಸಾರ್ಥಕ ಎನ್ನಿಸಿತು; ಸಂತೋಷ ಮೇರೆವಪ್ಪಿ ಹರಿಯತೊಡಗಿತು. ಈ ಸಂತೋಷಕ್ಕೆ ಅವನ ಸ್ವಾತಂತ್ರ್ಯದ ಬಾಳೂ ಕಾರಣವಾಗಿತ್ತು. ಇನ್ನು ಮೇಲೆ ತಾನು ಅನಾಮಧೇಯನಾಗಿ ಬಾಳುವ ಉಂಡಾಡಿಗನೆಂದು ಅನ್ನಿಸಿಕೊಳ್ಳುವ ಸಂದರ್ಭ ತಪ್ಪಿದ್ದಕ್ಕಾಗಿ ತೃಪ್ತಿಗೊಂಡ. ಆದರೆ ಈ ತೃಪ್ತಿಯ ಜತೆಗೆ ಅಣ್ಣನ ವಿರಹದ ನೋಡವೂ ಆಗಾಗ ಸುಳಿದು ಬರುತ್ತಿತ್ತು. ಆ ಮಟ್ಟಿಗೆ ಅವನು ಕಾತರನೂ ಆಗುತ್ತಿದ್ದ. ದಿನ ಹೋದಂತೆ ಈ ಭಾವವೂ ಮರೆಯಾಗತೊಡಗಿತು. ತಾನು, ತನ್ನ ಮಕ್ಕಳು, ತಾರಾ ಇವರೇ ಅವನ ಭಾವ ರಾಜ್ಯದಲ್ಲಿ ಮನೆಮಾಡಿಕೊಂಡರು. ಚಿಕ್ಕದಾದರೂ ಚೊಕ್ಕದಾದ ಮನೆಯೇ ಅವನ ಕಾವ್ಯಾಲಯವಾಯಿತು. ಹೃದಯದ ಹಿಗ್ಗು ಕಾವ್ಯದ ಹೊಳೆ ಹರಿಯಿಸತೊಡಗಿತು.

ಈ ಹೊಸ ಜೀವನಕ್ಕೆ ಹೊಂದಿಕೊಳ್ಳಲು ತಾರಾನಿಗೆ ಮೊದಮೊದಲು ತುಂಬ ಕಷ್ಟವಾಗುತ್ತಿತ್ತು. ನಿಮಿನಿಮಿಷಕ್ಕೆ ಅವಳಿಗೆ ತುಂಗಮ್ಮ ನೆನಪಾಗುತ್ತಿದ್ದಳು. ಬರುವಾಗಿನ ಆ ದೃಶ್ಯ ಅವಳ ಕರುಳು ಕಿವಚುತ್ತಿತ್ತು. ತುಂಗಮ್ಮನ ತೀಕ್ಷ್ಣ ವಾಗ್ಬಾಣಗಳ ಅಭಾವದಿಂದ ಅವಳಿಗೀಗ ಭಣಭಣ ಎನ್ನಿಸುತ್ತಿತ್ತು. ಭಾವನವರ ಉದಾರ ಹೃದಯದ ನೆನಪಾಗಿ ಅವಳ ಕಣ್ಣಲ್ಲಿ ನೀರು ಚಿಮ್ಮುತ್ತಿದ್ದವು. ಈಗ ದಿನಗಳುರುಳುತ್ತಿರುವಂತೆ ಸಂಸಾರದ ಕೆಲಸಗಳು ಹೆಚ್ಚಾಗಲಾರಂಭಿಸಲು ಮೊದಲಿನ ಜೀವನದ ಮೇಲೆ ಮುಸುಕು ಬರತೊಡಗಿತು. ಆದರೂ ಒಮ್ಮೊಮ್ಮೆ ಆ ನೆನಪಿನಿಂದ ಅವಳಿಗೆ ಬಹಳ ಸಂಕಟವಾಗುವದು. ಒಮ್ಮೆ ವಿಶ್ವಾಸ ತನ್ನ ತೃಪ್ತಿಯನ್ನು ಸೂಸುತ್ತ– "ಅತ್ತಿಗೆ ನಮ್ಮನ್ನು ಹೊರಗೆ ಹಾಕಿ ಅನಂತ ಉಪಕಾರವನ್ನೇ ಮಾಡಿದಳು" ಎಂದಾಗ ತಾರಾ ಆ ಮಾತನ್ನು ಅಲ್ಲಗಳೆಯುತ್ತ– "ಅವರು ನಮ್ಮನ್ನು ಹೊರಗೆ ಹಾಕಲಿಲ್ಲ. ಪರಸ್ಥಿತಿ ನಮ್ಮನ್ನು ಹೊರಗೆ

ತಳ್ಳಿತು. ನಾವೇ ಅಪರಾಧಿಗಳು" ಎಂದು ನುಡಿದ ಹೆಂಡತಿಯ ಮಾತಿಗೆ ವಿಶ್ವಾಸ ಮೌನವಾಗಬೇಕಾಯಿತು. ಆ ವಿವೇಕ ಪೂರ್ಣವಾದ ಮಾತು ಗಳಲ್ಲಿ ಅವನು ತನ್ನ ಸಣ್ಣ..ನವನ್ನು ಕಂಡುಕೊಂಡ.

ಶಿಕ್ಷಣ ಕ್ಷೇತ್ರವಲ್ಲಿ ತೀರ ಹೊಸಬನಾದರೂ ಕೆಲದಿನಗಳಲ್ಲಿಯೆ ವಿಶ್ವಾಸ ವಿದ್ಯಾರ್ಥಿಗಳ ಅಚ್ಚು-ಮೆಚ್ಚಿನ ಶಿಕ್ಷಕನಾದ. ಅದಕ್ಕೆ ಅವನ ಶಿಕ್ಷಣ ಸಾಮರ್ಥ್ಯಕಿಂತ ಅವನ ಕಾವ್ಯ ವಾಚನ, ವಿದ್ಯಾರ್ಥಿಗಳೊಡನೆ ಇಟ್ಟು ಕೊಂಡ ಸಂಬಂಧ, ಸ್ವಭಾವಗಳೇ ಕಾರಣವಾಗಿದ್ದವು. ಅವರೊಡನೆ ಅವನು ಮನಬಿಚ್ಚಿ ಮಾತನಾಡುವನು;- ಕೂಡಿ ಆಡುವನು; ಹರಟೆ ಹೊಡೆಯು ವನು;- ಕತೆ ಹೇಳುವನು. ಆಟದ ಬಯಲಿನಲ್ಲೇ ಒಮ್ಮೊಮ್ಮೆ ಅವನ ಕಾವ್ಯಗಾಯನವೂ ಆಗುತ್ತಿತ್ತು. ಹಳೆಯ ವಾತಾವರಣದಲ್ಲಿ ದಣಿದ ವಿದ್ಯಾರ್ಥಿಗಳಿಗೆ ಅವನು ಹೊಸ ಗಾಳಿ ಹಾಕಿದ. ಅವರಿಗೆ ಕೇವಲ ಗುರು ಮಾತ್ರವೇ ಆಗದೆ ಗೆಳೆಯನೂ ಆದ. ಅವನ ವಿದ್ಯಾರ್ಥಿ ಪ್ರಿಯ ತೆಗೆ ಮುಖ್ಯಾಧ್ಯಾಪಕರೂ ಮೆಚ್ಚಿದರು. ತಮ್ಮ ಶಾಲೆಯ ಭಾಗ್ಯೋದ ಯಕ್ಕೆ ಆವನು ದುಡಿಯುವನೆಂದು ತಿಳಿದುಕೊಂಡ ಅವರು ಅವನಿಗೆ ಉತ್ಸಾಹ, ಪುರಸ್ಕಾರಗಳನ್ನು ಕೊಡತೊಡಗಿದರು.

ಸಂತೆಯ ದಿನ ಮುಂಜಾವು ಮಾತ್ರ ಶಾಲೆಯ ಕೆಲಸ. ಮಧ್ಯಾನ್ಹ ಬಿಡುವು. ಈ ಬಿಡುವಿನ ವೇಳೆಯನ್ನು ಅವನು ವ್ಯರ್ಥವಾಗಿ ಹೋಗ ಗೊಡುತ್ತಿರಲಿಲ್ಲ. ..ಎಕ್ಕಳನ್ನು ಕರೆದುಕೊಂಡು ವಿಹಾರಕ್ಕೆ ಹೋಗುವನು. ಇಂತಹ ವಿಹಾರಗಳನ್ನು ತಾರಾ ಬಹಳವಾಗಿ ಮೆಚ್ಚು ವಳು. ಅಂತೆಯೇ ಅವಳು ಸಂತೆಯ ದಿನ, ಭಾನುವಾರಗಳನ್ನು ದಾರಿ ಕಾಯುತ್ತಿದ್ದಳು.

ಬಂದ ಕೆಲ ದಿನಗಳಲ್ಲಿಯೆ ಗೋವಿನಪುರದ ಸೃಷ್ಟಿ ಸೌಂದರ್ಯದ ಮುಖ್ಯ, ಮುಖ್ಯ ಸ್ಥಳಗಳನ್ನು ಇಬ್ಬರೂ ಸುತ್ತಾಡಿಕೊಂಡು ಬಂದರು. ಒಂದು ವಾರ 'ಭೈರವಿ ಕೊಳ್ಳ'ಕ್ಕೆ ಹೋದರೆ, ಇನ್ನೊಂದು ವಾರ 'ಕರೆವ್ವನ ಕೊಳ'ಕ್ಕೆ ಮತ್ತೊಂದು ವಾರ 'ಘಟ್ಟದ ಬಸವಣ್ಣ'ನ ಸನ್ನಿಧಾನಕ್ಕೆ

ಹೋಗುವರು. ಪ್ರತಿ ಸಂಜೆಯು ಮಧ್ಯಾಹ್ನ ಅವರು ತಡಸಲಿಗೆ ತಪ್ಪದೆ ಹೋಗುತ್ತಿದ್ದರು. ಅಲ್ಲಿಯ ರಮಣೀಯತೆಯನ್ನು ಕಂಡು ತಾರಾ ಮುಗ್ಧಳಾಗಿದ್ದಳು. ಅಪಾರವಾಗಿ ಬೀಳುವ ಜಲರಾಶಿಯು ಎದುರು ತಾಸುಗಟ್ಟಲೆ ಕುಳಿತುಕೊಳ್ಳುವರು. ತಂತಿಯ ಪೂಲಿನ ಮೇಲೆ ಚಪ್ಪಾಳೆಯಿಕ್ಕುತ್ತ ಓಡುತ್ತಿರುವ ಮಕ್ಕಳೊಡನೆ ತಾನೂ ಮಗುವಾಗಿ ಓಡಿಯಾಡುವಳು. ಅವಳಿಗೆ ಆ ಸ್ಥಳವನ್ನು ಬಿಡುವವೇ ಆಗುತ್ತಿರಲಿಲ್ಲ. ಅಷ್ಟು ಮೆಚ್ಚಿ ಬಿಟ್ಟಿದ್ದಳು.

ಸ್ವತಂತ್ರ ಜೀವನದ ಸುಖವನ್ನು ತಾರಾ ತುಂಬ ಅನುಭವಿಸುತ್ತಿದ್ದಳು. ಅವಳ ಆರೋಗ್ಯವೂ ಸುಧಾರಿಸತೊಡಗಿತು. ಮಕ್ಕಳೂ ತುಂಬಿಕೊಂಡವು. ಅವಳ ಮನೆಯಲ್ಲೀಗ ಅವಳದೇ ಅಧಿಕಾರ. ಇಂತಹ ಬಾಳಿಗಾಗಿ ಅವಳು ಹಾತೊರೆಯುತ್ತಿದ್ದಳು;- ಕನಸು ಕಟ್ಟಿದ್ದಳು. ಈಗ ಆ ಕನಸುಗಳೆಲ್ಲ ನೆನಸಾದುದರಿಂದ ಅವಳಿಗೆ ತನ್ನ ಜೀವನ ಧನ್ಯವಾಗಿತು.

ವಿಶ್ವಾಸನ ಕಾವ್ಯಲಹರಿ ಓತಪ್ರೇತವಾಗಿ ಹರಿಯುತ್ತಲಿತ್ತು. ಗೋವಿನಪುರದ ಸೃಷ್ಟಿ ಸೌಂದರ್ಯವೆಲ್ಲ ಅವನ ಹಾಡಿನಲ್ಲಿ ದೇವನದಿಯಾಗಿ ಹರಿಯಿತು. ಕನ್ನಡ ನಾಡಿನಲ್ಲೆಲ್ಲ ಈ ಕವನಗಳು ಜನಪ್ರಿಯವಾದವು. ಅನೇಕ ಮೆಚ್ಚಿಗೆಯ ಓಲೆಗಳು ಬಂದವು. ನೈಸರ್ಗಿಕ ಕವಿಯೆಂದು ಅನೇಕ ಪತ್ರಿಕೆಗಳು ಹೊಗಳಿದವು. ಈ ಹೊಗಳಿಕೆಯನ್ನು ಓದುತ್ತಿರುವಾಗ ತಾರಾನಿಗೆ ಆಗುತ್ತಿರುವ ಆನಂದ ತುಂಬ. ತಾನು ಪ್ರತಿಭಾವಂತನ ಮಡದಿಯೆಂಬ ಹೆಮ್ಮೆಯಲ್ಲಿ ಆವಳು ಸುಖ ಕಾಣುತ್ತಿದ್ದಳು. ಅಂತೆಯೆ ಮನೆಯ ಯಾವ ಕೆಲಸವನ್ನೂ ಅವನಿಗೆ ಹಚ್ಚದೆ ತಾನೇ ಮಾಡುತ್ತಿದ್ದಳು. ಅವನನ್ನು ಕಾವ್ಯದೇವೆಗೆ ಕೊಟ್ಟುಬಿಟ್ಟು ತುಂಬ ಪ್ರೋತ್ಸಾಹಿಸುತ್ತಿದ್ದಳು. ಆ ಕತೆಗಳೆಲ್ಲ ಪ್ರಕಟವಾಗಿ ಬಂದಾಗ ಅವಳ ಹಿಗ್ಗು ಮೇರೆದಪ್ಪುತ್ತಿತ್ತು. ಅವನ್ನವಳು ಅನೇಕ ಸಾರೆ ಓದುತ್ತಿದ್ದಳಲ್ಲದೆ ನೆರೆಯವರ ಮುಂದೆಯೂ ಓದಿ ತೋರಿಸುತ್ತಿದ್ದಳು. ಹೀಗೆ ಕೆಲ ತಿಂಗಳಲ್ಲಿಯೆ ಅನೇಕ ವರುಷಗಳ ವರೆಗೆ ಮಾಡದ ಕೆಲಸವನ್ನು ಅವನು

ಮಾಡಿಮುಗಿಸಿದ್ದ. ಈಗವನಿಗೆ ಶಾಲೆಯ ಕೆಲಸ ಅಷ್ಟು ಮುಖ್ಯವಾಗಿ ತೋರದಾಯಿತು. ತಾನಾಯಿತು ತನ್ನ ಕಾವ್ಯವಾಯಿತು— ಎನ್ನುವಂತಾಯಿತು ಅವನ ಪರಸ್ಥಿತಿ.

ನಾಡಹಬ್ಬದ ದಿನಗಳು ಸಮೀಪವಾಗುತ್ತಿರುವಂತೆ ವಿಶ್ವಾಸನಿಗೊಂದು ಯೋಚನೆ ಹೊಳೆಯಿತು. ಗೋವಿಂದಪುರದಲ್ಲೂ ಈ ಹಬ್ಬವನ್ನೇಕೆ ಆಚರಿಸಬಾರದು ಎಂಬುದೇ ಆ ಯೋಚನೆ. ಈ ಮಾತನ್ನು ಕೆಲವು ಶಿಕ್ಷಕರ ಮುಂದೆ ಎತ್ತಿದ. ಆಗಬಹುದೆಂದರು. ಮುಖ್ಯಾಧ್ಯಾಪಕರು ತಮ್ಮ ಒಪ್ಪಿಗೆಯನ್ನಿತ್ತರು. ಕೂಡಲೆ 'ನಾಡಹಬ್ಬ' ಸಮಿತಿ ನಿರ್ಮಾಣವಾಯಿತು. ವಿಶ್ವಾಸನೆ ಅದಕ್ಕೆ ಸೂತ್ರಧಾರನಾದ. ಕನ್ನಡ ನಾಡಿನ ಸುಪ್ರಸಿದ್ಧ ಸಾಹಿತಿಗಳಿಗೆಲ್ಲ ಆಮಂತ್ರಣ ಹೋದವು. ಸಿದ್ಧತೆ ಭರದಿಂದ ಸಾಗಿತು. ವಿದ್ಯಾರ್ಥಿಗಳಲ್ಲಿ ಒಂದು ಹೊಸ ಚೈತನ್ಯ ತುಂಬಿತು. ನಾಡಹಬ್ಬದ ದಿನಗಳೆಲ್ಲ ಅಪೂರ್ವವಾಗಿಯೇ ಕಳೆದವು. ಸುಪ್ರಸಿದ್ಧ ಸಾಹಿತ್ಯಕರ ಉಪನ್ಯಾಸಗಳು, ಮನರಂಜನೆಯ ಕಾರ್ಯಕ್ರಮಗಳು ಜನರ ಮನಸ್ಸನ್ನು ಸೂರೆಗೊಂಡವು. ಬಂದವರೆಲ್ಲ ವಿಶ್ವಾಸನ ಅತಿಥಿಗಳಾಗಿ ಬಂದು ಅವನಲ್ಲಿಯೇ ಉಳಿದುಕೊಳ್ಳುತ್ತಿದ್ದರು. ಈ ಸಹವಾಸದಲ್ಲವನಿಗೆ ತುಂಬಾ ತೃಪ್ತಿ. ಭಾಷಣದ ಪ್ರಾರಂಭಕ್ಕೆ ಈ ಅತಿಥಿಗಳು ಅವನ ಕಾವ್ಯ ಪ್ರತಿಭೆ ಹೊಗಳಿ ತಮ್ಮ ಭಾಷಣ ಆರಂಭಿಸುವದು ವಾಡಿಕೆಯಾಗಿತ್ತು. ಈ ಹೊಗಳಿಕೆಯನ್ನು ಕೇಳಿದಾಗ ಅವನಿಗೆ ಕೋಡು ಮೂಡಿದಂತೆನಿಸುತ್ತಿತ್ತು. ತಾರಾ ಅಭಿಮಾನದಿಂದ ಹೆಂಗಳೆಯರನ್ನೆಲ್ಲ ನೋಡಿ ತನ್ನ ಸಂತೋಷ ವ್ಯಕ್ತಪಡಿಸುತ್ತಿದ್ದಳು.

ನಾಡಹಬ್ಬದ ಕಾರ್ಯಕ್ರಮಗಳೆಲ್ಲ ಯಶಸ್ವಿಯಾಗಿ ಜರುಗಿದವು. ಜನರು ವಿಶ್ವಾಸನ ಕಾರ್ಯಕ್ಷಮತೆಯನ್ನು ತುಂಬ ಕೊಂಡಾಡಿದರು. ಈ ಹೊಗಳಿಕೆ ಕೆಲವು ಸಹೋದ್ಯೋಗಿಗಳಲ್ಲಿ ಮತ್ಸರ ಹುಟ್ಟಿಸಿತು. ಮೊನ್ನೆ, ಮೊನ್ನೆ ಬಂದವನ ಪ್ರತಿಷ್ಠೆ ಕೆಲವರಿಗಂತೂ ನುಂಗಲಾರದ ತುತ್ತಾಯಿತು. ಇದರ ಜೊತೆಗೆ ಇನ್ನೊಂದು ಕೆಲಸವೂ ಆಯಿತು. ಸಮಿತಿಯವರು ಅತಿಥಿಗಳ ದಾರಿಯ ವೆಚ್ಚವನ್ನು ಮಾತ್ರ ಕೊಡುತ್ತಿದ್ದು

ದರಿಂದ ಅವರ 'ಸರಬರಾಯಿ'ಯ ವೆಚ್ಚವನ್ನೆಲ್ಲ ವಿಶ್ವಾಸನೆ ಸಹಿಸ ಬೇಕಾಯಿತು. ಅವರು ತನ್ನಲ್ಲಿರುವಾಗ ಅವನಿಗೆ ಬಹಳ ಹಿತವಾಗಿಯೇ ಕಂಡಿತ್ತು. ಈಗ ಅವರೆಲ್ಲರ ಸಲುವಾಗಿ ಮಾಡಿದ ನೂರು, ನೂರಾ ಐವತ್ತು ರೂಪಾಯಿಗಳ ವೆಚ್ಚ ಅವನಿಗೆ ತಲೆಭಾರವಾಯಿತು. ಅವನು ಹೌಹಾರಿದ.

"ಬಂದವರು ನಮ್ಮ ಮನೆ ಲಗ್ನ-ಮುಂಜಿಗೆ ಬಂದಿರಲಿಲ್ಲ. ಅವರ ವೆಚ್ಚವನ್ನು ನಾವೇಕೆ ವಹಿಸಬೇಕು? ಸಮಿತಿಯವರಿಂದ ಈ ಹಣ ತೆಗೆದುಕೊಂಡರೆ ಅನ್ಯಾಯವೇನು?" ತಾರಾ ಆ ದಿನ ಮಾತು ತೆಗೆದಳು. ಅವಳಿಗೆ ಈ ಸಾಲ ಬಹಳ ತಲೆಭಾರವಾಗಿ ತೋರಿತು.

"ಇದು ಹೇಗೆ ಸಾಧ್ಯ ತಾರಾ? ಬಂದ ಅತಿಥಿಗಳಿಗೆ ಹಾಕಿದ ಅನ್ನದ ವೆಚ್ಚವನ್ನು ಹೇಗೆ ಕೇಳುವದು? ಅಲ್ಲದೆ ಸಮಿತಿಯಲ್ಲಿ ಈಗ ಕೊಡಲು ಹಣವಾದರೂ ಎಲ್ಲಿದೆ ಹೇಳು."

"ಅನ್ನದ ವೆಚ್ಚವನ್ನು ನಾನು ಬೇಡೆಂದು ಹೇಳಲಿಲ್ಲ. ಅವರ ಸಿಗರೇಟಿನ ವೆಚ್ಚ, ಅವರೊಡನೆ ಅತ್ತಿತ್ತ ಸುತ್ತಾಡಿದ ವೆಚ್ಚ. ಇವುಗಳಿಗಾಗಿಯೇ ಹೆಚ್ಚಾಗಿ ವೆಚ್ಚವಾಗಿದೆ. ಇದನ್ನು ಸಮಿತಿ ಕೊಡಬೇಕು. ಹಣವಿರದಿದ್ದರೆ ಮತ್ತೆ ವಂತಿಕೆ ಪ್ರಾರಂಭಿಸಲಿ-ಅದಕ್ಕೇನು."

"ತಾರಾ, ಹಣ ಕೇಳುವದು ನನ್ನಿಂದ ಸಾಧ್ಯವಿಲ್ಲ."

"ಹಾಗಾದರೆ ಈ ಸಾಲ ಹೇಗೆ ತೀರಿಸುವಿರಿ?"

ವಿಶ್ವಾಸನ ಕಣ್ಣುಗಳು ಚಿನ್ನದ ಬಳೆಗಳೆಡೆಗೆ ಚಲಿಸಿದವು. ಆದರೆ ಆ ಸೂಚನೆ ಮಾಡಲು ಅವನಿಗೆ ಧೈರ್ಯ ಸಾಲಲಿಲ್ಲ. ಮುಂದೆ ಒಂದು ದಿನ ಮುಖ್ಯಾಧ್ಯಾಪಕರೆದುರು ಈ ಮಾತೆತ್ತಿದಾಗ ಇನ್ನೊಬ್ಬ ಶಿಕ್ಷಕರೂ ಅಲ್ಲಿದ್ದರು. ಅವರು ಈ ಮಾತನ್ನು ವ್ಯಂಗ್ಯವಾಗಿ- "ಅವರು ನಿಮ್ಮನ್ನು ಸಾರ್ವಜನಿಕವಾಗಿ ಹೊಗಳಿದ ಮಾತಿಗೂ, ನೀವು ಮಾಡಿದ ಸರಬರಾಯಿಗೂ ಸರಿ ಹೋಯಿತು. ಹಾಗೆ ಕೇಳಿದರೆ ನಿಮಗೆ ಹೊಗಳಿಕೆ ಅಗ್ಗವಾಗಿಯೇ ದೊರೆಯಿತು" ಎಂದು ಕಟ್ಟಿಗೆ ಮುರಿದಂತೆ ನುಡಿದರು.

"ಅವರಿಗೆ ನನ್ನನ್ನು ಹೊಗಳಲು ಹೇಳಿದೆನೆ?"

"ಇದು ಹೇಳುವ ಮಾತಲ್ಲ ವಿಶ್ವಾಸರಾವ. ಅತಿಥಿಗಳು ಸೂಕ್ಷ್ಮ ವಾಗಿ ತಿಳಿದುಕೊಳ್ಳುವ ಮಾತು. ಅನ್ನದ ರಿಣ, ಸರಬರಾಯಿಯ ಜೋರು ಅವರ ನಾಲಿಗೆಯನ್ನು ಕುದುಂಸದಿದ್ದರೆ ಹೆಚ್ಚೇನೂ ಅಲ್ಲ."

ಆ ಶಿಕ್ಷಕರು ಹೀಗೆ ಚುಚ್ಚಿ ಮರೆಯಾದರು. ವಿಶ್ವಾಸ ಮುಂದೆ ಹಣದ ಮಾತೆತ್ತಲಿಲ್ಲ. ತಾರಾನಿಗೆ ಮಾತ್ರ ಈ ನಾಡಹಬ್ಬದ ಪರಿ ಣಾಮ ಸಾಕಷ್ಟಾಯಿತು. ಅವಳು ಅಂದಿನಿಂದ ವಿಹಾರವನ್ನು ನಿಲ್ಲಿ ಸಿದಳು ಇದರಿಂದ ಗಂಡನಿಗೆ ನೋವಾಗಬಾರದೆಂದು 'ನೋಡುವದನ್ನೆಲ್ಲ ನೋಡಿಯಾಗಿದೆ. ಅದನ್ನೇ ತಿರುತಿರುಗಿ ನೋಡಲು ನಾನೇನು ನಿಮ್ಮಂತೆ ಕವಿಯೆ ?' ಎಂದು ಹಸನ್ಮುಖಿಯಾಗಿಯೇ ಹೇಳಿದಳು. ಅಂದಿನಿಂದ ವಿಶ್ವಾಸ ಒಬ್ಬನೇ ಅಲೆಯತೊಡಗಿದ. ಇಷ್ಟರಿಂದಲೆ ಈ ಮುಗ್ಗಟ್ಟು ಬಿಡಲಾರದೆಂದು ತಿಳಿದ ತಾರಾ ಹಾಲಿನ ವೆಚ್ಚ ಕಡಿಮೆಮಾಡಿದಳು. ತುಪ್ಪದ ವೆಚ್ಚ ಅರ್ಧಕ್ಕಿಳಿಸಿದಳು. ಹೆಚ್ಚಿನ ತಿಂಡಿ ತಡೆದಳು. ಹೀಗೆ ಸಂಸಾರವನ್ನು ಹಿಡಿತದಲ್ಲಿ ತಂದು ಸಾಗಿಸಿದರೂ ನಾಡಹಬ್ಬದ ಸಾಲ ತೀರಿಸಲು ಅವಳಿಗೆ ಐದು ತಿಂಗಳು ಬೇಕಾದವು.

ಈ ಅವಧಿಯಲ್ಲಿ ವಿಶ್ವಾಸನ ನಿಸರ್ಗ ಮಗ್ನತೆ ಜೋರಾಗಿತ್ತು. ಹೆಂಡತಿ ಸಂಗಡ ಇರುವಾಗ ಅವಳ ಒತ್ತಾಯಕ್ಕಾದರೂ ಅವನು ಅವಳನ್ನು ಹಿಂಬಾಲಿಸುವದು ಅನಿವಾರ್ಯವಾಗುತ್ತಿತ್ತು. ಈಗ ಆ ಒತ್ತಾಯವಿರಲಿಲ್ಲ. ವನಸಿರಿಯ ಮಧ್ಯದಲ್ಲವನು ಏಕಾಂಗಿಯಾಗಿಗಂಟೆಗಟ್ಟಲೆ ವೇಳೆ ಕಳೆಯುತ್ತಿದ್ದ. ಜಲಪ್ರಪಾತದೆದುರು ಮಂತ್ರ ಮುಗ್ಧನಂತೆ ಕುಳಿತು ಬಿಡುತ್ತಿದ್ದ. ಕಾಡು ಮೇಡಗಳಲ್ಲಿ ಅಲೆದಾಡುತ್ತಿದ್ದ. ಹರಿಯುವ ನೀರು, ಏರಿಸಿಂತ ಕೋಡುಗಲ್ಲು ಗಳು- ಅವನಲ್ಲಿ ಹೆಚ್ಚಿನ ಸ್ಫೂರ್ತಿಯನ್ನು ಕೊಡುತ್ತಿದ್ದವು. ಮಧ್ಯಾಹ್ನವಾದರೂ ಅವನಿಗೆ ಮನೆಯ ಎಚ್ಚರವಿಲ್ಲ; ಶಾಲೆಯ ವೇಳೆ ಆಗಿಬಿಡುವ ಪರಿವೆಯೂ ಇಲ್ಲ

ಗಂಡನಲ್ಲುಂಟಾದ ಈ ಪರಿವರ್ತನೆಗೆ ಪ್ರಾರಂಭದಲ್ಲಿ ತಾರಾ, ತುಂಬಾ ಅಭಿಮಾನಪಡುತ್ತಿದ್ದಳು. ಪತಿಯಮೇಲೆ ನಿಸರ್ಗದೇವಿ ತನ್ನ

ಕೃಪಾಪ್ರಸಾದ ನೀಡುತ್ತಿರುವಳೆಂದು ಅವಳು ಸಮಾಧಾನದಿಂದಿರುತ್ತಿದ್ದಳು. ಈಚೆಗೆ ಹೊರಹೊಮ್ಮುತ್ತಿರುವ ಅವನ ಪರಿಪಕ್ವವಾದ ಕವನಗಳನ್ನು ಕಂಡಾಗ ಅವಳಿಗೆ ತನ್ನ ವಿಚಾರ ಸರಿ ಎನ್ನಿಸುತ್ತಿತ್ತು. ಅವಳು ಅದಕ್ಕಾಗಿ ಅವನಿಗೆ ಪ್ರೋತ್ಸಾಹವನ್ನೇ ನೀಡುತ್ತಿದ್ದಳು. ಈಚೆಗೆ ಅವನು ಸಂಸಾರದಲ್ಲಿ ತೋರುತ್ತಿರುವ ಅನಾಸಕ್ತಿಯನ್ನೂ ಅವಳು ಕಡೆಗಣಿಸಿದಳು. ಕವಿಯ ಸ್ಫೂರ್ತಿಗೆ ತಾನಾಗಲಿ, ಮಕ್ಕಳಾಗಲಿ- ಎಂದೂ ಅಡ್ಡಬಾರದಂತೆ ದಕ್ಷತೆವಹಿಸುತ್ತಿದ್ದಳು.

ಬರಬರುತ್ತ ಮಾತು ವಿಪರೀತಕ್ಕಿಟ್ಟುಕೊಂಡಿತು. ಮಧ್ಯಾನ್ನ ಬಿಸಿಲೇರಿ ಬಂದರೂ ಅವನು ಮನೆಗೇ ಬರುತ್ತಿರಲಿಲ್ಲ. ಶಾಲೆಯ ಜವಾನ ಮನೆಗೆ ಬಂದು ವಿಚಾರಿಸಿಕೊಂಡು ಹೋಗುವದು ದಿನದ ಮಾತಾಯಿತು. ತಾರಾ ಬೆದರಿದಳು. ಇದು ಹೀಗೆಯೆ ಸಾಗಿದರೆ ಅವನ ನೌಕರಿಗೆ ಕೂಡ ಧಕ್ಕೆ ಬರಬಹುದೆಂದೆನ್ನಿಸಿತು. ಈ ದಿನ ಈ ಸಂಗತಿಯನ್ನು ಗಂಡನಿಗೆ ತಿಳಿಸಿ ಒಂದು ನಿಯಮ ಪಾಲಿಸಲು ಒತ್ತಾಯ ಮಾಡಬೇಕೆಂದು ನಿರ್ಧರಿಸಿದಳು.

ಶಾಲೆ ಪ್ರಾರಂಭವಾಗಿ ಎರಡು ತಾಸು ಕಳೆದರೂ ವಿಶ್ವಾಸ ಮನೆಗೆ ಬರಲೇಯಿಲ್ಲ. ತಾರಾ ಮಣೆ ಹಾಕಿ, ತಾಟಿಟ್ಟು ಅವನ ದಾರಿಕಾಯುದ್ದು ಬೇಸತ್ತಳು. ಅವನು ಬರಲೇಯಿಲ್ಲ. ಮಕ್ಕಳಿಗೆ ಉಣಿಸಿ ಅವರನ್ನು ಆಡಲು ಬಿಟ್ಟಳು. ಆಗಲೇ ಶಾಲೆಯ ಜವಾನ ಎರಡು ಬಾರಿ ಬಂದು ಹೋಗಿದ್ದ. ಒಂದು ಗಂಟೆಯ ಸುಮಾರಿಗೆ ವಿಶ್ವಾಸ ಯಾವದೋ ಗುಂಗಿನಲ್ಲಿ ತೇಲಿಬರುವಂತೆ ಸಾವಕಾಶವಾಗಿ ಬಂದು ಕೊರಳಿಗೆ ಸುತ್ತಿಕೊಂಡಿರುವ ಅರಿವೆ ತುಂಡನ್ನು ಬಿಚ್ಚತೊಡಗಿದ. ಆ ಕೊರಳಪಟ್ಟಿ ಅವನ ಅಮೂಲ್ಯವಾದ ಆಭರಣವಾಗಿತ್ತು. ಅದನ್ನು ಬಿಚ್ಚಿದ ಮೇಲೆ ಹಾಯಾಗಿ ಪಡಸಾಲೆಯಲ್ಲಿ ಕುಳಿತ. ಅವನಿಗೆ ಯಾವ ಅವಸರವೂ ಕಾಡುವಂತೆ ತೋರಲಿಲ್ಲ.

"ಚಿಗಪ್ಪ ಬಂದ. ಚಿಗಪ್ಪ ಬಂದ" ಎಂದು ಕೂಗಿಕೊಂಡು ಪಡ

ಸಾಲೆಗೆ ನುಗ್ಗಿದ ಮಕ್ಕಳ ಧ್ವನಿಕೇಳಿ ತಾರಾ ಹೊರಗೆ ಬಂದಳು.– ಅಣ್ಣನ ಮಕ್ಕಳು ಅವನನ್ನು ಕರೆಯುತ್ತಿರುವದನ್ನನುಸರಿಸಿ ತಾವೂ ಚಿಗಪ್ಪನೆಂದೇ ಕರೆಯುತ್ತಿದ್ದವು.– ಹಾಯಾಗಿ ಕುಳಿತ ಗಂಡನನ್ನು ಕೆಣಕಿ ಕೇಳಿದಳು ತಾರಾ– "ಇತ್ತೀಚೆಗೆ ನಿಮ್ಮ ರೀತಿಯೇ ವಿಚಿತ್ರವಾಗಿದೆ. ಸಾಲೆಗೆ ಹೋಗಬೇಕಲ್ಲವೆ? ಹೀಗೇಕೆ ಸ್ವಸ್ಥವಾಗಿ ಕುಳಿತಿರಿ?"

"ಲ್ಲ? ಇಂದು ಭಾನುವಾರವಲ್ಲವೆ ತಾರಾ?"

"ವಾರಕ್ಕೆ ಭಾನುವಾರ ಎರಡು ಸಲ ಬರುವದಿಲ್ಲ. ಏಳಿರಿ. ಸಿಪಾಯಿ ಮೂರು ಸಾರೆ ಬಂದು ಹೋದ. ಉಂಡು ಸಾಲೆಗೆ ಹೋಗಿರಿ."

"ನೀನು ಊಟಮಾಡು ತಾರಾ. ನಾನು ನಡುವಿನ ಸೂಟಿಯಲ್ಲಿ ಬಂದು ಊಟ ಮಾಡುತ್ತೇನೆ. ನಾನು ಭಾನುವಾರವೆಂದೇ ಮಾಡಿದ್ದೆ." ಎಂದು ಮಿಂಚಿನಂತೆ ಹೋಗಿಬಿಟ್ಟ.

ಅವನು ಶಾಲೆಯ ಪಟಾಂಗಣದಲ್ಲಿ ಕಾಲಿಡುವಾಗ ಅವನ ವರ್ಗವನ್ನು ಮುಖ್ಯಾಧ್ಯಾಪಕರೇ ನಡೆಯಿಸುತ್ತಿರುವದನ್ನು ನೋಡಿ ಅವನಿಗೆ ಪಶ್ಚಾತ್ತಾಪವಾಯಿತು. ಇಂತಹ ಪ್ರಮಾದವನ್ನು ಇನ್ನೊಮ್ಮೆ ಮಾಡಬಾರದೆಂದು ನಿಶ್ಚಯಿಸಿಕೊಂಡ. ಆದರೆ ಅವನು ಹೀಗೆ ನಿರ್ಧರಿಸಿದ್ದು ಹತ್ತನೆಯ ಬಾರಿ. ದಾರಿಯಲ್ಲಿ ಶಿಕ್ಷಕರ ಕೋಣೆಯಿಂದ ಇವನು ಹಾಯ್ದು ಹೋಗುವಾಗ ಒಳಗಿನಿಂದ– "ಮುಖ್ಯಾಧ್ಯಾಪಕರ ಚೊಕ್ಕಿಲ ಮಗ" ಬಂದನೆಂದು ಹೇಳುವ ದನಿ ಕೇಳಿ ಅವನು ಗಡಬಡಿಸಿದ. ತನ್ನ ಸಲುವಾಗಿ ಇನ್ನೊಬ್ಬರನ್ನೂ ನಿಂದೆಗೆ ಗುರಿಮಾಡುವದು ಅವನಿಗೆ ಬಹಳ ಅಯೋಗ್ಯವೆನ್ನಿಸಿತು. ಇವನನ್ನು ನೋಡಿ ಹೊರಬಂದು ಮುಖ್ಯಾಧ್ಯಾಪಕರು ಗಂಭೀರವಾಗಿ ಹೇಳಿದರು– "ಇದೇನು ವಿಶ್ವಾಸರಾವ್, ದಿನಾಲು ಹೀಗೆ ಆದರೆ ಹೇಗೆ ನಡೆದೀತು? ನಿಮ್ಮ ಕಿರುಕಳ ರಜಾ ದಿನ ಕೂಡ ಮುಗಿದಿವೆ. ಇದೇ ಕೊನೆಯ ಬಾರಿಯಾಗಲಿ. ಇನ್ನು ನೀವು ಮಾಡುವ ತಡವನ್ನು ಬಿನ್-ಪಗಾರೀ ರಜೆಯಂತೆ ಗಣಿಸಲಾಗುವದು" ಎಂದು ತಮ್ಮ ಕೋಣೆಗೆ ಸಾಗಿದರು.

ವಿದ್ಯಾರ್ಥಿಗಳೆದುರಿಗೆ ಅವನಿಗೆ ಮುಖಭಂಗವಾದಂತಾಯಿತು. ಆದರೂ ತಪ್ಪು ತನ್ನದೆಂದು ನಿಗ್ರಹಿಸಿಕೊಳ್ಳಬೇಕಾಯಿತು. ನಡುವಿನ ಸೂಟಿಯಲ್ಲಿ ವಿಶ್ವಾಸ ಮನೆಗೆ ಹೋಗಲು ಸಿದ್ಧನಾದಾಗ ಮುಖ್ಯಾಧ್ಯಾಪಕರು ಹೇಳಿ ಕಳುಹಿಸಿದರು. ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಅವನು ಒಳಗೆ ಹೋದಾಗ ಅವರು ಹಸನ್ಮುಖದಿಂದ ಅವನಿಗೆ ಕುಳ್ಳಿರ ಹೇಳಿ ಚಹ ತರಿಸಿಕೊಟ್ಟರು.- "ಈಹೊತ್ತು ನನ್ನ ಮಾತು ನಿಮಗೆ ಬಿರುಸಾಗಿ ತೋರ ಬಹುದು. ಅದಕ್ಕಾಗಿ ನನಗೂ ಬಹಳ ನೋವಾಯಿತು. ಆದರೆ ಇತ್ತೀಚೆಗೆ ತಕರಾರು ಬಹಳ ಬರತೊಡಗಿವೆ. ನಿಯಮಿತವಾಗಿ ಶಾಲೆಗೆ ಬರುವದೊತ್ತಟ್ಟಿಗಿರಲಿ-ವಿಷಯ ನಿರೂಪಣೆಯಲ್ಲೂ ಕೂಡಾ ನೀವು ಅನಾಸ್ಥೆ ತೋರಿಸುತ್ತಿರುವಿರಿ. ಪಠ್ಯಪುಸ್ತಕದಲ್ಲಿಯ ಇತಿಹಾಸ ದೂರವಿಟ್ಟು ಕಲ್ಪಿತ ಕತೆ ಹೇಳುತ್ತಿರುವಿರಿ. ಭೂಗೋಲ ಪಾಠದಲ್ಲಿ ಕಾವ್ಯವಾಚನ ಮಾಡು ವದು ವೇಳೆಯ ಅಪವ್ಯಯ. ಈಗ ಆದದ್ದು ಆಗಿ ಹೋಯಿತು. ಇನ್ನು ಮೇಲಾದರೂ ಸುಧಾರಿಸಿಕೊಳ್ಳಿರಿ. ನಾನಿದನ್ನು ಅಧಿಕಾರವಾಣಿಯಿಂದ ಹೇಳುತ್ತಿಲ್ಲ;- ನಿಮ್ಮ ಹಿರಿಯ ಅಣ್ಣನೆಂದು ಹೇಳುತ್ತಿದ್ದೇನೆ." ಎಂದು ಉಪದೇಶದ ಮಳೆಗರೆದರು.

ವಿಶ್ವಾಸ ಎಲ್ಲವನ್ನೂ ಮೂಕನಾಗಿ ಕೇಳಿದ. ತಾನು ತಡವಾಗಿ ಬರುತ್ತಿರುವ ಕಾರಣವನ್ನು ಅವರಿಗೆ ಹೇಳಿಬಿಡಬೇಕೆನ್ನಿಸಿದರೂ ಯಾವ ಪ್ರಯೋಜನವೂ ಆಗಲಾರದೆಂದು ತೆಪ್ಪಗೆ ಕುಳಿತ.- "ಆಗಲಿ ಹಾಗಾದರೆ...." ಎಂದು ಮುಖ್ಯಾಧ್ಯಾಪಕರು ಎದ್ದು ನಿಂತರು.

"ನಿಮ್ಮ ಸೂಚನೆ ನನಗೆ ಮಾನ್ಯವಾಗಿವೆ. ನಿಮಗೆ ಸುಮ್ಮನೆ ತೊಂದರೆಕೊಟ್ಟೆ. ಕ್ಷಮಿಸಿರಿ" ಎಂದು ಅವನು ಅಲ್ಲಿಂದ ಹೊರಬಿದ್ದ.

ಶಾಲೆಯ ಕೆಲಸ ತೀರಿಸಿಕೊಂಡು ಮನೆಗೆ ಹೋಗಬೇಕಾದರೆ ಆ ದಿನ ಏಳು ಗಂಟೆಯಾಯಿತು. ತನಗೆ ಊಟವಾಗಿಲ್ಲವೆಂಬ ಪರಿವೆ ಬಂದುದು ಆಗಲೇ. ಅವನು ಲಗುಬಗೆಯಿಂದ ಮನೆಗೆ ನಡೆದ. ಅವನ ಮುಖದಲ್ಲಿ ಉತ್ಸಾಹವಿರಲಿಲ್ಲ. ಮನೆಗೆ ಹೋಗಿ ನೋಡಿದಾಗ ಬಡಿಸಿದ

ತಾಟು ಬಡಿಸಿದಂತೆಯೇ ಇತ್ತು. ಬೇರೆ ತಾಟುಗಳಲ್ಲಿ ತಾರಾ ಮಕ್ಕಳಿಗೆ ಉಣ್ಣಿಸುತ್ತಿದ್ದಳು. ಅವನು ನೇರವಾಗಿ ಒಳಗೆ ಹೋಗಿ ಕೈಕಾಲು ತೊಳೆದು ಕೊಂಡ. ಮಣೆಯ ಮೇಲೆ ಕುಳಿತ. ಒಲೆಯ ಮೇಲೆ ಅಟ್ಟ ಅಡಿಗೆ ಹಾಗೆಯೇ ಇತ್ತು.- "ತಾರಾ, ಇನ್ನೂ ನೀನು ಊಟ ಮಾಡ ಲಿಲ್ಲವೆ?" ಎಂದು ಸಂಶಯದಿಂದ ಕೇಳಿದ.

"ನನ್ನ ಊಟಕ್ಕೇನು ಬಂತು? ಮೊದಲು ನಿಮ್ಮ ಊಟವಾಗಲಿ."

"ಇಡಿಯ ದಿನ ಉಪವಾಸವಿರಬೇಕೆ?"

"ಈ ಮಾತು ನಿಮಗೂ ಅಸ್ವಯಿಸುವದಷ್ಟೆ?"

ಹೆಂಡತಿಯ ಮಾತುಗಳನ್ನು ಕೇಳಿ ಅವನ ಕರುಳು ಕಿವುಚಿತು. ತಾನೇ ಎದ್ದು ಹೋಗಿ ಇನ್ನೊಂದು ಎಲೆಯನ್ನು ತನ್ನೆದುರಿಗಿಟ್ಟು ಕೊಂಡು ಹೆಂಡತಿಗೆ ಎರಡೂ ತಾಟಿಗೂ ಬಡಿಸು. ಕೂಡಿಯೇ ಊಟ ಮಾಡೋಣ" ಎಂದು ಹೇಳಿದ. ತಾರಾ ಮಕ್ಕಳ ಕೈತೊಳಿಸಿ ಅವರನ್ನು ಪಡಸಾಲೆಗೆ ಕಳಿಸಿ ಬಂದು ಗಂಡನ ಜತೆಯಲ್ಲೇ ಊಟಕ್ಕೆ ಕುಳಿತಳು. ಶಾಲೆಯಲ್ಲಿ ನಡೆದ ಎಲ್ಲ ಮಾತುಗಳನ್ನೂ ಹೆಂಡತಿಗೆ ಒಂದೂ ಬಿಡದೆ ವಿವರಿಸಿದ. ಕೊನೆಗೆ ತಾನು ನಾಳೆಯಿಂದ ಶಾಲೆಯ ನಿಯಮ ಪಾಲಿ ಸುವದಾಗಿ ವಚನಕೊಟ್ಟ. ಅವಳಿಗೆ ಆದೆಷ್ಟೋ ಸಮಾಧಾನವಾದರೂ ಗಂಡನ ಸಾಹಿತ್ಯ ಮಗ್ನತೆಗೆ ಬಂದ ಈ ಅಡ್ಡಿಗಾಗಿ ಮರುಗಿದಳು. ಆದರೆ ಜೀವನಕ್ಕೊಂದು ದಾರಿ ಬೇಕಾದಾಗ ಈ ನಿಯಮ ಪಾಲನೆ ಅವಶ್ಯವೆನ್ನಿಸಿತವಳಿಗೆ. ಆ ಮಟ್ಟಿಗೆ ಅವಳು ಸ್ವಸ್ಥಚಿತ್ತಳೂ ಆದಳು.

ವಿಶ್ವಾಸ ನಿಯಮಬದ್ಧನಾದ. ಮುಂಜಾನೆ ಹತ್ತುಗಂಟೆಯ ಒಳಗೆ ಮನೆಗೆ ಬಂದು ಜಳಕ, ಊಟ ತೀರಿಸಿ ಇನ್ನೂ ಹದಿನೈದು ನಿಮಿಷ ವಿರುವಾಗಲೇ ಶಾಲೆಗೆ ಹೋಗುತ್ತಿದ್ದ. ಮುಖ್ಯಾಧ್ಯಾಪಕರಿಗೆ ತಮ್ಮ ಔಷಧಿ ನಾಟಿತೆಂದು ಸಂತೋಷವಾಯಿತು. ಅವರು ತಮ್ಮ ಮೆಚ್ಚಿಕೆ ಯನ್ನು ಅವನೆದುರು ಆಡಿಯೂ ತೋರಿಸಿದರು. ಆದರೆ ಅವನಿಗೆ ಮಾತ್ರ

ಈ ನಿಯಮವನ್ನು ಕೊನೆಯವರೆಗೆ ಪಾಲಿಸುವದು ಸುಲಭವಾಗಿ ತೋರಲಿಲ್ಲ. ಜೊತೆಗೆ ಈ ನಿಯಮ ಪಾಲನೆಯಿಂದ ತನ್ನ ವ್ಯಕ್ತಿತ್ವ ಕೂಡ ಹಾಳಾಗಿ ಹೋಗುತ್ತಿದೆ ಎನ್ನಿಸಿತು. ತನ್ನ ಒಲವು ಒಂದು; ಮಾಡುವ ಕೆಲಸ ಬೇರೊಂದು. ಈ ಕುಲುಮೆಯಲ್ಲಿ ಅವನ ಹೃದಯ ಧಗ್ಧವಾಗತೊಡಗಿತು. ನಿರಾಶಾ ಭಾವ ಸುಳಿಸುಳಿದು ಬರತೊಡಗಿತು. ತನ್ನ ಸಾಹಿತ್ಯ ಸೇವೆಯ ಅಖಂಡತೆಗಾಗಿ ಹೋರಾಡುವ ಮನಸ್ಸಿನಲ್ಲಿ ಅಮೂಲ್ಯವಾದ ವೇಳೆಯನ್ನು ಜೀವನ ನಿರ್ವಹಣ ಕಾರ್ಯದಲ್ಲಿ ವಿನಿಯೋಗಿಸುವ ಸಮಯ ಬಂದದ್ದು ಅವನಿಗೆ ಕಾದ ಬರೆಯಂತೆ ನೋವನ್ನಿಸುತ್ತಿತ್ತು. ಸಾಹಿತ್ಯವನ್ನು ಬಿಡುವದು ಅವನಿಗೆ ಅಸಾಧ್ಯವಾಗಿತ್ತು. ಆದರೆ ಈ ವೃತ್ತಿಯಲ್ಲಿ ಅದನ್ನುಳಿಸಿಕೊಂಡು ಹೋಗುವದೂ ಅಷ್ಟೇ ಅಸಾಧ್ಯವಾಗಿ ತೋರುತ್ತಿತ್ತು. ಎರಡನ್ನೂ ಕಾಯ್ದುಕೊಳ್ಳುವ, ಕಠಿಣತೆಯನ್ನು ಎದುರಿಸುವ ಅವನ ಹೃದಯ ತಾಂಡವದ ತವರೂರಾಗಿತ್ತು.

ಗಂಡನ ಉದ್ವಿಗ್ನತೆಯ ಕಾರಣವನ್ನು ತಾರಾ ಸುಲಭವಾಗಿ ತಿಳಿದುಕೊಂಡಳು. ಅವನ ಹೃದಯದಲ್ಲಿ ನಡೆಯುತ್ತಿರುವ ದ್ವಂದ್ವಗಳನು ಅವಳು ಸಂಪೂರ್ಣವಾಗಿ ಊಹಿಸಿಕೊಂಡಳು. ಆದರೆ ಜೀವನೋಪಾಯವಿಲ್ಲದ ಸಾಹಿತ್ಯದಿಂದ ತನ್ನ ಸಂಸಾರ ಸಾಗುವದು ಸಾಧ್ಯವಿಲ್ಲವೆಂದು ತಿಳಿದ ಅವಳು ವ್ಯವಹಾರ ಕುಶಲಳಂತೆ ಯಾವ ಮಾತನ್ನೂ ಆಡದೆ ಗಂಡನ ಸಾಹಿತ್ಯ ಕಾರ್ಯದಲ್ಲಿ ತಕ್ಕಮಟ್ಟಿಗೆ ಪ್ರೋತ್ಸಾಹಿಸುತ್ತ, ಶಿಕ್ಷಕ ವೃತ್ತಿಯನ್ನು ಕಾಪಾಡಿಕೊಂಡು ಮಕ್ಕಳನ್ನು ಕಾಪಾಡುವಂತೆ ಸೂಕ್ಷ್ಮವಾಗಿ ಹೇಳುತ್ತಿದ್ದಳು. ಅವಳಿಗೆ ಜೀವನ ಮುಖ್ಯವಾಗಿತ್ತು. ಅದಕ್ಕೆ ಸಾಹಿತ್ಯ ಪೋಷಕವಾಗಿ ಸಾಗಬೇಕಿತ್ತು. ಸಾಹಿತ್ಯದಿಂದ ಜೀವನ ಸಾಗಿಸುವ ದಿನಗಳು ಬರುವವರೆಗೂ ಅವಳಿಗೆ ಅವನು ಕೆಲಸ ಮಾಡುವದು ಬೇಕಿತ್ತು.

ಈ ಭಾನುವಾರ ವಿಶ್ವಾಸ ಬೆಳಿಗ್ಗೆ ಎದ್ದು ವಿಹಾರಕ್ಕೆ ಹೊರಡಲು ಸಿದ್ಧನಾದ. ಬಹಳ ದಿನಗಳಿಂದಲೂ ಅವನಿಗೆ ಹೆಚ್ಚಾಗಿ ಸುತ್ತಾಡುವದಾಗಿರಲಿಲ್ಲ. ಇದಕ್ಕೆ ನಿಯಮ ಪಾಲನೆಯೇ ಮುಖ್ಯ ಕಾರಣವಾಗಿತ್ತು

ಅವನು ಬೇಸತ್ತು ಹೋಗಿದ್ದ. ದೈನಂದಿನ ಏಕದಾರದ ತಂತಿಯಿಂದೊದಗುವ ಒಂದೇ ಸ್ವರ ಅವನ ಹೃದಯದಲ್ಲಿ ಅಪಸ್ವರವನ್ನೆಬ್ಬಿಸಿತ್ತು. ಒಂದು ದಿನವಾದರೂ ಮನಬಂದಂತೆ ಸುತ್ತಾಡಿ ನಿಸರ್ಗದೇವಿಯ ಮಡಿಲಲ್ಲಿ ತನಗಾದ ಬೇಸರ ಕಳೆದುಕೊಳ್ಳಬೇಕೆಂದು ಹೊರಟು ನಿಂತ. ಅವನನ್ನು ನೋಡಿ ತಾರಾ- "ಸ್ವಲ್ಪ ಬೇಗನೆ ಬನ್ನಿರಿ. ಕಿರಣನ ಮೈಬೆಚ್ಚಗಾಗಿದೆ" ಎಂದು ಹೇಳಿದಳು- ವಿಶ್ವಾಸ ಕಿರಣನ ಮೈಮುಟ್ಟಿ ನೋಡಿದ. ಮೈ ಅಷ್ಟೇನೂ ಕಾಯ್ದಿರಲಿಲ್ಲ; ಬೆಚ್ಚಗಿತ್ತು. "ಅವನು ಏಳುವದರೊಳಗೇ ಬರುತ್ತೇನೆ. ಹೋಗಬಹುದಷ್ಟೆ?" ಎಂದು ಕೇಳಿದ ಅವನಿಗೆ- "ಬೇಗ ಬಂದರಾಯಿತು" ಎಂದು ಅವಳು ಒಪ್ಪಿಗೆ ಸೂಚಿಸಿದಳು. ಅವನು ಮನೆಯಿಂದ ಹೊರಬಿದ್ದ.

ಮುಂಜಾವಿನ ಶೀತಲ ಗಾಳಿಯ ಸ್ಪರ್ಶ ಅವನಿಗೆ ಹಿತವಾಗಿ ಪರಿಣಮಿಸಿತು. ಅವನು ಬೇಗ, ಬೇಗ ಸಾಗಿದ್ದ. ಗುಡ್ಡವನ್ನು ಬಳಸಿ ಹೋಗುವ ವಿಶಾಲ ಮಾರ್ಗ ತೊರೆದು ನಡುದಾರಿಯಿಂದ ಸಾಗಿ ಊರ ಸನಿಯದಲ್ಲಿಯೇ ಇರುವ ಮಾರ್ಕಂಡೇಯ ನದಿ ದಾಟಿದ. ಅದನ್ನು ದಾಟುವಾಗ ಚಿಕ್ಕ ಮಗುವಿನಂತೆ ಕಾಲಿನಿಂದ ನೀರು ಚಿಮ್ಮಿದ. ಭಾವ ಪರವಶನಾದಂತೆ ಅನೇಕ ಬಾರಿ ಬೊಗಸೆಯಲ್ಲಿ ನೀರು ತೆಗೆದುಕೊಂಡು ಮುಖ ಪ್ರಕ್ಷಾಲನೆ ಮಾಡಿಕೊಂಡ. ದಂಡೆಯ ಮೇಲಿರುವ ಸಂಗಮೇಶ್ವರನಿಗೆ ಪ್ರದಕ್ಷಿಣೆ ಹಾಕಿ ಸೀಳುದಾರಿಗುಂಟ ತಡಸಲಿಗಭಿಮುಖವಾಗಿ ನಡೆಯತೊಡಗಿದ. ಸ್ವಲ್ಪ ಹೊತ್ತಿನಲ್ಲಿಯೇ ತಡಸಲಿಗೊಯ್ಯುವ ರಾಜವೀಧಿಯ ಮಧ್ಯದಲ್ಲಿ ನಿಂತಾಗ ಎದುರಿನ ಭವ್ಯವಾದ ಗುಡ್ಡ ಅವನನ್ನು ಕೈಮಾಡಿ ಕರೆದಂತೆನ್ನಿಸಿತು. ತಡಸಲಿನ ಮಾರ್ಗ ಬಿಟ್ಟು: 'ಭೈರವೀ ಕೊಳ್ಳ'ದ ಮೆಟ್ಟಿಗಳನ್ನೇರತೊಡಗಿದ. ಎಡಬಲದಲ್ಲಿ ಹಸಿರು ಸೂಸುವ ವಿಶಾಲವಾಗಿ, ಎತ್ತರವಾಗಿ ಹಬ್ಬಿದ ಮರಗಳು. ಆ ಮರಗಳಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತಿರುವ ಮಂಗಗಳು. ಅವನಿಗೆ ಅವು ಅನಿರ್ವಚನೀಯವಾದ ಆನಂದವನ್ನು ನೀಡಿದವು. ಆ ಮಂಗಗಳ ಜೀವನ ಅದಾವುದೋ ಸಂದೇಶ ಬೀರಿದಂತೆ ಅವನಿಗೆ ಭಾಸವಾಯಿತು. ಅವುಗಳಿಗಿರುವ ಸ್ವಾತಂತ್ರ್ಯ

ತನಗಿಲ್ಲವಲ್ಲ—ಎಂದು ಉಸಿರ್ಗರೆದ. ಅನೇಕ ಸೋಪಾನಗಳನ್ನೇರಿ, ಬೆಟ್ಟದ ತುದಿಗೆ ಬಂದು ಅವನು ತನ್ನೆದುರಿನ ವನಶ್ರೀಯ ಧೀರ ಗಂಭೀರ ಸ್ವರೂಪವನ್ನು ಅರಳಿದ ಕಣ್ಣುಗಳಿಂದ ನೋಡಿದ. ಅವನ ನರನರಗಳಲ್ಲಿ ಚೈತನ್ಯ ಹರಿಯಿತು. ಒಂದು ಬಂಡೆಗಲ್ಲಿನಿಂದ ಇನ್ನೊಂದಕ್ಕೆ ನೆಗೆಯುತ್ತ ಮುಂದುವರಿದು ಭೈರವಿ ದೇವಾಲಯದ ಮಧ್ಯದಲ್ಲಿ ಬಂದು ನಿಂತ್ತು ಕೆಳಗೆ ಕಣ್ಣು ಹಾಯಿಸಿದ. ಗುಡ್ಡದ ಕಡಿದು ಕೊಳ್ಳದ ಪ್ರದೇಶ ಪಚ್ಚೆಯುಡಿಯನ್ನುಟ್ಟ ಶ್ರೀಮಂತ ಕನ್ನಿಕೆಯಂತೆ ಶೋಭಾಯಮಾನವಾಗಿ ತೋರಿತು. ತೀರ ಕೆಳಬದಿಯಲ್ಲಿ ಸ್ವಚ್ಛವಾಗಿ ಹರಿಯುವ ನೀರು ಒಡ್ಯಾಣದಂತೆ ಬೆಳಗಿತು. ಈ ರಮಣೀಯವಾದ ನಿಸರ್ಗ ಸುಂದರಿಯನ್ನೀಕ್ಷಿಸುತ್ತ ಅವನಿಗೆ ದಣಿವಿಲ್ಲದಾಯಿತು. ಅನೇಕ ತಾಸುಗಳವರೆಗೆ ಭಾವ ಸಮಾಧಿಯನ್ನು ಹೊಂದಿದಂತೆ ನಿಂಗಲ್ಲಿಯೇ ನಿಂತುಬಿಟ್ಟ. ಆಗಾಗ ಅವನೆದುರಿಗೆ ಲಾಗಹಾಕುತ್ತಿರುವ ಮಂಗಗಳು ಅವನ ಸಮಾಧಿಯನ್ನು ಕೆಣಕುವದನ್ನು ಕೂಡ ಅವನು ಕುತೂಹಲನಾಗಿಯೇ ನೋಡತೊಡಗಿದ. ಅವುಗಳನ್ನೊಮ್ಮೆ ಅಪ್ಪಿಕೊಳ್ಳಬೇಕೆನ್ನಿಸಿತು ಅವನಿಗೆ. ಹೀಗೆ ಸಾಕಷ್ಟು ವೇಳೆಯನ್ನು ಇಲ್ಲಿ ಕಳೆದ ಮೇಲೆ 'ಭೈರವಿ'ಯ ಹಿಮ್ಮಗ್ಗಲಿನಲ್ಲಿ ಮುಗಿಲಿಗೆ ಮುದ್ದಿಡುವಂತೆ ಗಗನ ಚುಂಬಿತವಾದ ಗುಡ್ಡನನ್ನು ಕಂಡು ಅವನಿಗೆ ಆ ಕಡೆಗೆ ಹೊರಳಾಸೆಯಾಯಿತು. ಚಂಗನೆ ನೆಗೆದು ಗುಡ್ಡವನ್ನೇರತೊಡಗಿದ. ಅವನಿಗೆ ಇನ್ನೂ ಮೇಲೆ ಹೋಗಬೇಕೆನ್ನಿಸಿತು. ಅಷ್ಟರಲ್ಲಿ ಒಂದು ವಿಶಾಲವಾದ ಬಂಡೆಗಲ್ಲು ಸಿಕ್ಕದ್ದರಿಂದ ಅಲ್ಲಿ ನಿಂತು ಮತ್ತೆ ವನಶ್ರೀಯ ವೈಖರಿಯನ್ನು ದೃಷ್ಟಿಸಿದ. ಅದಕ್ಕೆ ಹತ್ತಿ ಬಹಳ ಎತ್ತರದಿಂದ ಒಂದಂಗುಲ ಗಾತ್ರವಾದ ನೀರು ಬಸಿಯುತ್ತಿತ್ತು. ಆ ನೀರು ಕಲ್ಲನ್ನು ಬಳಸಿ ಸುತ್ತಿದ ಬಳ್ಳಿಗಳ ಎಲೆಗಳ ಮೇಲೆ ಚಲ್ಲುವರಿದು ಮುತ್ತಿನ ಮಳೆಗರೆಯುತ್ತಿರುವಂತೆ ಅವನಿಗೆ ಕಾಣತೊಡಗಿತು. ಆಸೆಬುರುಕನಂತೆ ಅವುಗಳನ್ನವನು ಆಲಿಸಹತ್ತಿದ. ಅಂಗೈಯೆಲ್ಲ ಒದ್ದೆಯಾಗಲು ಗಟ್ಟಿಯಾಗಿ ನಕ್ಕ. ಆ ತಾಣ ಅವನಿಗೆ ನಿಸರ್ಗದೇವಿಯ ವಿರಾಮ ಧಾಮದಂತೆ ಕಂಡಿತು. ಆ ಬಂಡೆಯಮೇಲೆ ಅವನು ಕಾಲುಚಾಚಿದ. ಕಣ್ಣೆದುರಿಗೆ ಚಲ್ಲುವರಿದು ಸೀರ್ಪನಿಗಳಾಗಿ ಬೀಳುತ್ತಿರುವ ಹನಿಗಳ ಸ್ಪರ್ಶಸುಖ ಅವನ ಕಣ್ಣುಗಳನ್ನು

ತೇಲಿಸಿತು. ಅವನು ಭಾವಸಮಾಧಿಯನ್ನೇರಿದ. ಅವನ ಅಂತಶ್ಚಕ್ಷು ಕಂಡ ನೋಟ ಅದ್ಭುತವಾಗಿತ್ತು.

ಸುಗಂಧಪೂರಿತವಾದ ಸುವಾಸನೆ ಬೀರುವ ತರುರಾಜಿಗಳಿಂದ ನಿಬಿಡವಾದ ಕಾನನ. ಅಲ್ಲಲ್ಲಿ ಜುಳಜುಳು ಹರಿಯುವ ಹಾಲು ಹಳ್ಳಗಳು ಆ ವನಶೋಭೆಗೊಂದು ಮೆರಗು ತಂದಿದ್ದವು. ಬಣ್ಣಬಣ್ಣದ ಹಕ್ಕಿಗಳು ತಮ್ಮ ಇನಿದಾದ ಸ್ವರದಿಂದ ಹಾಡುತ್ತ ಅತ್ತಿಂದಿತ್ತ ಹಾರಾಡುತ್ತಿದ್ದವು. ಕಾಡು ಮಲ್ಲಿಗೆಯ ಬಳ್ಳಿಗಳು ಅಲ್ಲಲ್ಲಿ ಮಂಟಪ ರಚಿಸಿದ್ದವು. ಅವುಗಳ ವಾಸನೆ ಮನಮೋಹಕವಾಗಿತ್ತು. ವಿಶ್ವಾಸ ಈ ಸ್ವರ್ಗೀಯ ಆನಂದವನ್ನನುಭವಿಸುತ್ತ, ಹಾರುವ ಹಕ್ಕಿಗಳೊಡನೆ ಚೆಲ್ಲಾಟವಾಡುತ್ತ, ಹೂಗಳನ್ನು ಕಿತ್ತು ವಾಸನೆ ಹೀರುತ್ತ ಸಂಭ್ರಮಾನ್ವಿತನಾಗಿ ಸಂತೋಷ ಪ್ರಮತ್ತನಂತೆ ಮುಂದೆ ಸಾಗಿರುವಾಗ ವಿಸ್ತೀರ್ಣವಾದ ತಂಗೊಳವೊಂದು ಜಗ್ಗನೆ ಬೆಳಗಿತು. ಅದರ ನೀರು ನಿರ್ಮಲವಾಗಿದ್ದವು. ಅದರಲ್ಲಿ ಕಮಲದ ಹೂಗಳು ತೇಲುತ್ತಿದ್ದವು. ಹಂಸಗಳು ರಾಸಕ್ರೀಡೆಯಾಡುತ್ತಿದ್ದವು. ಕಮಲದ ಹೂ ಬೆಳ್ಳಗೆ, ನೀರೂ ಬೆಳ್ಳಗೆ, ತೇಲಿಬರುತ್ತಿರುವ ಹಂಸ ಬೆಳ್ಳಗೆ, ಸ್ಫಟಿಕ ಶಿಲೆಯಿಂದ ನಿರ್ಮಿತವಾಗಿದ್ದ ಆ ಕಾಸಾರದ ಗೋಡೆಗಳು ಬೆಳ್ಳಗೆ, ಎಲ್ಲವೂ ಬೆಳ್ಳಗೆ ಲಕಲಕಿಸುತ್ತಿದ್ದವು. ಸೋಪಾನಗಳು ಮಿರಿಮಿರಿ ಮಿಂಚುತ್ತಿದ್ದವು. ರತ್ನಗಳ ಕೆಚ್ಚನೆಯೆ ಇದಕ್ಕೆ ಕಾರಣವಾಗಿತ್ತು. ಈ ಅದ್ಭುತ ರಮ್ಯ ದೃಶ್ಯವನ್ನು ಅವನು ಬೆರಗುಗಳಿಂದೀಕ್ಷಿಸಿದ. ಅವನ ಮನಸ್ಸು ಈ ನೋಟದಲ್ಲಿ ಲೀನವಾಗಿತ್ತು. ಸಾವಕಾಶವಾಗಿ ಹೆಜ್ಜೆಗಳನ್ನಿಕ್ಕುತ್ತ ಆ ಕೊಳದಲ್ಲಿಳಿಯಬೇಕೆಂಬ ಮನೋಭಾವದಿಂದ ಅವನು ಸಾಗುತ್ತಿರಲು ಆ ಸೋಪಾನಗಳ ಕೊನೆಯ ಸಾಲಿನ ಮಧ್ಯದಲ್ಲಿ ಮೂರ್ತಿಯೊಂದು ದೃಗ್ಗೋಚರವಾಯಿತು. ಅವನು ಆ ಮೂರ್ತಿಯನ್ನು ತಡೆದು ನಿಂತು ನೋಡಿದ. ಅಪೂರ್ವ ಸುಂದರಿಯವಳು ರತ್ನದ ಎಳೆಗಳನ್ನು ನೇಯ್ದು ಉಟ್ಟಿದ್ದಳೇನೊ ಎಂಬಂತೆ ಅವಳ ವಸ್ತ್ರ ಮಿರಮಿರನೆ ಮಿಂಚುತ್ತಿತ್ತು. ತಾರಾ ಮಂಡಲವೇ ಅವಳ ಕೊರಳಿಗೆ ಆಭರಣವಾಗಿತ್ತು. ಹತ್ತಿರವಿದ್ದ ವೀಣೆ ಸುಮನೋಹರವಾದ ಸ್ವರದಿಂದ ನುಡಿಯುತ್ತಿತ್ತು. ಈ ಮನೋ

ಹಾರಿಣಿ ತನ್ನ ಪಾದಗಳನ್ನು ನೀರಿನಲ್ಲಿ ಇಳಬಿಟ್ಟು ಆಗಾಗ ತೆರೆಗಳನ್ನೆಬ್ಬಿಸುತ್ತಿದ್ದಳು. ಆ ತೆರೆಯ ಅಂಚಿನಗುಂಟ ಬಂಗಾರದ ಮೀನಗಳು ಮಿಂಚಿನ ತುಣುಕುಗಳಂತೆ ತೇಲಾಡುತ್ತಿದ್ದವು. ಇಂತಹ ಅಘಾಧ ಸೌಂದರ್ಯವನ್ನು ಎಂದಿಗೂ ಕಾಣದ ಅವನು ಕಣ್ಣು ರೆಪ್ಪೆ ಬಡೆಯದೆ ಒಂದೇ ಸವನೆ ಆ ದಿವ್ಯ ಮೂರ್ತಿಯನ್ನು ನಿಟ್ಟಿಸಿದ. ಅಷ್ಟರಲ್ಲಿ ಆ ಮೂರ್ತಿ ಅವನನ್ನು ಕೈಮಾಡಿ ಕರೆದಂತೆ ತೋರಿತು. ಅವನು ತನಗರಿಯದಂತೆಯೆ ಅವಳ ಬಳಿ ಸಾರಿದ್ದ. ಅವಳಿನ್ನೂ ಹತ್ತಿರ ಕರೆದು ತನ್ನ ಸುಕೋಮಲವಾದ ಕರಗಳನ್ನು ಚಾಚಿದಳು. ಅವನು ಆ ಕರಗಳನ್ನು ಹಿಡಿದ. ಆ ಸ್ಪರ್ಶಸುಖ ಸ್ವರ್ಗೀಯವಾಗಿತ್ತು. ವೀಣೆ ಇನ್ನೂ ಉಲಿಯುತ್ತಲಿತ್ತು. ಅವನ ಕೈ ಅವಳ ಕರಗಳಲ್ಲಿ ಬಂಧಿತವಾಗಿತ್ತು. ಅವನ ದಿಟ್ಟಿ ಅವಳ ಮುಖದಲ್ಲಿ ಲೀನವಾಗಿತ್ತು. ಕಾತರದುಂಬಿದ ಸ್ವರದಲ್ಲವನು–"ನೀನಾರು ಸಾಧ್ವಿ?" ಎಂದು ಕೇಳಿದ. ಅವಳು ತುಟಿ ಬಿಚ್ಚಲಿಲ್ಲ. ಮತ್ತೊಮ್ಮೆ ಕೇಳಿದ. ಅವಳು ಗಹಗಹಿಸಿ ನಕ್ಕಳು. ವೀಣೆ ಒಮ್ಮೆಲೆ ಅಪಸ್ವರದಿಂದ ಅಸಹನೀಯವಾಗಿ ಕಿರುಚಿತು. ಭೋರೆಂದು ಬಿರುಗಾಳಿ ಮೊರೆಯಿತು. ರಪರಪನೆ ಹನಿಗಳುದುರಿದವು. ಸುತ್ತಲಿನ ಪ್ರಕೃತಿ ರುದ್ರಭೀಕರವಾಗಿ ತೋರಿತು. ಅವಳೊಮ್ಮೆಲೆ ಕೈಕೊಸರಿಕೊಂಡಳು. ಅವನು ಹೌಹಾರಿದ· "ಹೋಗಬೇಡ ಸಾಧ್ವಿ" ಎಂದರಚಿದ. ಅವಳು ಕೇಳಲಿಲ್ಲ. ಒಮ್ಮೆಲೆ ಎದುರಿಗಿನ ಕಾಸಾರದಲ್ಲಿ ಧುಡುಮ್ಮನೆ ಹಾರಿಕೊಂಡಳು.

ಅವನ ಸಮಾಧಿ ಭಂಗವಾಯಿತು. ಕಣ್ಣು ತಿಕ್ಕಿಕೊಂಡು ಸುತ್ತಲೂ ನೋಡಿದ. ಅವನೊರಗಿದ ಬಂಡೆಗಲ್ಲಿನ ಕೆಳಗೆ ಬೀಳುತ್ತಿರುವ ನೀರಿಗೆ ಬೊಗಸೆಯನ್ನೊಡ್ಡಿ ಹೆಣ್ಣುಮಗಳೊಬ್ಬಳು ನೀರು ಕುಡಿಯುತ್ತಿದ್ದಳು. ಭಾರವಾದ ಕಟ್ಟಿಗೆ ಹೊರೆಯನ್ನು ಹತ್ತಿರದಲ್ಲಿ ಚಲ್ಲಿದ್ದಳು. ಅವನು ಕನಸಿನಲ್ಲಿ ಕಂಡ ಆ ದಿವ್ಯ ಕನ್ನಿಕೆಯೊಡನೆ ಅವಳನ್ನು ಹೋಲಿಸಿದ. ಆ ರೂಪಕ್ಕೂ ಈ ಸ್ವರೂಪಕ್ಕೂ ಎಂತಹ ಅಂತರ! ಎದ್ದು ಕುಳಿತು ಅವನು ಚೆನ್ನಾಗಿ ಕಣ್ಣುಜ್ಜಿಕೊಂಡ. ಸೂರ್ಯ ಇಳಿಮುಖನಾಗಿದ್ದ. ಅವನು ಗಡಬಡಿಸಿ ಎದ್ದು ನಿಂತ. ಆಕ್ಷಣ ಮನೆಗೆ ಬೇಗ ಬರಲು ಹೆಂಡತಿ

ಎಚ್ಚರಿಸಿದ ಆದೇಶ ನೆನಪಾಯಿತು. ಅವನು ಬೇಗಬೇಗನೆ ಇಳಿಯ ಲಾರಂಭಿಸಿದ. ಕಿರಣನ ಅಸ್ವಸ್ಥತೆಯನ್ನು ನೆನೆದು ತಾನು ಮೊದಲೆ ಮನೆಯಲ್ಲಿರಬೇಕಾಗಿತ್ತೆನ್ನಿಸಿತು. ಭೈರವಿ ಮಂದಿರದ ಮಧ್ಯದಲ್ಲಿ ಬಾವಾ ಜಿಯೊಬ್ಬನು ಮೈತುಂಬ ಬೂದಿ ಬಳೆದುಕೊಂಡು ಚಿಲುಮೆ ಹೊತ್ತಿಸು ತ್ತಿದ್ದ. ಅವನು ವಿಶ್ವಾಸನನ್ನು ಕಂಡು– "ಏನು ರಾಮುಜಿಯವರೆ, ಗಾಳಿ ಸವಾರಿಗೆ ಬಂದಿದ್ದಿರಾ?" ಎಂದು ಕೇಳಿದ. ಆ ಮಾತಿಗೆ ಯಾವ ಉತ್ತರವನ್ನು ಕೊಡದೆ ವಿಶ್ವಾಸ ಮುನ್ನಡೆದ. ಸಮಪಾತಳಿಗೆ ಬಂದ ಕೂಡಲೆ ಜೋರಾಗಿ ಹೆಜ್ಜೆ ಹಾಕುತ್ತ ಮನೆಯತ್ತ ಧಾವಿಸಿದ. ಅವನು ಮನೆಗೆ ಬಂದಾಗ ತಾರಾ ಕಿರಣನ ಹಾಸಿಗೆಯ ಹತ್ತಿರ ಸ್ವಸ್ಥವಾಗಿ ಕುಳಿತಿದ್ದಳು. ಉಷಾ ಅಲ್ಲಿಯೇ ಆಡುತ್ತಿದ್ದಳು. ತಾರಾನ ಮೊಗ ಸಪ್ಪೆಯಾಗಿತ್ತು. ಯಾವುದೋ ಒಂದು ಆಂತರಿಕ ವೇದನೆ ಅವಳನ್ನು ಕಾಡುತ್ತಿರುವದು ಸ್ಪಷ್ಟವಾಗಿತ್ತು.

"ಕಿರಣನ ಜ್ವರ ಇನ್ನೂ ಬಿಟ್ಟಿಲ್ಲವೆ ತಾರಾ?" ಎನ್ನುತ್ತ ಪಶ್ಚಾ ತ್ತಾಪ ತುಂಬಿದ ಸ್ವರದಲ್ಲಿ ಮಗನ ಮೈಮುಟ್ಟಿ ನೋಡಿದ. ಅದು ಕಾಯ್ದು ಕೆಂಡವಾಗಿತ್ತು.

"ಸ್ವಲ್ಪ ಕೆಮ್ಮು ಜಾಸ್ತಿಯಾದಂತಿದೆ" ಎಂದು ಹೇಳಿದ ತಾರಾ ಗಂಡನನ್ನು ಕೆಣಕುವ ಕಣ್ಣುಗಳಿಂದ ನೋಡುತ್ತ– "ಎಷ್ಟು ಬೇಗನೆ ಬಂದಿರಿ!" ಎಂದಳು. ಆ ಮಾತಿನಲ್ಲಿ ಅಡಕವಾದ ವ್ಯಂಗ್ಯವನ್ನು ತಿಳಿದ ಅವನಿಗೆ ಬಹಳ ಸಂಕಟವಾಯಿತು. ತನ್ನ ಅಪರಾಧ ಅಕ್ಷಮ್ಯವಾದ್ದೆ ದೆಂದು ಭಾವಿಸಿ ಅವನು ಪಶ್ಚಾತ್ತಾಪದಿಂದ ಬೆಂದುಹೋದ. ಕೂಡಲೆ ಕುಳಿತಲ್ಲಿಂದ ಎದ್ದು ಬಾಗಿಲೆಡೆಗೆ ಧಾವಿಸಿ– "ಡಾಕ್ಟರರನ್ನು ಕರೆದು ತರುತ್ತೇನೆ" ಎಂದು ಹೊರಟುನಿಂತ.

"ಇಷ್ಟು ಹೊತ್ತಿನವರೆಗೆ ನಾನು ಏನೂ ಮಾಡದೆ ಸುಮ್ಮನಿರಲು ಸಾಧ್ಯವೆ? ಡಾಕ್ಟರರು ಬಂದು ಹೋಗಿದ್ದಾರೆ. ಔಷಧವನ್ನೂ ಕೊಟ್ಟಿ ದ್ದಾರೆ. ಸಂಜೆಗೆ ಮತ್ತೆ ಬರುತ್ತಾರೆ. ನೀವು ಊಟಮಾಡೇಳಿರಿ" ಎಂದು

ಸಮಾಧಾನದಿಂದ ಹೇಳಿದಳು. ಅವಳ ಈ ಸಮಾಧಾನದ ಉತ್ತರ ಅವನಿಗೆ ಕಾಸಿದ ಬರೆಯಾಗಿ ಕಂಡಿತು. ಅವಳ ಮುಖವನ್ನವನು ದಿಟ್ಟಿಸುತ್ತ– "ನಾನು ಬಹಳ ತಡಮಾಡಿದೆ ತಾರಾ. ನೀನು ಕ್ಷಮಿಸಬೇಕು" ಎಂದ. ಆಕ್ಷಣ ಅವನ ಕಣ್ಣೆದುರಿಗೆ ಆ ಅಪೂರ್ವ ಕನಸಿನ ಕನ್ನಿಕೆ ಹೊಳೆದಳು. ಅದೃಶ್ಯದಲ್ಲಿಯ ಸಂಕೇತವನ್ನು ಅವನು ಗುಣಿಸ ತೊಡಗಿದ. ಅವನಿಗವಳೀಗ ತಾರಾನ ಮುಂದೆ ತೀರ ಕ್ಷುಲ್ಲಕವಾಗಿ ಕಂಡಳು.

ಕಿರಣನಿಗೆ ಆಗ ತುಸು ಜಂಪು ಹತ್ತಿದಂತೆ ತೋರಿದ್ದರಿಂದ ತಾರಾ ಲಗುಬಗೆಯಿಂದ ಒಳಗೆ ಹೋಗಿ ಪತಿಗೆ ತಾಟು ಬಡಿಸಿ ಒಮ್ಮೆಲೆ ಹೊರಗೆ ಬಂದಳು. ಊಟಕ್ಕೆ ಕುಳಿತ ಅವನಿಗೆ ಅನ್ನ ಗಂಟಲಿನಲ್ಲಿಳಿಯಲಿಲ್ಲ. ಈ ಮಧ್ಯದಲ್ಲಿ ಕಿರಣ ಬಡಬಡಿಸಿದ್ದರಿಂದ ತುತ್ತನ್ನು ಅಲ್ಲಿಯೇ ಚಲ್ಲಿ ಹೊರಗೆ ಬಂದ.

"ಏನು ಇಷ್ಟು ಬೇಗ ಊಟ ಮುಗಿಯಿತಿ?"

"ಹಸಿವಾಗಿತ್ತು. ಗಪಗಪನೆ ಉಂಡುಬಿಟ್ಟೆ" ತಾರಾನಿಗೆ ಪತಿಯ ಸುಳ್ಳು ಕಣ್ಣೀರನ್ನೇ ತರಿಸಿತು.

ಮೂರು ದಿನಗಳಾದರೂ ಕಿರಣನ ಜ್ವರ ಇಳಿಯಲಿಲ್ಲ. ಡಾಕ್ಟರರು ಬಂದು "ಜ್ವರ ವಿಷಮಕ್ಕಿಟ್ಟುಕೊಂಡಂತೆ ತೋರುತ್ತದೆ. ಜಾಗ್ರತೆಯಿಂದಿರಬೇಕು" ಎಂದು ಎಚ್ಚರಿಸಿ ಹೋದರು.

ಅಖಂಡ ಇಪ್ಪತ್ತೊಂದು ದಿನಗಳವರೆಗೆ ಗಂಡ-ಹೆಂಡಿರಿಬ್ಬರೂ ಕಿರಣನ ಶುಶ್ರೂಷೆಗೆ ನಿಂತರು. ಹಣ್ಣು-ಹಾಲು, ಮದ್ದು-ಸೂಜಿಮದ್ದುಗಳಿಗೆ ಹಣ ಹಳ್ಳದಂತೆ ಹರಿಯಿತು. ಕಂಡ ಶಿಕ್ಷಕ ಮಿತ್ರರಲ್ಲಿ ಹಣ ಕೈಗಡ ತರಬೇಕಾಯಿತು. ತಂದ ಹಣವೆಲ್ಲ ವೆಚ್ಚವಾಗಿ ಹೋದರೂ ಡಾಕ್ಟರರ ಬಿಲ್ಲು ಹಾಗೆಯೇ ಉಳಿಯಿತು. ಹೆಚ್ಚಿನ ಔಷಧ ತಂದ ಅಂಗಡಿಯವನಿಗೆ ಇನ್ನೂ ಕೊಡಬೇಕಾದ ಹಣವನ್ನು ತೀರಿಸಲಾಗಲಿಲ್ಲ. ಈ ವೆಚ್ಚ

ಇಮ್ಮಡಿಸಲು ಇನ್ನೂ ಒಂದು ಕಾರಣವಾಯಿತು. ಕಿರಣನಿಗೆ ಜ್ವರ ಬಂದ ಹದಿನಾಲ್ಕನೆಯ ದಿನ ಅವನು ಬಹಳ ಗಾಬರಿ ಮಾಡಿದ್ದರಿಂದ ವಿಶ್ವಾಸ ತಾರುಕೊಟ್ಟು ಅಣ್ಣ-ಅತ್ತಿಗೆಯರನ್ನು ಕರೆಯಿಸಿಕೊಂಡ. ಅವರು ತಮ್ಮ ಸರಂಜಾಮುದೊಂದಿಗೆ ಧಾವಿಸಿ ಕಿರಣನ ಜ್ವರ ಇಳಿಯು ವವರೆಗೆ ನಿಂತು ಹೋದರು. ಅವರ ವೆಚ್ಚ ಈ ವೆಚ್ಚದೊಡನೆ ಕೂಡಿ ದ್ದರಿಂದ ಸಾಲದ ಭಾರ ತಲೆಭಾರವಾಯಿತು. ಕಿರಣ ಬದುಕಿದನೆಂಬ ಸಂತೋಷ ಸಾಲದ ವೇದನೆಯನ್ನು ಕಡಿಮೆ ಮಾಡಿದ್ದರೂ ಸಾಲ ತೀರಿಸಲೇಬೇಕಾದ ಪ್ರಶ್ನೆ ವಿಶ್ವಾಸನ ಮನದಲ್ಲಿ ಕೊರೆಯುತ್ತಿತ್ತು. ತಾರಾ ಈಗ ತುಂಬಾ ಬಳಲಿದ್ದಳು. ಅವಳ ದೇಹ ಬಡಕವಾಗಿತ್ತು. ಅದಕ್ಕಾಗಿ ಅವಳೊಂದಿಗೆ ಸಾಲದ ವಿಚಾರ ಚರ್ಚಿಸಲು ಹಿಂದೆಗೆದು ಆವನು ತನ್ನ ವೇದನೆಯನ್ನು ತನ್ನಲ್ಲೇ ನುಂಗಿಕೊಂಡಿದ್ದ. ಈಚೆಗವನಿಗೆ ಎರಡಕ್ಷರ ಬರೆಯುವದೂ ಸಾಧ್ಯವಾಗಿರಲಿಲ್ಲ. ಯಂತ್ರದಂತೆ ಶಾಲೆಗೆ ಹೋಗುವದೂ; ಮನೆಗೆ ಬರುವದು. ಈ ಜೀವನ ಅವನಿಗೆ ತುಂಬಿದ ಬೇಸರವನ್ನು ತಂದಿತ್ತು. ಏನಾದರೂ ಮಾಡಿ ರಿಣ ಮುಕ್ತನಾದರೆ ಆವನಿಗೆ ಸಾಕಾ ಗಿತ್ತು. ಆದರೆ ಆ ಕೆಲಸವೂ ಅಷ್ಟು ಸುಲಭವಾಗಿರಲಿಲ್ಲ. ಆ ತಿಂಗಳು ಕೊನೆಯ ತಾರೀಖಿನೊಳಗೆ ಆವನ ಶಿಕ್ಷಕರ ಸಾಲ ತೀರಿಸಬೇಕಿತ್ತು. ವಿದ್ಯಾರ್ಥಿಗಳಿಂದ ವಸೂಲು ಮಾಡಿದ ಫೀ ಹಣ ಇಟ್ಟುಕೊಳ್ಳಲು ಸಾಧ್ಯವೆ? ಈ ಹಣವನ್ನು ತಡೆದು ತೆಗೆದುಕೊಳ್ಳುವ ಸಾಮರ್ಥ್ಯ ಯಾವ ಶಿಕ್ಷಕ ರಲ್ಲಿಯೂ ಇಲ್ಲವೆಂದು ಅವನಿಗೆ ಗೊತ್ತಿತ್ತು. ಅವನಿಗೆ ಈ ಸಾಲ ತೀರಿಸುವದೊಂದು ಮನೋರೋಗವೇ ಆಗಿಬಿಟ್ಟಿತು. ಕಾಲೇಜದಲ್ಲಿ ಇವನ ಪ್ರಿಯ ಗೆಳೆಯನಾಗಿದ್ದ ವೆಂಕಟೇಶನಿಗೆ ಒಮ್ಮೆ ಬರೆದು ನೋಡ ಬೇಕೆನ್ನಿಸಿತು. ಆದರೆ ಅವನ ಸ್ಪಷ್ಟವಾದ ವಿಳಾಸದ ಪರಿಚಯವಿಲ್ಲದೆ ಅವನು ಆ ವಿಚಾರವನ್ನು ಬಿಡಬೇಕಾಯಿತು.

ಗಂಡನ ಸಂಕಟವನ್ನು ತಾರಾ ಅರಿತಿದ್ದಳು. ಈ ಸಾಲದ ವಿಚಾರ ವಾಗಿ ಪತಿ ತಲೆಕೆಡಿಸಿಕೊಳ್ಳುತ್ತಿರುವದು ಅವಳಿಗೆ ಸರಿದೋರಲಿಲ್ಲ ಅವಳೊಂದು ನಿರ್ಧಾರಕ್ಕೆ ಬಂದಿದ್ದಳು. ಆ ನಿರ್ಧಾರವನ್ನು ಪತಿ

ತಿಳಿಸಲು ಆ ರಾತ್ರಿ ಕಿರಣನಿಗೆ ಆಟೋಳಿ ಕುಡಿಸಿ ಅವನು ಮಲಗಿದ ಮೇಲೆ ಪತಿಬಳಿಗೆ ನಡೆದಳು. ಅವಳ ನಿರ್ವಿಣ್ಣವಾದ ಮೊಗದಲ್ಲಿ ದಣಿವು ತಲೆದೋರಿದ್ದರೂ ಅದನ್ನು ಮರೆಯಿಸಿ– "ಈ ಯೋಚನೆ ಯಾವ ಕೆಲಸಕ್ಕೆ ಬಂದೀತು? ಸುಮ್ಮನೆ ಯೋಚಿಸಿದರೆ ಸಾಲ ತೀರಿಸಿದಂತಾ ಯಿತೆ? ನಿಮ್ಮ ಆರೋಗ್ಯವನ್ನು ನೆನೆದರೆ ನನಗೆ ಭಯವೇ ಆಗುತ್ತದೆ" ಎಂದು ಹನಿದುಂಬಿದಳು.

"ನನಗೇನಾಗಿದೆ ತಾರಾ? ಏನೊ ಸ್ವಲ್ಪ ಬಳಲಿಕೆ ಅಷ್ಟೆ. ನೀನೇನು ತುಂಬಿಕೊಂಡಿದ್ದೀಯಾ?"

"ಆ ಮಾತಿರಲಿ. ಸಾಲದ ವಿಚಾರವಾಗಿ ನೀವು ಯೋಚಿಸಬೇಕಾ ದ್ದಿಲ್ಲ. ಈ ಬಳೆಯನ್ನು ಮಾರಿ ಬಿಡಿರಿ. ಬಂದ ಹಣದಿಂದ ನಿಮ್ಮ ಯೋಚನೆ ತಪ್ಪುತ್ತದೆ. ಅದೂ ಪೂರೈಸದಿದ್ದರೆ ಇನ್ನೊಂದು ಬಳೆಯೂ ಇದೆ."

ವಿಶ್ವಾಸ ಹೆಂಡತಿಯನ್ನು ವಿಶ್ವಾಸಪೂರ್ವಕವಾಗಿ ನೋಡಿ– "ಬಂಗಾ ರದ ಬಳೆಯನ್ನು ಮಾರಿ ಸಾಲ ತೀರಿಸುವದೆ?"

"ಬಂಗಾರದಂಥ ಕೂಸೇ ನನ್ನ ಆಭರಣವಾಗಿ ಉಳಿದಿರುವಾಗ ಈ ಚಿನ್ನದ ಬಳೆಯ ಬೆಲೆ ಏನು? ಮಾರಿ ಬಿಡಿರಿ." ವಿಶ್ವಾಸನ ಕಣ್ಣುಗಳು ಒದ್ದೆಯಾದವು.

ಸಾಲದ ಭಾರದಿಂದ ಮುಕ್ತನಾದ ಅವನಲ್ಲಿ ಹೊಸ ಚೈತನ್ಯ ಮೂಡಿತು. ಒಮ್ಮೊಮ್ಮೆ ತಾನು ಚಿನ್ನದ ಬಳೆ ಮಾರಿ ಸಾಲ ತೀರಿಸು ವಂತಾಯಿತಲ್ಲ– ಎಂದು ಮರುಗುವನು. ಆದರೆ ದೇವರು ದಯದೋರಿ ದರೆ ಅಂತಹ ಬಳೆಯನ್ನು ಮತ್ತೆ ಮಾಡಿಸಬಹುದೆಂದು ಆ ಮಟ್ಟಿಗೆ ಸಮಾಧಾನ ತಂದುಕೊಳ್ಳುವನು. ಕಿರಣನ ಆರೋಗ್ಯ ಸುಧಾರಿಸಿತು. ತಾರಾ ಮತ್ತೆ ತುಂಬಿಕೊಂಡಳು. ವಿಶ್ವಾಸನ ಕಾವ್ಯವಾಹಿನಿ ಮತ್ತೆ ಹರಿಯತೊಡಗಿತು. ನಿಸರ್ಗದೇವಿ ಮತ್ತೆ ಅವನನ್ನು ಕೈಮಾಡಿ ಕರೆದಳು.

ಅವನಿಗೆ ತಾನು ಆದಿನ ಕಂಡ ದಿವ್ಯದೃಶ್ಯದ ಅನುಭವ ಮತ್ತೆ ಮರು ಕಳಿಸಿತು. ಆ ರೂಪ, ಆ ವೀಣೆಯ ಸ್ವರ ಅವನನ್ನು ಕೆಣಕಿದವು. ಆದರೆ ಆ ಮಾಯಾವಿ ಅದೃಶ್ಯಳಾದಳು. ಅವಳಿಗೆ ತನ್ನ ಸಾನಿಧ್ಯ ಬೇಡ ವಾಯಿತೇಕೆ? ಒಂದರ್ಧ ನಿಮಿಷದ ಆ ಕರಸ್ಪರ್ಶ ಅದೆಷ್ಟು ಸ್ವರ್ಗೀಯ ವಾಗಿತ್ತು. ಅವಳು ನಿರಂತರ ಸಹವಾಸವನ್ನು ಕೊಡಲು ನಿರಾಕರಿಸಿದಳೇಕೆ? ಇದರಲ್ಲಿ ಅಡಕವಾದ ಸಂಕೇತವಾವುದು?

ಅವನಿಗೆ ಆ ದೃಶ್ಯವನ್ನು ಮತ್ತೊಮ್ಮೆ ಕಾಣಬೇಕೆನ್ನಿಸಿತು. ಆದರೆ ಸಾಧ್ಯವಾಗಲಿಲ್ಲ.

೪

ಕಿರಣನ ದೇಹಾಲಸ್ಯದ ಮೂಲಕವಾಗಿ ಅನೇಕ ದಿನಗಳಿಂದ ಪ್ರಕೃತಿ ದೇವಿಯ ಸಾನಿಧ್ಯವನ್ನು ತಪ್ಪಿಸಿಕೊಂಡ ವಿಶ್ವಾಸನನ್ನು ಈಗ ನಿಸರ್ಗಸುಂದರಿ ಮತ್ತೆ ಮತ್ತೆ ಕೈಮಾಡಿ ಕರೆಯತೊಡಗಿದಳು. ಮನೆ ಯಲ್ಲೀಗ ನೆಮ್ಮದಿ ಸ್ಥಾಪಿತವಾಗಿತ್ತು. ಕಿರಣನ ಆರೋಗ್ಯದಲ್ಲಿ ಪ್ರಗತಿ ನಡೆದಿತ್ತು. ತಾರಾ ಮತ್ತೆ ತುಂಬಿಕೊಂಡಳು. ಸಾಲದ ಭಾರವೂ ಇರಲಿಲ್ಲ. ಅವನ ಕಾವ್ಯವಾಹಿನಿಗೆ ಮತ್ತೆ ಉಕ್ಕು ಬಂದಿತು. ಅನೇಕ ಕತೆ, ಲೇಖನಗಳನ್ನು ರಚಿಸಿತು.

ಆದಿನ ಭೈರವಿ ಕೊಳ್ಳದಲ್ಲಿ ಕಂಡ ಆ ಅನುಪಮ ದೃಶ್ಯವನ್ನು ಮತ್ತೊಮ್ಮೆ ಕಾಣಲು ಅವನು ಆತುರನಾಗಿದ್ದ. ಆದರೆ ದೃಶ್ಯ ಮರುಕಳಿಸಲಿಲ್ಲ. ಆದರೂ ಅಂದಿನ ನೋಟ ಅವನ ಹೃತ್ಪಟಲದಲ್ಲಿ ಸ್ಥಿರವಾಗಿ ನಿಂತಿತ್ತು. ಆ ಸ್ಫೂರ್ತಿ ಮತ್ತೆ ಅವನನ್ನು ಕಾಡು-ಮೇಡು ಅಲೆಯಲು ಹಚ್ಚಿತು. ನಿತ್ಯ ಜೀವನದಿಂದ ಬೇಸತ್ತ ಪತಿ ಈ ಭಾವ ಮರಕಳಿಸಿದುದು ಶುಭ ಚಿನ್ಹವೆಂದು ತಾರಾ ಬಗೆದಳು. ಜೀವನದ ಜೊಂಜಾಟದಲ್ಲಿ ಅವನ ಕಾವ್ಯವಾಹಿನಿ ಎಲ್ಲಿ ಬತ್ತಿ ಹೋಗುವದೊ ಎಂದು ಬೆದರಿದ್ದ ಅವಳಿಗೆ ಅವನ ಈ ಅಲೆದಾಟ ತೃಪ್ತಿಯನ್ನೇ ನೀಡಿತು. ಆದರೆ ಈ ಅಲೆದಾಟ ಶಾಲೆಯವೇಳೆಗೆ ವ್ಯತ್ಯಯ ತರಬಾರದೆಂದು ಆಗಾಗ ಅವನಿಗೆ ಸೂಚಿಸು

ತ್ತಿದ್ದಳು. ಅವನ ನಡತೆಯಿಂದ ಅವಳಿಗೆ ಹೆಚ್ಚಿನ ಸಮಾಧಾನವಾಗಿ ದ್ದರಿಂದ ಪತಿಯನ್ನವಳು ಅಭಿಮಾನದಿಂದ ನೋಡುತ್ತಿದ್ದಳು. ಅವನ ಕಾವ್ಯ ಜೀವನಕ್ಕೆ ಸ್ಫೂರ್ತಿದೇವಿಯಾಗಿ ನಿಂತಳು. ಬಾಳಿನ ಯಾವ ತೊಂದರೆಯನ್ನೂ ಅವನಿಗೆ ತೋರಗೊಡದೆ ಎಲ್ಲವನ್ನೂ ತಾನೇ ನಿರ್ವ ಹಿಸುತ್ತಿದ್ದಳು. ಅವಳ ಈ ಸಹಕಾರದಿಂದ ಬಾಳು ತುಂಬಾ ಸಾರ್ಥಕ ವಾಗಿ ಕಂಡಿತು. ಅವನ ಕಾವ್ಯಪಕ್ಷಿ ಗರಿಗೆದರಿಕೊಂಡು ಆಕಾಶದಲ್ಲಿ ಉಡ್ಡಾಣ ಮಾಡಿತು.

ಇನ್ನೂ ಚುಮುಚುಮು ನಸುಕಿರುವಾಗಲೇ ಅವನು ಹೊರಬಿದ್ದ. ಈ ದಿನ ಅವನಲ್ಲಿ ಎಂದೂ ಇಲ್ಲದ ಉತ್ಸಾಹ ಮೂಡಿತ್ತು;- ಸ್ಫೂರ್ತಿ ದನಿಯಲ್ಲಿ ರೂಪುಗೊಳ್ಳುತ್ತಿತ್ತು. ಊರ ಸನಿಯದಲ್ಲಿ ಕವಲೊಡೆದ ದಾರಿ ಗುಂಟ ಸಾಗಿದ ಅವನು ಸಣ್ಣ ಧ್ವನಿಯಲ್ಲಿ ಕವನವನ್ನು ಹಾಡುತ್ತ ಸಾಗಿದ್ದ. 'ದೊಡ್ಡಗೌಡರ ತೋಟ'ವನ್ನು ಬಳಸಿ ಹರಿಯುತ್ತಿರುವ ಮಾರ್ಕಂಡೇಯ ನದಿಯ ದಂಡೆಗುಂಟ ನಡೆದಿದ್ದ. ಅಲ್ಲಿ ನೀರು ಕವ ಲಾಗಿ ಹರಿಯುತ್ತಿತ್ತು. ಅನೇಕ ವೃಕ್ಷಗಳ ಮಧ್ಯದಲ್ಲಿ ಜುಳುಜುಳು ದನಿ ಮಾಡುತ್ತ ಸಾಗಿದ ಆ ಮಧುರ ತರಂಗಿಣಿಗೆ ಮುಗ್ಧನಾಗಿ ತನ್ನ ಹಾಡುವ ಸ್ವರವನ್ನಿನ್ನೂ ಎತ್ತರಿಸಿದ. ಆ ದನಿಗೆ ತಲೆದೂಗುವಂತೆ ಮರಗಳು ಅಲ್ಲಾಡಿದವು;- ಸಂತೋಷವನ್ನು ವ್ಯಕ್ತಪಡಿಸುವಂತೆ ಹಕ್ಕಿ-ಪಕ್ಕಿಗಳು ಚಿಲಿಪಿಲಿಗುಟ್ಟಿದವು. ಆ ತೋಟದ ಅಂಚಿನಲ್ಲಿಯೆ ವಕ್ರವಾಗಿ ಹರಿದ ನದಿಯ ಸುತ್ತಲೆಲ್ಲ ಹಸಿರು ಮುರಿಯುವ ಕಾಡು ಮರಗಳು ಹೂತು ನಿಂತಿದ್ದವು. ದಂಡೆಯ ಸನಿಹದಲ್ಲಿ ನಿಂತ ಮಾವಿನ ತೋಪು ಶೋಭಾ ಯಮಾನವಾಗಿ ಕಂಗೊಳಿಸುತ್ತಿದ್ದವು. ಅವನು ನೀರಿನಲ್ಲಿ ಕಾಲನ್ನು ಇಳಿ ಬಿಟ್ಟು ಅದೆಷ್ಟೋ ಹೊತ್ತಿನವರೆಗೆ ಕುಳಿತಿದ್ದ.

ಆ ದಿನ ಸಂಜೆಯಾದ ವೇಳೆಗೆ ಶಾಲೆಗೆ ಹೋಗಲು ಅವನಿಗೆ ಸಾಧ್ಯ ವಾಗಲಿಲ್ಲ. ಮನೆಯಲ್ಲಿ ತಾರಾ ಎಚ್ಚರಿಸಿದಳು. ಶಾಲೆಯಲ್ಲಿ ಮುಖ್ಯೋ ಪಾಧ್ಯಾಯರು ಪ್ರತಿಭಟಿಸಿದರು. ಇಬ್ಬರಿಗೂ ಅವನು ಬರಿಯ ಮುಗುಳು ನಗೆಯ ಉತ್ತರವನ್ನಿತ್ತ.

ಮತ್ತೊಂದು ದಿನ ಬೆಳಗಾಗಲು ಇನ್ನೂ ಮೂರು ತಾಸಿನ ಅವಧಿಯಿತ್ತು. ಅವನಿಗೆ ಪಕ್ಕನೆ ಎಚ್ಚರವಾಯಿತು. ಹೊರಗೆ ಬೆಳದಿಂಗಳು ಹಾಲಾಗಿ ಹರಿಯುತ್ತಿತ್ತು. ಆಕಾಶದಲ್ಲಿ ಚಂದಿರನು ಕುಲು ಕುಲು ನಗುತ್ತ ಸಾಗಿದ್ದ. ಶುಭ್ರವಾದ ಬೆಳದಿಂಗಳು ಅವನನ್ನು ಮತ್ತೆ ಮಲಗಗೊಡಲಿಲ್ಲ. 'ಗೂಬೆಯ ಕೊಳ್ಳ'ದ ಕಡಿದಾದ ಮಾರ್ಗದಲ್ಲಿ ಕಾಡು ದಟ್ಟವಾಗಿ ಹಬ್ಬಿಕೊಂಡಿದೆ. ಎಡಬಲದ ಎತ್ತರವಾದ ಮರಗಳು ಬೆಳದಿಂಗಳಿಗೆ ಪ್ರವೇಶವನ್ನು ಕಟ್ಟು ಮಾಡಿವೆ. ರಾತ್ರಿಯ ಕಾಡು ಮೌನವನ್ನು ಭೇದಿಸುವಂತೆ ಅಲ್ಲಲ್ಲಿ ಚಿಕ್ಕ ಪ್ರವಾಹಗಳು ಗುಂಡುಗಲ್ಲುಗಳ ಮೇಲೆ ಬಿದ್ದು ಸದ್ದು ಮಾಡುತ್ತಿವೆ. ಭೂತಾಕಾರದ ಬಂಡೆಗಲ್ಲುಗಳು ದೆವ್ವನಂತೆ ಕಾಡಿನಲ್ಲಿ ಅಲ್ಲಲ್ಲಿ ಭೀಕರತೆಯನ್ನು ಹುಟ್ಟಿಸುತ್ತವೆ. ಎಲ್ಲಿಯೋ ಬಹು ದೂರ "ಇರುಳುಗಣ್ಣ"ನು ಗುಳುಗುಳು ಸಪ್ಪಳ ಮಾಡಿ ಮತ್ತೆ ಮೌನವಾಗುತ್ತಾನೆ.

ವಿಶ್ವಾಸನಿಗೆ ರಾತ್ರಿಯ ಪರಿವೆಯೂ ಇಲ್ಲ. ಕಾಡಿನ ಚಿಂತೆಯೂ ಇಲ್ಲ. ಅವನ ಮನಸ್ಸು ಈ ಸುಂದರ ಸ್ವರೂಪದ ಧೀರ ಗಂಭೀರ ವನರಾಸಿಯ ದಿವ್ಯ ಸೌಂದರ್ಯದಲ್ಲಿ ನಟ್ಟು ಹೋಗಿದೆ. ಅವನು ಒಂದೇ ಸವನೇ ಆ ಕಾಡು ದಾರಿಯನ್ನು ತುಳಿಯುತ್ತಿದ್ದಾನೆ. ಅವನು ನಡೆಯುತ್ತಿರುವ ದಾರಿ ಕಾಡನ್ನು ಸೀಳಿಕೊಂಡು ಸಾಗಿದೆ. ಕೆಲವು ಕಡೆ ಅದು ಕಟ್ಟಾದಂತೆ ಕಂಡರೂ ಅವನು ಒಂದು ಕಂಟಿಯನ್ನು ಬದಿಗೆ ಸರಿಸಿ ಮುಂದುವರಿಯುತ್ತಾನೆ. ಮತ್ತೊಂದು ಬಂಡೆಗಲ್ಲನ್ನು ನೆಗೆದು ದಾರಿಗೆ ಹತ್ತುತ್ತಾನೆ. ಹೀಗೆ ಬಹುದೂರ ದಾರಿ ಕ್ರಮಿಸಿ ಕೊಳ್ಳದಂಚಿಗೆ ಬಂದಿದ್ದಾನೆ. ಕೆಳಗೆ ಹೆಬ್ಬಾವಿನಂತೆ ಪ್ರವಾಹ ಹರಿಯುತ್ತಿದೆ. ಅದರ ಸಪ್ಪಳಕ್ಕೆ ಕಿವಿ ಗಡದ್ದು ಹಾಕಿದೆ. ಕೊಳ್ಳವನ್ನಿಳಿದು ನದಿಯ ತೀರ ಸಮೀಪಕ್ಕೆ ಹೋಗಿ ಕುಳಿತುಕೊಂಡು ಗಂಭೀರ ಸ್ವರದಲ್ಲಿ ಹಾಡನ್ನಾರಂಭಿಸಿದ. ಆ ಹಾಡಿಗೆ ಕಾಡು ನಡುಗಿತು. ಅಲ್ಲಲ್ಲಿ ಕಂಟಿಗಳಲ್ಲಿ ರೆಕ್ಕೆ ಬಡಿದುಕೊಂಡ ಸಪ್ಪಳ ಕೇಳಿತು.

ಮುಂಜಾವಿನ ಗಾಳಿ ಬೀಸತೊಡಗಿದಂತೆ. ಕಾಡು ನಿದೆ ತಿಳಿದೆ

ದ್ದಂತೆ ಹಕ್ಕಿಪಕ್ಕಿಗಳು ಹಾರಾಡಿದವು. ಸೂರ್ಯ ಕಿರಣಗಳು ಗಿಡದಿಂದ ಸೂಸಿಬಂದು ದಂಡೆಯ ನೀರನ್ನು ಬೆಳಗಿಸಿದವು. ವಿಶ್ವಾಸನಿಗೆ ಆ ದೃಶ್ಯ ಅಪೂರ್ವವಾಗಿ ಕಂಡಿತು. ಇಡಿಯ ಕಾಡನ್ನು ಕಿರಣಗಳು ತೋಯಿಸು ತ್ತಿರುವ ಆ ನೋಟ ದಿವ್ಯ ಮನೋಹರವಾಗಿತ್ತು. ಅವನ ಕಣ್ಣುಗಳು ಧನ್ಯವಾದವು.

ಸ್ವಲ್ಪ ಹೊತ್ತಿನಲ್ಲೇ ಆ ಮಾರ್ಗವಾಗಿ ಕಟ್ಟಿಗೆಯನ್ನು ಸಂಗ್ರಹಿಸಿ ಮಾರುವ ಜನ ಬರಲಾರಂಭಿಸಿದರು. ಅವರಲ್ಲಿ ಹೆಣ್ಣುಮಕ್ಕಳೂ ಇದ್ದರು. ತಲೆಯ ಮೇಲೆ ಬುತ್ತಿಯ ಗಂಟು ಹಗ್ಗದ ಸುರುಳಿಯ ಮೇಲೆ ವಿರಾ ಜಮಾನವಾಗಿತ್ತು. ಕೈಯಲ್ಲಿ ಪುಟ್ಟ ಕೊಡಲಿ. ಅವನು ನೋಡನೋ ಡುತ್ತಿರುವಂತೆಯೆ ಅವರು ಕೆಲಸ ಆರಂಭಿಸಿದರು. 'ಕಟ್ - ಕಡಲ್' ಎಂಬ ಧ್ವನಿ ಕಾನನವನ್ನು ಗಡಚಿಕ್ಕಿತು. ಅವರನ್ನವನು ಪ್ರೇಮಪೂರ್ವ ಕವಾಗಿ ನೋಡಿದ. ನಿಸರ್ಗದ ಮಡಿಲಲ್ಲಿ ಕೆಲಸ. ಇದೇ ಹೊತ್ತಿಗೆ ಬಂದು ಇದೇ ಹೊತ್ತಿಗೆ ಹೋಗಬೇಕೆಂಬ ನಿಯಮವಿಲ್ಲ. ಬೇಕಾದಾಗ ಬರುತ್ತಾರೆ. ಶಕ್ತಿಯಿದ್ದಷ್ಟು ದುಡಿಯುತ್ತಾರೆ. ಹಾಯಾಗಿ ಬಾಳುತ್ತಾರೆ. ಅವರ ಬಾಳು ತನಗಿಲ್ಲವೆಂದು ಮರುಗಿತು ಅವನ ಮನ. 'ನಾನು ಸ್ವತಂತ್ರ ಜೀವಿಯಲ್ಲ. ಬೇಕಾದಷ್ಟು ಹೊತ್ತು ಇಲ್ಲಿ ಕುಳಿತುಕೊಳ್ಳಲೂ ಸಾಧ್ಯವಿಲ್ಲ. ಇದು ಬಾಳೆ?' ಎಂದು ತನ್ನಲ್ಲೆ ತಾನು ಗೊಣಗುಟ್ಟಿದ. 'ನಾನೇಕೆ ಇವರಂತೆ ಸ್ವತಂತ್ರನಾಗಿ ಬಾಳಬಾರದು? ಆಗ ಈ ಸೃಷ್ಟಿ ಸೌಂದರ್ಯದ ಬೀಡನ್ನೇ ಗೂಡನ್ನಾಗಿ ಮಾಡಿಕೊಳ್ಳಬಹುದು. ಹೌದು. ಹಾಗೆ ಮಾಡಿದರೆ ನನ್ನ ಜೀವನ ಸಾರ್ಥಕವಾಗುವದು. ಆದರೆ ನನಗಿವ ಭಾಗ್ಯವಿಲ್ಲ. ಸ್ವತಂತ್ರ ಜೀವನವನ್ನು ಸಾಗಿಸುವ ಧೈರ್ಯವಿಲ್ಲ. ನಾನು ಸಾಹಿತಿ ನಾನು ಕವಿ, ಕವಿಯ ಜೀವನ ಹೂವಿನ ಹಾಸಿಗೆಯಲ್ಲವೆಂದು ಕಂಡಿದ್ದೇನೆ. ನನ್ನ ಬಡತನಕ್ಕಾಗಿ ಜೀವನವನ್ನೇ ಮಾರಿಕೊಳ್ಳಬೇಕಾ ಗಿದೆ. ಆದರೂ ನಾನು ಕವಿ....' ಅವನು ವ್ಯಂಗ್ಯವಾಗಿ ನಕ್ಕನು. ಬಿಸಿ ಲೇರಿತು. ಶಾಲೆಗೆ ಈದಿನ ಮತ್ತೆ ವಿಲಂಬವಾಗುವದೆಂದು ಬೆದರಿ ಮನೆಯತ್ತ ಸಾಗಿದ. ಅವನಿಗೀಗ ತನ್ನ ಬಗ್ಗೆ ತನಗೇ ತಿರಸ್ಕಾ

ಮೂಡಿತು. ಈ ಬಾಳನ್ನೊವ್ಮೆ ನೀಗಿಬಿಡಬೇಕೆಂಬ ಭಾವವೂ ಸುಳಿದು ಹೋಯಿತು. ಆದರೆ 'ಹೆಂಡತಿಯ ಗತಿಯೇನು? ಮಕ್ಕಳ ಪಾಡೇನು?' ಮುಂಜಾನೆ ನಾಲ್ಕು ತಾಸು ನಡೆದು ಬಂದರೂ ಅವನಿಗೆ ಶ್ರಮವಾಗಿರ ಲಿಲ್ಲ. ಈಗ ಅವನು ಒಂದೊಂದು ಹೆಜ್ಜೆಯನ್ನೂ, ಕಿತ್ತು, ಕಿತ್ತು ಇಡುತ್ತಿದ್ದ.

ಶಾಲೆ ಪ್ರಾರಂಭವಾಗುವ ವೇಳೆ ತೀರ ಸಮೀಪವಾಗಿದ್ದರೂ ಪತಿ ಇನ್ನೂ ಬಾರದ್ದರಿಂದ ತಾರಾ ಚಡಪಡಿಸುತ್ತಿದ್ದಳು. ಅವಳು ಎಷ್ಟೋ ಸಲ ಬಾಗಿಲವರೆಗೆ ಹೋಗಿ ನೋಡಿ ಬಂದಿದ್ದಳು. ಅವನ ಸುಳಿವೇಯಿಲ್ಲ. ಮುಖ್ಯಾಧ್ಯಾಪಕರು ಎಚ್ಚರಿಕೆಯನ್ನು ಅವನು ಪ್ರತಿದಿನವೂ ಹೇಳುತ್ತಿದ್ದ ಮಾತು ಅವಳಿಗೆ ಮುಳ್ಳಿನಂತೆ ಚುಚ್ಚಿತು. 'ಈ ರೀತಿ ಹೀಗೆಯೆ ಸಾಗಿ ದರೆ....' ಅವಳಿಗೆ ಸ್ವಲ್ಪ ಭಯವಾಯಿತು. ಅಷ್ಟರಲ್ಲಿ ಹೊರಗೆ ಕಾಲು ಸದ್ದು ಕೇಳಿತು. ಆದರೆ ಬಂದವನು ವಿಶ್ವಾಸನಲ್ಲ; ಕಿರಣ. ಕನ್ನಡ ಶಾಲೆ ಬಿಟ್ಟಿತೆಂಬ ಅರಿವಾಗಿ ಅವಳ ಆತುರತೆ ಇನ್ನಷ್ಟು ಹೆಚ್ಚಿತು. ಲಗುಬಗೆಯಿಂದ ಅವಳು ಮಣೆ ಹಾಕಿ ತಾಟನ್ನಿಟ್ಟು ಉಪ್ಪು, ಚಟ್ಣಿ ಬಡಿಸಿದಳು. ಅವಳ ಪತಿ ಇನ್ನೂ ಬರಲಿಲ್ಲ. ಯಾರೋ ಕೂಗಿದಂ ತಾಗಿ ತಾರಾ ಹೊರಗೆ ಬಂದಳು. ಬಂದವನು ಶಾಲೆಯ ಜವಾನನಾ ಗಿದ್ದ. "ಮಾಸ್ತರ ಸಾಹೇಬರನ್ನ ಕರೀತಾರ ಸಾಲೀಗೆ."

"ಇನ್ನೂ ಮನೀಗೆ ಬಂದಿಲ್ಲ. ಬಂದ ಕೂಡಲೆ...."

"ಹೇರಮನ್ನ ಸಾಬರು ಬಂದಾರ ಬಾಯಿ. ಅವರು ಮಾಸ್ತರ ಸಾಬರನ...."

"ಬಂದ ಕೂಡಲೆ ಬಂದೇ ಬಿಡತಾರೆ ಹೋಗು" ಎಂದು ತಾರಾ ಹೇಳಿ ಕಳಿಸಿದಳು. ಅವಳಿಗೆ 'ಶಾಲೆಯಲ್ಲಿ ವಿಶೇಷವೇನಾದರೂ ಇರ ಬಹುದು. ಇಂತಹ ಹೊತ್ತಿನಲ್ಲಿ ಇವರು ತಡಮಾಡಿ ಹೋಗುವದನ್ನು ಅವರು ಸಹಿಸಲಾರರು." ತಾರಾ ನಿರ್ವಿಣ್ಣ ಭಾವದಿಂದ ಒಳಗೆ ನಡೆದಳು.

ಕಿರಣನಿಗೆ ಉಣಬಡಿಸಿದಳು. ಉಷಾ ತಂದೆ ಬಾರದೆ ಊಟ ಮಾಡು ವದಿಲ್ಲವೆಂದು ಹಟ ಹಿಡಿದು ಹಾಗೆಯೇ ಕುಳಿತಳು. ಕೈಯಲ್ಲಿ ಒಂದೆರಡು ಕಮಲದ ಹೂಗಳನ್ನೂ, ಕಾಡುಮಲ್ಲಿಗೆಯ ಗುಚ್ಛಗಳನ್ನೂ, ಕರವಸ್ತ್ರದಲ್ಲಿ ಕವಳೀ ಹಣ್ಣುಗಳನ್ನೂ ಕಟ್ಟಿಕೊಂಡ ಗಂಟನ್ನೂ ಹಿಡಿದುಕೊಂಡು ವಿಶ್ವಾಸ ನೇರವಾಗಿ ಅಡಿಗೆಮನೆಗೆ ಬಂದ. ಪತಿಯ ಈ ಸುಂದರಾಕಾರವನ್ನೂ, ನೊಗದಲ್ಲಿ ಮಿಂಚುತ್ತಿರುವ ಪ್ರತಿಭಾಪೂರ್ಣ ಕಳೆಯನ್ನೂ ನೋಡಿದ ತಾರಾ ಎಲ್ಲವನ್ನೂ ಮರೆತುಬಿಟ್ಟಳು. ಉಷಾ ಕೈಚಪ್ಪಾಳೆಯಿಕ್ಕಿ ನಗುತ್ತ ತಂದೆ ಯನ್ನು ಮುತ್ತಿದಳು. ತಾರಾ ಎದ್ದು ಹೂಗಳನ್ನು ತೆಗೆದುಕೊಳ್ಳುತ್ತ ಮಂದಸ್ಮಿತಳಾಗಿ– "ಎಷ್ಟು ಬೇಗ ಬಂದಿರಿ? ಪಾಪ! ಶಾಲೆಯ ಸಿಪಾಯಿ ಬಂದು ಹೋದ. ನಿಮ್ಮನ್ನು ಕರೆಯುವದೇ ಅವನ ಕೆಲಸವಾಗಿದೆ" ಎಂದಳು.

"ಮುಖ್ಯಾಧ್ಯಾಪಕರು ಕರೆಯ ಕಳಿಸಿರಬಹುದು ಅದಕ್ಕೇನು? ನಾನೀಗ ಹೋಗುತ್ತೇನಲ್ಲ."

"ಈದಿನ ಜೇರಮನ್ನರು ಬಂದಿದ್ದಾರಂತೆ"

ಆಗಲಿ. ತುಸು ತಡವಾದರೆ ಏನು ಜಗತ್ತು ಮುಳುಗಲಿಕ್ಕಿಲ್ಲ. ಅನ್ನ ಬಡಿಸು." ಅವನು ಯಾವ ಗಡಿಬಿಡಿಯನ್ನು ತೋರದೆ ಅಂಗಿ ಬಿಚ್ಚ ತೊಡಗಿದ.

"ನೀವು ಬರದೆ ಊಟ ಮಾಡುವದಿಲ್ಲವೆಂದು ಉಷಾ ಪಣ ತೊಟ್ಟಿದ್ದಾಳೆ."

"ಎಲಾ ಘಟ್ಟಾಣಿ. ನಿನ್ನ ಪಣ ಬೇರೆಯೆ?" ಎನ್ನುತ್ತ ಅವನು ಉಷಾನನ್ನು ಮುದ್ದಿಟ್ಟು ಹತ್ತಿರ ಕುಳ್ಳಿರಿಸಿಕೊಂಡು ಊಟವಾರಂಭಿಸಿದ. ತಾರಾ ಗಂಡನಿಗೆ ಸಂಭ್ರಮದಿಂದ ನೀಡಿದಳು. ಅವಳು ಮಡಿಚಿಕೊಟ್ಟ ವೀಳ್ಯವನ್ನು ಮೆಲ್ಲುತ್ತ ಯಾವ ಸಂಕೋಚವೂ ಇಲ್ಲದೆ ಶಾಲೆಯನ್ನು ಪ್ರವೇಶಿಸಿದ. ಅವನು ಒಳಗೆ ಕಾಲಿಟ್ಟ ಕೂಡಲೆ ಮುಖ್ಯಾಧ್ಯಾಪಕರು

ಕರೆಯ ಕಳಿಸಿದರು. ವಿಶ್ವಾಸ ಯಾವ ಆಚ್ಚರಿಯನ್ನೂ ಪಡದೆ ಅವ ರಲ್ಲಿಗೆ ನಡೆದ.

"ನಿಮಗೆ ಹೇಳಿ ಹೇಳಿ ಸಾಕಾಯಿತು ರಾಯರೆ. ನನ್ನ ಮಾತು ನೀವು ಕಿವಿಯ ಮೇಲೆ ಹಾಕಿಕೊಳ್ಳುವಂತೆ ತೋರುವದಿಲ್ಲ. ನಿಮಗೆ ನೌಕರಿ ಮಾಡುವ ಇಚ್ಛೆ ಇರದಿದ್ದರೆ ಹೇಳಿಬಿಡಿರಿ" ಅವರು ಗುಡುಗಿದರು.

"ನಿಜವಾಗಿಯೂ ನಿಮ್ಮ ಮಾತನ್ನು ಮೀರಿ ನಡೆಯುವ ಇಚ್ಛೆ ನನಗಿಲ್ಲ ರಾಯರೆ. ಆದರೂ ಈ ಮಾತು ನನ್ನ ಕೈಮೀರಿ ಸಾಗತೊ ಡಗಿದೆ. ನಾನಾದರೂ ಏನು ಮಾಡಲಿ? ನಿಮ್ಮ ಕ್ಷಮೆಯೇ ಸಿಗ್ಗಬೇಕು"

"ಇಷ್ಟು ದಿನ ನಾನು ತೋರಿದ ಔದಾರ್ಯ ನನಗೆ ಮುಳುವಾಗ ತೊಡಗಿದೆ. ಈ ಹೊತ್ತು ಚೇರಮನ್ನರು ಸಹ ನನ್ನನ್ನೆಚ್ಚರಿಸಿ ಹೋದರು. ಇನ್ನು ಮೇಲೆ ನಿಮ್ಮ ನಡತೆ ಸುಧಾರಿಸದಿದ್ದರೆ ಆದರಿಂದಾಗುವ ಪರಿಣಾಮಕ್ಕೆ ನನ್ನನ್ನು ದೂಷಿಸಬೇಡಿರಿ." ಅವರು ಖಂಡತುಂಡವಾಗಿ ಹೇಳಿದರು. ಅವರ ದನಿಯಲ್ಲಿ ಕಳವಳವಿತ್ತು.

"ಸಾಹಿತಿಗೆ ಸಮಾಜದ ಸಹಾನುಭೂತಿ ಬೇಡವೆ?"

"ಈ ಸಹಾನುಭೂತಿಯಿಂದ ಆಡಳಿತ ಹದಗೆಟ್ಟು ನಿಲ್ಲಬಾರದಷ್ಟೆ? ನಿಮ್ಮ ಸಾಹಿತ್ಯದ ವಿಚಾರದಲ್ಲಿ ನನಗೆ ಅಭಿಮಾನವಿದೆ. ಆದರೆ ಆ ಸಾಹಿತಿ ಶಿಕ್ಷಕನೂ ಎಂಬುದನ್ನು ನೀವು ಮರೆಯಬಾರದು. ಕಟ್ಟು ನಿಟ್ಟಿಲ್ಲದ ಕಾರ್ಯವನ್ನು ಯಾವ ಸಂಸ್ಥೆಯೂ ಸಹಿಸಲಾರದು. ನಿಮ್ಮ ಸಾಹಿತ್ಯ ಪ್ರೇಮ ಶಿಕ್ಷಣ ಕಾರ್ಯದಲ್ಲಿ ಅಡ್ಡಬರದಂತೆ ನೋಡಿಕೊಳ್ಳಿರಿ."

"ಪ್ರಯತ್ನ ಮಾಡುತ್ತೇನೆ" ಎಂದು ಅವನು ಹೊರಟು ನಿಂತ.

"ಯಾವಾಗಲೂ ಇದೇ ಮಾತನ್ನು ಹೇಳುತ್ತೀರಿ. ಆದರೆ ಒಂದು ದಿನವೂ ನೀವು ಮಾತಿನಂತೆ ನಡೆದಿಲ್ಲ." ಎಂದು ಮುಖ್ಯಾಧ್ಯಾಪಕರು ನಗೆ ಸೂಸಿ ಮತ್ತೆ ಹೇಳಿದರು– ಈ ವಾರದಲ್ಲಿ ಶಾಲೆಯ ವಾರ್ಷಿಕ

ತಪಾಸಣೆ ನಡೆಯುವದಿದೆ. ಇನ್ಸಪೆಕ್ಟರರೂ ಬರುವವರಿದ್ದಾರೆ. ಇಷ್ಟು ದಿನ ಆದದ್ದು ಆಗಿಹೋಯಿತು. ಈ ದಿನಗಳಲ್ಲಿಯಾದರೂ...."

"ನಾನು ಖಂಡಿತ ನಿಯಮ ಪಾಲಿಸುತ್ತೇನೆ" ಎಂದು ಹೊರಬಿದ್ದು ತನ್ನ ವರ್ಗದತ್ತ ನಡೆದ. ಅವನಲ್ಲಿ ಆ ಮಟ್ಟಿಗೆ ಪಶ್ಚಾತ್ತಾಪವೂ ಮೂಡಿತ್ತು.

ಆ ದಿನ ಮುಂಜಾವು ಶಾಲೆಯಲ್ಲಿ ವಿಲಕ್ಷಣ ಗಡಿಬಿಡಿ ಆರಂಭವಾಗಿತ್ತು. ಶಿಕ್ಷಕರು ಅಚ್ಚುಕಟ್ಟಾದ ವಸ್ತ್ರಗಳನ್ನು ಧರಿಸಿ ಬಹಳ ಮೊದಲೇ ಬಂದು ಓಡಾಡುತ ತಮ್ಮ ತಮ್ಮ ವರ್ಗಗಳಲ್ಲಿ ಬರಹದ ಪುಸ್ತಕಗಳನ್ನು ಒಳ್ಳೇ ಶಿಸ್ತಿನಿಂದ ಇಡತೊಡಗಿದ್ದರು. ಇಡಿಯ ವರುಷ ಹಾಳು ಸುರಿಯುವ ಗೋಡೆಗಳ ಮೇಲೆ ಈ ದಿನ ಅನೇಕ ಚಿತ್ರಗಳು ಶೋಭಿಸುತ್ತಿದ್ದವು. ಮೂಲೆ ಮೂಲೆಗಳಲ್ಲಿ ರಾಶಿರಾಶಿಯಾಗಿ ಬೀಳುತ್ತಿದ್ದ ಕಸದ ಗುಂಪು ಈ ದಿನ ಮಾಯವಾಗಿತ್ತು. ಶಾಲೆ ಮದುವೆ ಮನೆಯಂತೆ ಶೋಭಿಸು

ಇನ್ಸಪ್ಪೇಕ್ಟರರು ಬರುವ ಅರ್ಧ ತಾಸು ಮೊದಲು ಕನ್ನೆಯ ನ್ನೊಪ್ಪಿಸುವ ತಂದೆಯಂತೆ ವೇಷ ಭೂಷಣಗಳಿಂದಲಂಕೃತರಾಗಿ ಬಂದರು ಅವರು ಬಂದವರೇ ಎಲ್ಲ ವರ್ಗಗಳನ್ನೂ ಸಂದರ್ಶಿಸಿ ಬಂದರು. ಅಲ್ಲಿಯ ಶಿಸ್ತಿಗಾಗಿ ಅವರಲ್ಲಿ ಸಮಾಧಾನ ಮೂಡಿತು. ಮೇಲಧಿಕಾರಿಗಳ ಕಣ್ಣಲ್ಲಿ ಮಣ್ಣು ತೂರುವ ಎಲ್ಲ ಕೆಲಸಗಳೂ ಅಚ್ಚುಕಟ್ಟಾಗಿ ನಡೆದಿದ್ದವು. ಕೂಡಲೆ ಕಾರಕೂನರನ್ನು ಕರೆದು ಕೇಳಿದರು.

"ವಿಶ್ವಾಸ ಮಾಸ್ತರರು ಬಂದಿರುವರೆ?"

ವಿಶ್ವಾಸ ಮಾಸ್ತರರು ಆ ಹೊತ್ತಿನಲ್ಲಿ ತಡಕಲಿನ ಮೇಲ್ಭಾಗದಲ್ಲಿ ಬಹಳ ಅಂತರದ ಮೇಲೆ ಅಡ್ಡವಾಗಿ ಹಾಕಿದ ತಂತೀಪೂಲನ್ನು ದಾಟುತ್ತ ಮಧ್ಯದಲ್ಲಿ ಬಂದು ನಿಂತಿದ್ದರು. ಸುತ್ತಲೂ ಜಲರಾಶಿ. ಆ ಪೂಲಿನಿಂದ ಎದುರಿಗೆ ನೋಡುತ್ತಿರುವಂತೆ ಅಗಾಧವಾದ ಜಲ ಪ್ರಪಾತದತ್ತ ಭೋರ್ಗರೆಯುತ್ತ ಸಾಗಿದೆ. ದಾರಿಯಲ್ಲಿ ಬರುವ ಬಂಡೆಗಳನ್ನು ಹಾರಿ ನ[illegible]

ಮಾಲೆಗಳನ್ನು ರಚಿಸುತ್ತ ತನ್ನ ಶಕ್ತಿಗಾಗಿ ಆರ್ಭಟಿಸುವ ಜಲಧಾರೆ ಅವನಲ್ಲಿ ಅನಂತ ಶಕ್ತಿಯ ಅರಿವನ್ನುಂಟು ಮಾಡಿತು. ಆ ದಿವ್ಯ ಶಕ್ತಿಗೆ ಅವನು ಮಾರು ಹೋಗಿ ಪೂಲಿನ ಕಬ್ಬಿಣದ ಕಂಬವೊಂದಕ್ಕೊರಗಿ ನಿಂತ. ಹೀಗೆ ಕೆಲಸಮಯ ಕಳೆದ ಮೇಲೆ ಅವನು ತೀರ ಉಲ್ಲಸಿತನಾಗಿ ಸೇತುವೆ ದಾಟಿ ದಂಡೆಯ ಮೇಲೆ ಪಾಳುಬಿದ್ದ ದೇವಾಲಯಗಳನ್ನು ಬಳಸಿ ಎದುರಿಗೆ ಅಬ್ಬರದಿಂದ ಬೀಳುವ ತಡಸಲಿನ ಸಮ್ಮುಖದಲ್ಲಿ ನಿಂತು ಬೆರಗಾಗಿ ನೋಡಿದ. ಮನಸ್ಸು ತೃಪ್ತಿ ಹೊಂದಲಿಲ್ಲವೆಂದು ಆ ಜಲಪ್ರಪಾತದ ಅಂಚಿನಗುಂಟ ಕೆಳಗೆ ಸಾಗಿದ. ಅದರ ಮಧ್ಯದಲ್ಲಿ ತೀರ ಸನಿಹದಲ್ಲಿ ಚಾಚಿನಿಂತ ಕೋಡುಗಲ್ಲೊಂದರ ಮೇಲೆ ಮೈಚಾಚಿ ಕೆಳಗೆ ಬೀಳುವ ಆ ಅಪೂರ್ವ ಜಲನಿಧಿಯನ್ನು ಕಾಣುತ್ತ ತಾನೊಂದು ಈ ನೀರಿನ ಬಿಂದುವಾಗಿ ಬಾಳಬಾರದೇಕೆನ್ನಿಸಿತು. ನೋಡನೋಡುತ್ತ ಅವನಿಗೆ ವಿಸ್ಮೃರಣೆಯಾಗಹತ್ತಿತು. ಸುತ್ತಲಿನ ಜಗತ್ತು ಮಾಯವಾಯಿತು. ತಾನೆಲ್ಲಿರುವೆನೆಂಬುದನ್ನೂ ಅವನು ಮರೆತ. ಕೇವಲ ನೀರಿನ ಅಬ್ಬರವೊಂದು ಅವನಿಗೆ ಕೇಳಿ ಬರುತ್ತಿತ್ತು. ಆ ತುಷಾರಗಳ ಹೊಗೆ ಮಂಜು ಅವನ ಬಟ್ಟೆಗಳನ್ನು ನೆನೆಯಿಸಿತು. ಅವನಿಗೆ ಸಂಪೂರ್ಣ ತೃಪ್ತಿಯಾದರೂ ತಡಸಲಿನ ಕೆಳಭಾಗದಿಂದ ಈ ಸೌಂದರ್ಯವನ್ನು ಸವಿಯಬೇಕೆನ್ನಿಸಿತು. ಧಿಗ್ಗನೆದ್ದು ಆಚೆಯ ದಂಡೆಯನ್ನು ಸಾರಿ ಕೆಳಗೆ ಹೋಗುವ ಗವಿ ಮಾರ್ಗದಲ್ಲಿ ಸಾಗಿದ. ಮಾರ್ಗದಲ್ಲಿ ಒಂದು ಇರುಕಲಿನಲ್ಲಿ ಬಂಡೆಗಲ್ಲೊಂದು ಸಿಕ್ಕಿತ್ತು. ಅನೇಕ ವರುಷಗಳಿಂದ ಅದು ಆ ಅವಸ್ಥೆಯಲ್ಲಿ ಅಲ್ಲಿಯೇ ಇದ್ದರೂ ಕೆಳಗೆ ಸರಿದಿರಲಿಲ್ಲ. ಅಂತೆಯೆ ಆ ಕಲ್ಲು ಕೂಡ ಸೃಷ್ಟಿಯ ಸೆರೆಯಲ್ಲಿ ಸಿಕ್ಕ ಸೌಂದರ್ಯದ ಹನಿಯಾಗಿ ಬಾಳುತ್ತಿರುವಂತೆನ್ನಿಸಿತು. ಮುಂದೆ ಸಾಗಿದಾಗ ಅವನು ಕಂಡ ನೋಟ ಅದ್ಭುತ ರಮ್ಯವಾಗಿತ್ತು. ಸುತ್ತಲೂ ಬೆಳೆದು ನಿಂತ ಕಾನನದ ಗೋಡೆಗಳು, ಆ ಗೋಡೆಗಳನ್ನಾವರಿಸಿದ ಹಸಿರು ಸುರಿಯುವ ಕಂಟಿಗಳು, ಹಸಿರು ಪತ್ತಲದ ಹುಡುಗಿಯಂತೆ ಶೋಭಿಸುತ್ತಿದ್ದವು. ಮೇಲಿನಿಂದ ಬೀಳುವ ನೀರು ಅನೇಕ ಕಡೆಗೆ ಮುತ್ತುಗಳನ್ನುದುರಿಸುತ್ತ ಬೀಳುತ್ತಿತ್ತು. ಹಲವಾರು ಪಕ್ಷಿಗಳು ಆ ಅಬ್ಬರವನ್ನು ತಾಳಲಾರದೆ ಗಾಬರಿಯಾಗಿ ಅತ್ತಿತ್ತ ಹಾರಾ

ಧುತ್ತಿರುವ ದೃಶ್ಯ ಸುಂದರವಾಗಿತ್ತು. ಸೋಪಾನಗಳನ್ನಿಳಿದು ಬಹುದೂರ ವಾಗಿದ್ದರೂ ಸಮೀಪದಲ್ಲಿರುವಂತೆ ತಡಸಲು ಕಾಣುವ ಪರ್ವತಾಕಾರದ ಬಂಡೆಗಲ್ಲುಗಳತ್ತ ಸಾಗಿದ. ತುಷಾರಗಳ ಸಿಂಚನದಿಂದುಂಟಾದ ತಂಪು ಅವನಿಗೆ ಹಿತವಾಗಿ ತೋರಿತೇನೊ–ಸಾಗರಬಿದ್ದು, ಬಂಡೆಗಳನ್ನೇರಲು ಹವಣಿಸಿದ. 'ಹಾಂಸಿ'ಯಿಂದ ನುಣುಪಾದ ಕೆಳಗಿನ ಕಲ್ಲು ಜಾರಿತು. ದೊಪ್ಪನೆ ಬಿದ್ದು ಮತ್ತೆದ್ದು ನಗುತ್ತ ಆ ಬಂಡೆಗಲ್ಲಿನ ಹಾಸಿಗೆಯ ಮೇಲೆ ಸುಖವಾಗಿ ಕುಳಿತು ಬೆರಗುಗಣ್ಣುಗಳಿಂದ ಸಮ್ಮುಖದಲ್ಲಿ ಬೀಳುವ ಅನಂತ ಜಲರಾಶಿಯನ್ನು ಆನಂದ ತುಂದಿಲನಾಗಿ ನೋಡಿಯೇ ನೋಡಿದ. ನೀರು ನೆಗೆನೆಗೆದು ಬೀಳುತ್ತಿತ್ತು. ಒಂದೇ ಸಮನೆ ಅಬ್ಬರದಿಂದ ಭೂದೇವಿಯನ್ನು ಕೆಣಕಿ ಕುಪ್ಪಳಿಸುವಂತೆ ತೋರಿತು. ಅವನ ದೃಷ್ಟಿಗೆ ಆ ಜಲರಾಶಿಯೆಲ್ಲ ಘನೀಭೂತವಾಗಿ ಏಕಸೂತ್ರದಲ್ಲಿ ಆಕಾಶದಿಂದ ಇಳಿಬಿಟ್ಟ ಬಿಳಿಯ ಮೋಡದಂತೆ ಕಾಣಿಸಿತು. ಒಮ್ಮೊಮ್ಮೆ ಅದಾವುದೊ ಮಹಾ ಶಕ್ತಿಯುತವಾದ ಕೈ ಅರಳೆಯ ರಾಶಿಯನ್ನು ಹಿಂಜಿ ಹಿಂಜಿ ಒಗೆಯುತ್ತಿರುವಂತೆ ಭಾಸವಾಯಿತು. ಇನ್ನೊಮ್ಮೆ ಆ ಜಲವೆಲ್ಲ ಕೇವಿ ಬಣ್ಣದ ಉಂಡೆಯಾಗಿ ಬೀಳುವಂತೆ ಕಂಡರೆ ಮತ್ತೊಮ್ಮೆ ಸ್ಫಟಿಕದ ಶುಭ್ರ ಮಣಿಗಳ ಜಲ್ಲರಿಯಂತೆ ಕಾಣುವದು. ಅಷ್ಟು ತೀಕ್ಷ್ಣವಾದ ಬಿಳಿಯ ಬಣ್ಣವನ್ನು ಅವನ ಆಯುಷ್ಯದಲ್ಲಿ ಕಂಡಿರಲಿಲ್ಲ.

ಆ ಹೊತ್ತಿಗೆ ಸೂರ್ಯನ ಕಿರಣಗಳು ಮೋಡದ ಮರೆಯಿಂದ ನುಸುಳಿಕೊಂಡು ಈ ಪ್ರಪಾತದ ಮೇಲೆ ಬಿದ್ದವು. ನೀರ ಹನಿಗಳೊಡನೆ ನೇಸರನ ಕಿರಣಗಳು ಚೆಲ್ಲಾಟಕ್ಕಾರಂಭಿಸಿದವು. ಆ ಬಣ್ಣಗಳಿಗೆ ಎಣಿಕೆಯಿಲ್ಲದಾಯಿತು. ನೋಡುತ್ತಿರುವಂತೆ ಆ ತಡಸಲಿಗೆ ತೋರಣ ಕಟ್ಟಿದಂತೆ ಕಾಮನ ಬಿಲ್ಲು ಮೂಡಿತು. ಈ ಸೌಂದರ್ಯವನ್ನನುಭವಿಸುತ್ತಿರುವ ಅವನಿಗೆ ಭಾವ ಸಮಾಧಿ ಬಂದಿತು. ಅವನು ನೆಟ್ಟ ನೋಟದಲ್ಲಿ ಒಂದೇ ಸಮನೆ ನೋಡುತ್ತಿದ್ದ. ಅವನ ಕಣ್ಣು ನೋಡುತ್ತಲೇ ಇತ್ತು, ಜಲರಾಶಿ ಬೀಳುತ್ತಲೇ ಇತ್ತು.

ಅವನಿಗೆ ವೈಯರಿವು ಬಂದಾಗ ,ಸುತ್ತಲೂ ಜನರ ಕಲಕಲರವ

ಕೇಳಬರುತ್ತಿತ್ತು. ಯಾವದೋ ಕಾಲೇಜಿನ ವಿದ್ಯಾರ್ಥಿಗಳು ವಿಹಾರಕ್ಕಾಗಿ ಬಂದು ಗೊಂದಲ ನಡೆಯಿಸಿದ್ದರು. ಅನೇಕ ವಿದ್ಯಾರ್ಥಿಗಳ ಕೈಯಲ್ಲಿ ಕ್ಯಾಮರಾ ಶೋಭಿಸುತ್ತಿದ್ದವು. ಅವರಲ್ಲಿದ್ದ ಅನೇಕ ಯುವತಿಯರು ಸೌಂದರ್ಯದ ಹನಿಗಳಂತೆ ಅವನಿಗೆ ತೋರಿದರು.

ಬಂದ ವಿದ್ಯಾರ್ಥಿಗಳು ಫಲಹಾರಕ್ಕಾಗಿ ಗುಂಪು ಗೂಡಿದರು. ಒಬ್ಬಂಟಿಗನಾಗಿ ಕುಳಿತ ಈ ಮಹಾನುಭಾವನಿಗೂ ಔತಣ ಬಂದಿತು. ದಾಕ್ಷಿಣ್ಯವನ್ನು ಮೀರಲಾರದೆ ಅವನೂ ಒಪ್ಪಿದ. ಫಲಾಹಾರದ ಸಮಯದಲ್ಲಿ ಆ ಯುವತಿಗೆ ಎಲ್ಲರೂ ಒಂದು ಕವನ ಹಾಡಲು ಒತ್ತಾಯಿಸಿದರು. ಅವಳು ಒಲ್ಲೆನೆಂದು ಹೇಳುತ್ತಲೆ ಹಾಡು ಆರಂಭಿಸಿದಳು. ಅವಳು ಹಾಡಿದ ಕವನ ವಿಶ್ವಾಸನದೇ ಆಗಿತ್ತು. ಅವನು ಅಭಿಮಾನದಿಂದ ಅವಳನ್ನು ನೋಡಿದ. ಅವಳ ದನಿ ಮಧುರವಾಗಿತ್ತು. ಆ ಕವನದ ಭಾವ ಸ್ಫುರಣವಾಗುವ ಏರಿಳಿತಗಳನ್ನವನು ತುಂಬಾ ಮೆಚ್ಚಿದ. ಆದರೆ ಕೊನೆಯ ಚರಣವನ್ನು ಅವಳು ಅರ್ಥ ತಿಳಿಯದೆ ನುಡಿದದ್ದರಿಂದ ಅದು ಕೇಳುವವರಿಗೆ ಕ್ಲಿಷ್ಟವಾಗಿ ತೋರಿತೆಂದು ನಂಬಿದ ಅವನು ಆ ಚರಣವನ್ನೇ ಎಳೆದು ಹಾಡುವದಕ್ಕಾರಂಭಿಸಿದ. ಹಾಡು ಅಮೋಘವಾಗಿ ಹರಿಯಿತು. ಕೇಳುವ ವಿದ್ಯಾರ್ಥಿಗಳು ಮೋಹಿತರಾದರು. ಅವರಿಗೆ ಅವನೊಬ್ಬ ಅಸಾಮಾನ್ಯನಿರಬೇಕೆನ್ನಿಸಿತು. ಆ ಯುವತಿ ಪುಲಕಿತಳಾದಳು. ಹಾಡು ಮುಗಿದಾಗ ಅವನ ಕಣ್ಣುಗಳು ಒದ್ದೆಯಾಗಿದ್ದವು. ವಿದ್ಯಾರ್ಥಿಗಳೆಲ್ಲ ಒಂದೇ ಸವನೇ 'ಕವಿ ವಿಶ್ವಾಸ'ರು ಕೂಡ ಹೀಗೆ ಹಾಡಲಾರರು' ಎಂದಾಗ ಅವನು ಖೊಳ್ಳನೆ ನಕ್ಕ. ಹಾಡಿದ ಮಹಾನುಭಾವ ನಿಸರ್ಗ ಕವಿಯಾದ ವಿಶ್ವಾಸನೇ ಎಂದು ತಿಳಿದಾಗ ವಿದ್ಯಾರ್ಥಿಗಳಿಗಾದ ಆನಂದ ಅಷ್ಟಿಷ್ಟಲ್ಲ. ಕ್ಯಾಮರಾವಿದ್ದ ವಿದ್ಯಾರ್ಥಿಗಳು ಅದನ್ನು ಸಜ್ಜು ಮಾಡಿ 'ಕ್ಲಿಕ್' ಎನ್ನಿಸಿದರು. ತಮ್ಮ ಮಧ್ಯದಲ್ಲಿ ಅವನನ್ನು ನಿಲ್ಲಿಸಿಕೊಂಡು 'ಫೋಟೊ' ತೆಗೆಯಿಸಿಕೊಂಡರು. ಅನೇಕ ಉತ್ಸಾಹಿಗಳು ಅವನ ಹಸ್ತಾಕ್ಷರ ಪಡೆದುಕೊಂಡರು. ಈ ಆಕಸ್ಮಿಕ ಯೋಗಾಯೋಗದಿಂದ ಅವರಿಗೆ ಮೇರೆ ಮೀರಿದ ಆನಂದವಾಗಿತ್ತು. ವಿಶ್ವಾಸನಲ್ಲಿ ತನ್ನ ಬಗ್ಗೆ

ಅಭಿಮಾನವೇ ಮೂಡಿತು. ಮುಖ್ಯಾಧ್ಯಾಪಕರು ತಿಳಿದುಕೊಂಡಂತೆ ತಾನೊಬ್ಬ ಕೆಲಸಕ್ಕೆ ಬಾರದವನೆಂಬ ಮಾತನ್ನು ಅವನು ತಿರಸ್ಕರಿಸಿದ.

ಮನೆಗೆ ಬಂದಾಗ ರಾತ್ರಿ ಒಂಬತ್ತು ಗಂಟೆ ಮೀರಿ ಹೋಗಿತ್ತು. ತಾರಾ ಒಂದೇ ಸವನೆ ಚಡಪಡಿಸುತ್ತಿದ್ದಳು. ವಿಶ್ವಾಸ ಅವಳ ಪ್ರತಿ ಭಟನೆಗೆ ಅವಕಾಶ ಕೊಡದೆ ತಡಸಲಿನಲ್ಲಿ ನಡೆದ ಸಮಾಚಾರವನ್ನೆಲ್ಲ ಅಭಿಮಾನಪೂರ್ವಕವಾಗಿ ಹೇಳಿದ. ಕನ್ನಡ ನಾಡು ತನ್ನ ಹಾಡುಗಳನ್ನು ಮೆಚ್ಚಿರುವದರಿಂದ ತನ್ನ ಬಾಳು ಸಾರ್ಥಕವಾಯಿತೆಂದು ಬಿಂಬಿಸಿದ.

ತಾರಾ ಆ ದಿನದ ಅನೇಕ ಮಾತುಗಳನ್ನು ಹೇಳಬಯಸಿದವಳು ಗಂಡನ ಈ ಉತ್ಸಾಹದ ಹೊಳೆಯನ್ನು ಕಂಡು ಸುಮ್ಮನಾದಳು. ಅವನ ಮಾತು ಅವಳಿಗೂ ಬಹಳ ತೃಪ್ತಿಕರವಾಗಿ ಕಂಡಿತು. ಗಂಡನ ಕವನ ಶಕ್ತಿಯ ವಿಚಾರವಾಗಿ ಅವಳಲ್ಲೂ ಹೆಚ್ಚಿನ ಅಭಿಮಾನ ಮೂಡಿತು. ಆ ದಿನ ಮುಖ್ಯೋಪಾಧ್ಯಾಯರು ಅವನನ್ನು ಅನೇಕ ಬಾರಿ ಕರೆಯ ಕಳಿಸಿದ ವಿಚಾರವನ್ನು ಹೇಳಿ ಅವನ ಮನಸ್ಸನ್ನು ಕದಡಿಸುವದೇಕೆಂದು ಆ ಮಟ್ಟಿಗೆ ತಾರಾ ಸುಮ್ಮನಾದಳು.

ಮರುದಿನ ವಿಶ್ವಾಸ ಶಾಲೆಗೆ ಹೋದಾಗ ಅಲ್ಲಿಯ ವಾತಾವರಣವೇ ಬೇರೆಯಾಗಿತ್ತು. ಶಿಕ್ಷಕರ ಕೋಣೆಯಲ್ಲಿ ಅವನು ಕಾಲಿಟ್ಟಕೂಡಲೆ ಗುಜು ಗುಜು ಕೇಳಬಂತು. ಈ ಪಿಸು ಮಾತುಗಳು ತನ್ನನ್ನೇ ಕುರಿತಾಗಿರಬಹು ದೆಂದು ಊಹಿಸಿ ಅತ್ತ ಲಕ್ಷ ಹಾಕದೆ ನೇರವಾಗಿ ತನ್ನ ವರ್ಗಕ್ಕೆ ನಡೆದ ಅವನು. ಆದಿನ ಕೆಲಸ ಮುಗಿದ ಕೊನೆಯ ಗಂಟೆಯಾದ ಕೂಡಲೆ ಅವನು ಮನೆಗೆ ಹೊರಡುವದರಲ್ಲಿದ್ದಾಗ ಮುಖ್ಯಾಧ್ಯಾಪಕರು ಅವನಿಗೆ ಹೇಳಿ ಕಳಿಸಿದರು. ಅವನು ಅವರ ಕೋಣೆಗೆ ಹೋದಾಗ ಅವರ ಮುಖ ಗುಡುಗುಡದಿಂದ ತುಂಬಿತ್ತು. ಅವನನ್ನವರು ಕುಳ್ಳಿರ ಹೇಳಿ ಒಂದು 'ಟಾಯಿಪ' ಮಾಡಿದ ಕಾಗದವನ್ನು ಅವನ ಕೈಗಿತ್ತು ಓದಲು ಹೇಳಿದರು.

ಅವನ್ನದನೋದಿ ತುಟಿಕಚ್ಚಿಕೊಂಡ. "ಈ ಪೆಟ್ಟು ಬಹಳ ಅನಿರೀಕ್ಷಿತ ವಾಗಿ ಬಂದಿತು ಮಾಸ್ತರರೆ."

"ನನ್ನ ಮಾತು ನಡೆಯಲಿಲ್ಲ. ನಾನಾದರೂ ಏನು ಮಾಡಲಿ?"

"ಸಮಾಜಕ್ಕೆ ಸಾಹಿತ್ಯ ಬೇಕು. ಸಮಾಜಕ್ಕೆ ಕವಿ ಬೇಕು. ಆದರೆ ಸಮಾಜಕ್ಕೆ ಅವನ ಪೋಷಣೆ ಬೇಡ. ಎಂತಹ ಕೃತಜ್ಞತೆಯಿದು!" ಅವನು ಉದ್ವಿಗ್ನನಾಗಿ ನುಡಿದ.

"ಕೇವಲ ಕವಿಗಳ ಪೋಷಣೆಯನ್ನು ಮಾಡುವ ಔದಾರ್ಯ ಈ ಸಂಸ್ಥೆಯಲ್ಲಿಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾರೆ ವಿಶ್ವಾಸರಾವ್. ನಾನು ನಿಮಗಾಗಿ ಬಹಳ ಹೋರಾಡಿದೆ. ಯಶ ಸಿಗಲಿಲ್ಲ."

"ಇದು ಕೊನೆಯ ನಿರ್ಣಯವೆ?"

"ಇನ್ನೊಬ್ಬ ಶಿಕ್ಷಕರಿಗಾಗಿ ಕರೆಕೊಡ ಹೋಗಿದೆ."

ವಿಶ್ವಾಸ ಆ ಹಾಳೆಯನ್ನು ಮಡಚಿ ಕಿಸೆಗೆ ತುರುಕಿಕೊಂಡು ಅವ ರಿಗೆ ನಮಸ್ಕಾರ ಮಾಡುತ್ತ– "ನೀವು ನನಗಾಗಿ ಬಹಳ ತೊಂದರೆ ತೆಗೆದುಕೊಂಡಿರಿ. ಅದಕ್ಕಾಗಿ ನಿಮಗೆ ಬಹಳ ಕೃತಜ್ಞ. ಈ ಪ್ರೇಮ ಕೊನೆಯವರೆಗಿರಲಿ."

ದುಗುಡದ ಹೊರೆಯನ್ನು ಹೊತ್ತುಕೊಂಡು ವಿಶ್ವಾಸ ಮನೆಗೆ ಬಂದು ನಡೆದುದೆಲ್ಲವನ್ನೂ ತಾರಾನ ಮುಂದೆ ಹೇಳಿದ. ಈ ಊರ ಅನ್ನದ ಋಣ ತೀರಿತೆಂದು ಹೇಳಿ ಗಂಭೀರನಾದ. ಅವಳಿಗೆ ಈ ಸುದ್ದಿ ಸಿಡಿಲಿನಂತೆರಗಿತು. ಅವಳು ಮುಂಗಾಣದಾದಳು. ಆ ಕ್ಷಣ ಅವಳಿಗೆ ನಾಳಿನ ವಿಚಾರ ದೆವ್ವನಂತೆ ಬಂದು ನಿಂತಿತು. ಗಂಡನ ಅವ್ಯವಸ್ಥಿತ ವಾದ ಆಚರಣೆಗೆ ಕೊಟ್ಟ ಈ ಶಿಕ್ಷೆ ಬಹಳವಾಯಿತೆಂದೇ ಅವಳು ಭಾವಿಸಿದಳು. 'ಆದರೆ ಮುಂದೇನು?' ಈ ನೋವು ಗಂಡನಿಗೂ ಕಡಿಮೆ ಯಲ್ಲ. ಇಂತಹ ಹೊತ್ತಿನಲ್ಲಿ ಅವನ ತಪ್ಪನ್ನು ಬೆದಕಿ ಹೇಳುವದರಲ್ಲಿ

ಯಾವ ಅರ್ಥವೂ ಇಲ್ಲವೆಂದೂ, ತನ್ನ ಸಹಾನುಭೂತಿ ಅವಶ್ಯವೆಂದೂ ಮನಗಂಡ ಅವಳು ತುಟಿ ಬಿಚ್ಚಿ ಮಾತನಾಡಲಿಲ್ಲ.

"ಆಗಲಿ ಅದಕ್ಕೇನು? ಜಗತ್ತು ವಿಶಾಲವಾಗಿದೆ. ಜೀವನಕ್ಕೊಂದು ಮಾರ್ಗವನ್ನು ದೇವರು ಕಲ್ಪಿಸಿ ಕೊಡುತ್ತಾನೆ" ಎಂದು ಮಾತ್ರ ಹೇಳಿದಳು. ಅವಳ ದನಿ ನಡುಗುತ್ತಿತ್ತು. ಹೆಂಡತಿಯ ಮನಸ್ಸಿನಲ್ಲಿ ಉಂಟಾದ ನೋವನ್ನವನೂ ಅನುಭವಿಸಿದ. 'ಆದರೆ ತನಗೆ ಈ ವರುಷದ ಮಧ್ಯದಲ್ಲಿ ನೌಕರಿ, ನೌಕರಿ ಕೊಡುವವರಾರು? ಕೂಡಲೆ ನೌಕರಿ ಸಿಗದಿದ್ದರೆ ಕುಟುಂಬ ರಕ್ಷಣೆ ಆಗಬೇಕೆಂತು? ಅಣ್ಣನ ಮನೆಗೆ ಮತ್ತೆ ಹೋಗುವದೆ? ಸಾಧ್ಯವಿಲ್ಲ ಅವನ ಸಂಸಾರದ ಹೊರೆಯೇ ಅವನಿಗೆ ಸಾಕಾದಷ್ಟಿದೆ. ಮೇಲಾಗಿ ಹೊರಬಿದ್ದ ತಾನು ಮತ್ತೆ ಅನಾಮಧೇಯನಂತೆ ಹೋಗಿ ಅತ್ತಿಗೆಯ ಸಿಡುಕಿಗೆ ಗುರಿಯಾಗಬೇಕೆ? ಈ ಮಾತಿಗೆ ತಾರಾ ಎಂದಿಗೂ ಒಪ್ಪಲಾರಳು. ಹಾಗಾದರೆ ಮಾಡಬೇಕೇನು?' ಆ ರಾತ್ರಿ ಪತಿ-ಪತ್ನಿಯರು ಮೌನದಲ್ಲಿಯೆ ಕಳೆದರು. ಹೃದಯದ ಕೊರತೆಯನ್ನು ಬಿಚ್ಚಿ ತೋರಿಸುವ ಸಾಹಸವನ್ನು ಇಬ್ಬರೂ ಮಾಡಲಿಲ್ಲ.

ಮೂರು ತಿಂಗಳು ಕಳೆದರೂ ವಿಶ್ವಾಸನಿಗೆ ಯಾವ ನೌಕರಿಯೂ ದೊರೆಯಲಿಲ್ಲ. ಹಿಂದೊಮ್ಮೆ ಕಿರಣನ ಅನಾರೋಗ್ಯದ ಪರಿಹಾರದ ವೆಚ್ಚಕ್ಕಾಗಿ ತಾರಾ ಸಂತೋಷದಿಂದ ಚಿನ್ನದ ಬಳೆ ಬಿಚ್ಚಿಕೊಟ್ಟಂತೆ ಈಗ ಉದರ ನಿರ್ವಹಣೆಗಾಗಿ ಇನ್ನೊಂದನ್ನು ಕೊಟ್ಟಾಗ ಅವಳ ಕರುಳು ಕಿತ್ತುಬರುವಂತಾಯಿತು.

ದಿನಗಳು ಕಳೆಯುತ್ತಿರುವಂತೆ ಮನೆಯಲ್ಲಿ ದಾರಿದ್ರ್ಯ ತಾಂಡವ ಹಾಡಿತು. ಫಲಹಾರ ನಿಂತಿತು. ಕೇವಲ ಎರಡು ಊಟಗಳನ್ನು ಸಾಗಿಸುತ್ತ ಸಾಗಿದ ಅವನ ಕುಟುಂಬ, ನೌಕರಿ ಸಿಗದಿದ್ದರೆ ಒಪ್ಪತ್ತಿಗೂ ದುರ್ಲಭವಾಗುವ ಚಿನ್ಹ ತೋರಿತು. ತಾರಾ ಹೌಹಾರಿದಳು. "ಮುಂದೆ ಹೇಗೆ?" ಎಂಬ ಸಮಸ್ಯೆ ಧುತ್ತೆಂದು ಬಾಯ್ದೆರೆದು ನಿಂತಿತು. ಅವಳು ನಿರ್ವಿಣ್ಣಳಾದಳು. ವಿಶ್ವಾಸನ ಕಾವ್ಯವಾಹಿನಿ ಬತ್ತತೊಡಗಿತು. ಜೀವನ ಕಣ್ಣು ತೆರೆಯಿಸತೊಡಗಿತು.

೫

ಚಿನ್ನದ ಬಳೆ ಮಾರಿ ತಂದ ಹಣದಿಂದ ಉಪಜೀವನ ಎಷ್ಟು ದಿನ ಸಾಗೀತು? ದಿನ ಕಳೆಯುತ್ತಿರುವಂತೆ ದಾರಿದ್ರ್ಯ ಇನ್ನೂ ಹೆಚ್ಚುತ್ತ ಹಾಯಾಗಿ ಬಾಳುತ್ತಿದ್ದ ಸಂಸಾರದ ನೆಮ್ಮದಿ ತಪ್ಪಿ ಅವನ ಮನಸ್ಸು ಕದಡಿ ಕಂಗೆಟ್ಟಿತು. ಗೋವಿನಪುರದ ಸುತ್ತಲೂ ಹಬ್ಬಿದ ಸೃಷ್ಟಿ ಸೌಂದರ್ಯದ ಸನ್ನಿಧಾನ ವಿಶ್ವಾಸನಿಗೊಮ್ಮೆ ರಸ ನಿಮಿಷವಾಗಿತ್ತು. ಆ ನೆಲ, ಆ ಹೊಲ, ಆ ಜಲ, ಆ ಎತ್ತರವಾದ ಗುಡ್ಡಗಳು, ಆ ಹಸಿರು ಮುರಿಯುವ ವನಶ್ರೀ–ಎಲ್ಲವೂ ಇದ್ದ ಹಾಗೇ ಇದ್ದವು. ಆದರೆ ಅವನ ಪಾಲಿಗೆ ಮಾತ್ರ ಈಗ ನಿರ್ಜೀವವಾಗಿದ್ದವು. ಅವನ ಯೋಚನೆ ತಲೆಯನ್ನೇ ತಿನ್ನತೊಡಗಿತ್ತು. ಅವನ ಕವನಗಳ ಹಾದಿ ಬೇರೆ ಹಾದಿ ಹುಡುಕಿತ್ತು. ಜೀವನದ ವಿಕಾರ ಸ್ವರೂಪವನ್ನು ಚಿತ್ರಿಸುವ ಕವನಗಳೀಗ ಏಕ ಪ್ರಕಾರವಾಗಿ ಹೊಮ್ಮಿ ಬರುತ್ತಿದ್ದವು.

ಪತಿಯ ಈ ರೀತಿಯನ್ನು ಕಂಡ ತಾರಾನಿಗೆ ತನ್ನ ಬಡತನದ ಅರಿವಿಗಿಂತಲೂ ಗಂಡನ ಕಾವ್ಯ ಜೀವನ ಬತ್ತಿ ಹೋಗುವ ಸಂದರ್ಭ ಅಸಹನೀಯವಾಗಿ ತೋರಿತು. ಮಕ್ಕಳ ಹರಿದ ಅರಿವೆಗಳಾಗಲಿ, ಅವರ ದರಿದ್ರ ಊಟದ ಸಂಕಟವಾಗಲಿ, ಅವಳ ಸಹನೆಯನ್ನು ಕೆಣಕುತ್ತಿದ್ದವು. ಆದರೆ ಇವೆಲ್ಲವುಗಳನ್ನು ಮೀರಿ ಪತಿಯ ಜೀವನದಲ್ಲಿ ಬಂದ ಅವಾಂತರ ಅವಳ ಕರುಳನ್ನಿರಿಯುತ್ತಿತ್ತು. ದಾರಿದ್ರ್ಯ ಜೀವನಕ್ಕೆ ಅವಳು ಹೆದರದಿದ್ದರೂ ಭವಿಷ್ಯದ ಮಾತು ಅವಳ ನಿದ್ರೆಯನ್ನು ಕಾಡುತ್ತಿತ್ತು. ತನ್ನಿಂದ ಸಾಧ್ಯವಾಗಬಹುದಾದ ಎಲ್ಲ ಸಹಾಯವನ್ನು ನೀಡಲೂ ಅವಳು ಟೊಂಕ ಕಟ್ಟಿದಳು. ಅನೇಕ ದಿನಗಳಿಂದ ಧೂಳು ಮುಸುಕಿದ ಹೊಲಿಯುವ ಯಂತ್ರವನ್ನು ಹೊರಗೆ ತೆಗೆದು ಅದರಿಂದಲಾದರೂ ಜೀವನಕ್ಕೊಂದು ಮಾರ್ಗ ಕಲ್ಪಿಸಿ ಅಲ್ಪವಾದರೂ ಸದ್ಯದ ಪರಿಸ್ಥಿತಿಯಲ್ಲಿ ಹೆಚ್ಚಿನದೆನಿಸುವ ಹಣ ಗಳಿಸುವ ನಿರ್ಧಾರಕ್ಕೆ ಬಂದಳು. ಆದರೆ ಈ ಹೊಲಿಗೆಯಿಂದ ಅವಳ ಸಂಸಾರದ ಸಮಗ್ರ ಜೀವನ ಸಾಗಬೇಕೆಂತು? ಪತಿ ಈ ದಿನಗಳಲ್ಲಿ ಅತ್ತಲಿತ್ತ ಪ್ರಯತ್ನ ಮಾಡಿ ನಿರಾಸೆ ಹೊಂದಿದ ಸಂಗತಿ ಅವಳಿಗೆ

ಚೆನ್ನಾಗಿ ಗೊತ್ತಿತ್ತು. ಈ ನಿರಾಸೆ ಹೀಗೆಯೇ ಸಾಗಿದರೆ ಅವನ ಪರಿಸ್ಥಿತಿ ಬಹಳ ವಿಕೋಪಕ್ಕೆ ಹೋಗಬಹುದೆಂದು ಅವಳು ಗ್ರಹಿಸಿದ್ದಳು.

ಆ ದಿನ ಊರ ಸನಿಯದಲ್ಲೇ ಇರುವ 'ಪತ್ರೀ ಬನ'ದಲ್ಲಿ ಮನ ಸೋಕ್ತನಾಗಿ ವಿಹರಿಸಿದ ವಿಶ್ವಾಸ ದಣುವಿನಿಂದ ಒಂದು ಬಂಡೆಗಲ್ಲಿನ ಮೇಲೆ ಕುಳಿತಿದ್ದ. ಅವನ ಕಾಲ ಬುಡದಲ್ಲಿ 'ಘಟಪ್ರಭೆ' ಭೋರ್ಗರೆ ಯುತ್ತ ಹರಿಯುತ್ತಿದ್ದಳು. ಜನರು ನಾವೆಯಲ್ಲಿ ಕುಳಿತು ಆ ದಂಡೆಯಿಂದ ಈ ದಂಡೆಗೆ, ಈ ದಂಡೆಯಿಂದ ಆ ದಂಡೆಗೆ ಪ್ರವಾಸ ಮಾಡುತ್ತಿದ್ದರು. ಅದು ಸಂತೆಯ ದಿನ. ಬೆಣ್ಣೆ ಮಾರುವವರು, ಕಾಯಿಪಲ್ಲೆ ಮಾರುವ ವರು, ಮೀನು ಮಾರುವವರು-ಎಲ್ಲರೂ ತಮ್ಮ ಜೀವನಕ್ಕಾಗಿ ಹೋರಾ ಡುತ್ತಿದ್ದರು. ಈ ಜನಗಳನ್ನು ನೋಡುತ್ತ ಅವನು 'ಎಲ್ಲರೂ ಜೀವನ ಕ್ಕಾಗಿ ಹೋರಾಡುತ್ತಿದ್ದಾರೆ. ನಾನೊಬ್ಬ ಮಾತ್ರ ಆಲಸಿಗನಾಗಿದ್ದೇನೆ. ಮನೆಯಲ್ಲಿ ಮಕ್ಕಳು ಉಪವಾಸದಿಂದ ಸಾಯುತ್ತಿವೆ. ಆದರೂ ನಾನು ಕವನಗಳನ್ನು ಗೀಚುತ್ತೇನೆ. ಈ ಕವನದಿಂದ ನನ್ನ ಮಕ್ಕಳ ಹೊಟ್ಟೆ ತುಂಬಬಹುದೇ ನನ್ನ ಬರಹದಿಂದ ನನ್ನ ಸಂಸಾರ ರಥ ಮುಂದೆ ಸಾಗ ಬಹುದೆ? ಯಾಕೆ ಸಾಗಬಾರದು? ಸಮಾಜಕ್ಕೆ ಆಹಾರವೂ ಬೇಕು. ಸಾಹಿತ್ಯವೂ ಬೇಕು. ಆಹಾರಕ್ಕಾಗಿ ಪ್ರತಿದಿನವೂ ದುಡಿಯುತ್ತಿರುವ ಸಮಾಜ ಸಾಹಿತ್ಯವನ್ನು ಪೋಷಿಸಲಾರದೆ? ನಾನು ಪ್ರಯತ್ನ ಮಾಡಿಲ್ಲ. ನನ್ನ ಲೇಖನದಲ್ಲಿ ಶಕ್ತಿಯಿದೆ. ನನ್ನ ಕವಿತ್ವವನ್ನು ನಾಡು ಮೆಚ್ಚಿದೆ. ಅದು ನನ್ನ ಜೀವನಕ್ಕೆ ಮಾರ್ಗದರ್ಶನ ಮಾಡುತ್ತದೆ.' ಹೀಗೆ ವಿಚಾ ರಿಸಿದ ಅವನು ಯಾವದೋ ನಿರ್ಧಾರದಿಂದ ಮನೆಯಕಡೆಗೆ ಸಾಗಿದ. ಅವನಲ್ಲಿ ಅದಾವುದೋ ಆಶಾಂಕುರ ತಲೆದೋರಿ ಉತ್ಸಾಹ ತುಂಬಿತ್ತು.

ಅವನು ಮನೆಗೆ ಹೋದಾಗ ತಾರಾ ಹೊಲಿಗೆ ಯಂತ್ರದ ಮೇಲೆ ಕುಳಿತು ಕೆಲಸ ಮಾಡುತ್ತಿದ್ದಳು. ಸುತ್ತಲೂ ಹೊಸ ಅರಿವೆಯ ತುಣು ಕುಗಳು ಬಿದ್ದಿದ್ದವು. ಉಷಾ ಹರಿದ ಅರಿವೆಗಳೊಡನೆ ಆಟವಾಡುತ್ತಿದ್ದಳು. ನನ್ನ ಹೆಂಡತಿಯಾದವಳು ಹೊಲಿಗೆಯ ಕೂಲಿ ಮಾಡುವದನ್ನು ನೋಡಿ ಅವನಿಗೆ ತುಂಬಾ ಸಂಕಟವಾಯಿತು. ಅಭಿಮಾನಕ್ಕೆ ಬರೆ ಎಳೆದಂತಾಗಿ

ಕೋಪವೂ ಬಂದಿತು. ಅವನನ್ನೇನೂ ವಿಚಾರಿಸದೆ ಅವಳು ಈ ಕಾರ್ಯ ಕೈಕೊಂಡುದ್ದೇ ಅವನ ಕೋಪಕ್ಕೆ ಕಾರಣವಾಗಿತ್ತು. ದುಗುಡದಿಂದ ದನಿಯನ್ನೇರಿಸುತ್ತ ಅವನು– "ತಾರಾ, ಜಗತ್ತು ನನ್ನನ್ನು ಅವಮಾನ ಗೊಳಿಸುತ್ತದೆ ಎಂದು ನೀನೂ ಅವಮಾನಗೊಳಿಸಬೇಕೆ?"

ತಾರಾ ಕೆಲಸವನ್ನು ನಿಲ್ಲಿಸಿ ಪತಿಯ ಕದಡಿದ ಮುಖವನ್ನು ನೋಡಿ ಮಂದಸ್ಮಿತಳಾಗಿ ಹೇಳಿದಳು– "ನಿಮ್ಮ ಕಲ್ಪನೆಯೇ ವಿಚಿತ್ರವಾಗಿದೆ. ನಮ್ಮ ಸಂಸಾರಕ್ಕಾಗಿ ನಾವು ದುಡಿಯುವದರಲ್ಲಿ ಅವಮಾನದ ಮಾತೆ ಲ್ಲಿಯದೊ ನನಗೆ ತಿಳಿಯದು."

"ನೀನು ಪದವೀಧರನ ಹೆಂಡತಿ ತಾರಾ. ನೀನು ದುಡಿದರೆ ನನ್ನ ಮುಖಕ್ಕೆ ಮಂಗಳಾರತಿಯಾಗುತ್ತದೆ. ಸಮಾಜ ಟೀಕೆ ಮಾಡುತ್ತದೆ. ನನ್ನನ್ನು ಅಪಾರ್ಥ ಮಾಡಿಕೊಂಡು ನನ್ನ ಯೋಗ್ಯತೆ ನಿರ್ಣಯ ಮಾಡು ತ್ತದೆ. ಯೋಚಿಸು ತಾರಾ."

"ಸಮಾಜ ನಿಮ್ಮ ಯೋಗ್ಯತೆ ತಿಳಿದಿದ್ದರೆ ಈ ಹಾಡು ಬರುತ್ತಿರ ಲಿಲ್ಲ. ನಾವು ಸಮಾಜಕ್ಕಾಗಿ ಜೀವಿಸುವದಿಲ್ಲ. ನನ್ನ ಮಕ್ಕಳು ಉಪ ವಾಸ ಸಾಯುತ್ತಿರುವಾಗ ಅದು ಕಣ್ತೆರೆದು ನೋಡುವದಿಲ್ಲ. ನಿಮಗೆ ಆಸರೆ ಸಿಗುವವರೆಗೆ ನಾನು ಇದನ್ನೇ ಮುಂದುವರಿಸುತ್ತೇನೆ." ಕಾರಾನ ಮಾತಿನಲ್ಲಿ ತುಂಬಿ ನಿಂತ ಸತ್ಯವನ್ನು ಅಲ್ಲಗಳೆಯುವ ಧೈರ್ಯ ಅವನಿ ಗಿರಲಿಲ್ಲ. ಜೀವನದ ಸತ್ಯವನ್ನು ಅವನು ಕಡೆಗಣಿಸುವದು ಸಾಧ್ಯವಿರಲಿಲ್ಲ.

"ನಿನ್ನ ಮಾತೇ ನಿಜ ತಾರಾ. ಆದರೆ ನನಗೂ ನನ್ನ ಭವಿತವ್ಯದಲ್ಲಿ ವಿಶ್ವಾಸವಿದೆ. ನನ್ನ ಸಾಹಿತ್ಯ ಶಕ್ತಿ ನನಗೊಂದು ದಾರಿ ತೋರಿಸಬ ಹುದು. ಈ ದಿನ ಧಾರಾಪುರಕ್ಕೆ ಹೋಗಿ ಆ ಮಾರ್ಗವನ್ನು ನಿರ್ಧರಿಸಿ ಬರುವೆ."

"ಯಾರು ಬೇಡವೆನ್ನುತ್ತಾರೆ? ಆದರೆ ಒಂದು ಮಾತು. ನೌಕರಿ ಯನ್ನು ಹಿಡಿಯುವಾಗ ಅದು ಲಕ್ಷದಲ್ಲಿರಲಿ. ನಿಯಮಿತ ವೇಳೆಗೆ ಬಂದು ನಿಯಮಿತ ವೇಳೆಗೆ ಹೋಗುವದು ನಿಮ್ಮಿಂದ ಸಾಧ್ಯವಿಲ್ಲ. ಆದುದರಿಂದ .."

ತನ್ನ ನೌಕರಿ ಹೋಗಲು ಅನಿಯಮಿತತನವೇ ಕಾರಣವೆಂದ್ಯ ಅವನಿಗೆ ಗೊತ್ತಿತ್ತು. ಅವನು ಅದಕ್ಕಾಗಿಯೇ ಮುಗುಳು ನಗೆಯಿಂದ- "ನಿಯಮವನ್ನು ಪಾಲಿಸುವದು, ಹೊತ್ತಿಗೆ ಸರಿಯಾಗಿ ಕೆಲಸ ಮಾಡುವದು ಮಂದ ಮತಿಗಳ ಲಕ್ಷಣ ತಾರಾ."

"ಅನಿಯಮಿತತನ ಮಾತ್ರ ಪ್ರತಿಭಾವಂತರ ಲಕ್ಷಣವೆ?"

"ನಾನು ಹೇಳಬೇಕಾದುದನ್ನೇ ನೀನು ಹೇಳಿದಿ." ಇಬ್ಬರೂ ಮನಸೋಕ್ತವಾಗಿ ನಕ್ಕರು.

ಅದೇ ದಿನ ವಿಶ್ವಾಸ ಒಳ್ಳೇ ಉತ್ಸಾಹದಿಂದ ಧಾರಾಪುರಕ್ಕೆ ಹೊರಟ. ಅವನಂತರಂಗದಲ್ಲಿ ವಿಶ್ವಾಸ ಮೂಡಿತ್ತು. ತನ್ನಂತಹ ಸಾಹಿತಿಗೆ ಯಾವ ಸಂಪಾದಕನಾದರೂ ಆಶ್ರಯ ಕೊಡುವನೆಂದು ಅವನು ಭಾವಿಸಿದ ಕೇವಲ ಕಲ್ಪನಾ ಪ್ರಪಂಚದಲ್ಲಿ ಸುತ್ತಿ ಸುಳಿಯುತ್ತಿರುವ ಅವನ ಈ ವಿಚಾರ ಅಸಾಧ್ಯವಾದುದೇನಲ್ಲವಾದರೂ ಜಗತ್ತಿನ ಸತ್ಯತೆಯಿಂದ ಅದು ಬಹು ದೂರವಾಗಿತ್ತು. ಜೀವನ ಕಾವ್ಯಮಯವಾಗಿರುವದೆಂಬ ಮಾತು ಕಾವ್ಯಸೃಷ್ಟಿಯಲ್ಲಿ ಕಂಡು ಬರುವ ಸತ್ಯವೆಂಬುದನ್ನು ಅರಿಯುವಷ್ಟು ಇನ್ನೂ ಅವನಿಗೆ ಜೀವನದ ಸಂಪರ್ಕ ಉಂಟಾಗಿದಲಿಲ್ಲ. ವನ ನಿಷ್ಠುರ ಸತ್ಯವನ್ನು ಕಡೆಗೆಣಿಸಿ ಬಾಳುವದು ಯಾವ ಕವಿಗೂ ಸಾಧ್ಯವಿಲ್ಲವೆಂದು ಅವನು ತನ್ನ ಅಲ್ಪ ಅನುಭವದಿಂದ ತಿಳಿಯದಾದ. ಅವನಿಗೆ ಕಾವ್ಯವೇ ಜೀವನವಾಗಿತ್ತು. ಎಂತಲೇ ಜೀವನವೂ ಕಾವ್ಯವೆಂದು ತಿಳಿದು ಕಲ್ಪನಾ ಮೂರ್ತಿಯಾಗಿ ಕುಣಿಯುತ್ತಿದ್ದ. ತನ್ನ ಜೀವನದ ಭವ್ಯ ಭವಿಷತ್ತಿನ ಹೆದ್ದಾರಿಯಾದ ಸಾಹಿತ್ಯ ಸೇವೆಯಲ್ಲಿಯೇ ಜೀವನದ ಮಾರ್ಗವನ್ನು ಹುಡುಕಲು ಹೊರಟ ಅವನಿಗೆ ಆ ಮಾರ್ಗ ತೀರ ಹತ್ತಿರವಾಗಿದೆ ಎಂಬ ವಿಶ್ವಾಸ ಅವನಲ್ಲಿ ತುಂಬಿತ್ತು. ಆ ಉತ್ಸಾಹವೇ ಅವನನ್ನು ಧಾರಾ ಪುರದ ಸಂಪಾದಕರಲ್ಲಿ ತಂದು ನಿಲ್ಲಿಸಿತು.

ಮದುವೆಯಾದಂದಿನಿಂದ ಒಂದು ದಿನವೂ ಪತಿಯನ್ನಗಲದ ತಾರ ನಿಗೆ ಅವನು ಹೋದ ಎರಡು ದಿನಗಳಲ್ಲಿಯೆ ಮನೆ ಭಣಭಣ ಸುರಿಯಿತು

ಮನಸ್ಸು ಕೆಲಸದಲ್ಲಿ ನಿಲ್ಲದಾಯಿತು. ಸ್ವಾತಂತ್ರ್ಯ ಜೀವನದ ಸವಿ ಸುಖದಲ್ಲಿ ಅನೇಕ ಕನಸುಗಳನ್ನು ಕಾಣುತ್ತಿದ್ದ ಅವಳಿಗೆ ತಾನಿಷ್ಟು ಬೇಗನೆ ಈ ದುರವಸ್ಥೆಗೆ ಕಾರಣವಾಗಬಹುದೆಂದು ಕನಸು ಮನಸ್ಸಿನಲ್ಲಿಯೂ ಅನ್ನಿಸಿರಲಿಲ್ಲ. ಅವಳಿಗೆ ಸಂಪತ್ತು ಬೇಕಿರಲಿಲ್ಲ; ಜೀವನದಲ್ಲಿ ನೆಮ್ಮದಿ ಬೇಕಾಗಿತ್ತು. ಗಂಡನ ಕಾವ್ಯ ಜೀವನಕ್ಕೆ ಪೋಷಕವಾಗುವಂತಹ ಬಾಳನ್ನವಳು ಬಯಸಿದ್ದಳು. ಅದು ಶಿಕ್ಷಕ ವೃತ್ತಿಯಲ್ಲಿ ಸಾಧ್ಯವೆಂದೂ ತೋರಿತ್ತು. ಆದರೆ ಮಾತು ಮಿಂಚಿ ಹೋಯಿತು. ಗಂಡನ ಅನಿಯಮಿತತನಕ್ಕೆ ಯೋಗ್ಯ ಎಚ್ಚರಿಕೆಯನ್ನೂ ಕೊಡದೆ ಅವನನ್ನು ಸಂಸ್ಥೆಯಿಂದ ಹೊರದೂಡಿದರು. '..ಈಗ ಸಾಹಿತ್ಯದ ಮಾತು ದೂರ ಉಳಿದು ಬದುಕೇ ಒಂದು ಹೊರೆಯಾಗಿದೆ. ಧಾರಾಪುರದಲ್ಲಿ ಅವನಿಗೊಂದು ನೌಕರಿ ಸಿಕ್ಕರೆ? ಸಿಗಬಹುದೆ?....' ಹೀಗೆ ವಿಚಾರಿಸುತ್ತ ತಾರಾ ದೀರ್ಘವಾದ ನಿಟ್ಟುಸಿರನ್ನು ತೇಲಿಬಿಟ್ಟು ಸುಮ್ಮನೆ ಎದ್ದು ಹೋಗಿ ಹೊಲಿಗೆ ಯಂತ್ರದ ಧೂಳು ಜಾಡಿಸಿದಳು. ಅವಳಿಗೆ ಆ ದಿನ ಹೊಲಿಗೆಯ ಕೆಲಸವೂ ಭಾರವೆನ್ನಿಸಿ ಮನಸ್ಸು ಜಡವಾಯಿತು.

"ಚಿಗಪ್ಪ ಎಂದ ಬರಕಾನವ್ವ" ಎನ್ನುತ್ತ ಕಿರಣ ಓಡಿಬಂದ.

"ನಾಳೆ ಬರತಾರ ಬಾಳ. ನಿನಗ ಫೇಡೆ ತರತಾರ. ಉಷಾನಿಗೆ ಹೂ ತರತಾರ" ಉದ್ವಿಗ್ನಳಾಗಿಯೇ ಹೇಳಿದಳು. "ಫೇಡೆ ತರತಾನ, ಹೂ ತರತಾನ" ಅನ್ನುತ್ತ ಕಿರಣ ಚಪ್ಪಾಳೆಯಿಕ್ಕುತ್ತ ಹೊರಗೆ ಓಡಿದ. ತಾರಾ ಆ ಹುಡುಗರ ಉತ್ಸಾಹ ನೋಡಿ ಕಣ್ಣೀರುದುಂಬಿದಳು. ಆ ಕಣ್ಣೀರು ಆ ಬಾಲಕನ ಭವಿಷತ್ತನ್ನು ಕುರಿತು :ಬಂದ ಉದ್ವೇಗದ ಪ್ರತೀಕಗಳಾಗಿದ್ದವು. ತಾಯ್ತನದ ಪವಿತ್ರ ಹೊಣೆಗಾರಿಕೆಯನ್ನರಿತ ದಿವ್ಯ ಬಿಂದುಗಳಾಗಿದ್ದವು. ಆದರವಳಿಗೆ ಸಧ್ಯ ಹೆಚ್ಚು ವಿಚಾರ ಮಾಡುವ ಅವಕಾಶವಿರಲಿಲ್ಲ. ಕೆಲಸದ ಒತ್ತಡ ಅವಳನ್ನೆಚ್ಚರಿಸಿತು. ಅವಳು ಕೂಡಲೇ ಹೊಲಿಗೆ ಯಂತ್ರದ ಮೇಲೆ ಕುಳಿತಳು. ಕುಳಿತಳೇನೊ ಸರಿ..ಕಾಲು ತುಳಿಯಲಿಲ್ಲ. ಕೈ ಆಡಲಿಲ್ಲ. ಅವಳ ಕಿವಿಯೆಲ್ಲ ಪತಿಯ ಕವನಗಳ ದಿವ್ಯ ದನಿ ಗುಣುಗಾಡಿತು. ಆ ಭಾವಝರಿಯಲ್ಲವಳು ಕೊಚ್ಚಿ ಹೋದಳು.

"ನಾನು ಈ ದಿವ್ಯದನಿಯನ್ನು ಕಳೆದುಕೊಂಡು ಬಾಳಬಹುದೆ? ಈ ದನಿ ಬಿದ್ದು ಹೋಗದಂತೆ ನಾನು ದಕ್ಷಳಾಗಬೇಕು. ನನ್ನ ಜೀವನವನ್ನು ಪಣಕ್ಕೆ ಹಚ್ಚಿಯಾದರೂ ಈ ರಸ ಬುಗ್ಗೆಯನ್ನು ಕಾಪಾಡಬೇಕು...."

"ಝಂಪರಾದೂವೇನ್ರಿ ತಾರಾಬಾಯರ" ಎನ್ನುವ ನೆರೆಮನೆಯವಳ ಕರ್ಕಶ ಕೂಗು ತಾರಾನನ್ನು ಬಡಿದೆಬ್ಬಿಸಿತು.

"ಬರ್ರಿ. ಅದೇ ಕೆಲಸಕ್ಕೆ ಹತ್ತೀನಿ" ಎಂದು ತಾರಾ ಗಡಬಡಿಸಿದಳು.

"ಇದೇನ ಛಂದ್ರೆ ನಮ್ಮವ್ವ. ಇಂದ ಬೆಳಿಗ್ಗೆ ಕೊಡತೀನಂತ ಹೇಳಿದ್ರಿ. ಹಿಂಗ ಮಾಡಿದ್ರ ಹೆಂಗ್ರೆವಾ?"

"ನಾಳೆ ನಸುಕಿನಲ್ಲಿ ತಪ್ಪದೆ ಕೊಡತೀನಿ. ನೋಡೆರೆ ನೋಡ್ರಿ."

"ಎಷ್ಟ ನೋಡೂದ ಸುಟ್ಟಬರ್ಲಿ. ನಿಮಗ ತಿಳಿಬೇಕರೆವಾ" ಎನ್ನುತ್ತ ನೆರೆಮನೆಯವಳು ಹೊರಟು ಹೋದಳು. ತಾರಾನಿಗೆ ಬಹಳ ಪಶ್ಚಾತ್ತಾಪವಾಯಿತು. ಅವಳು ಕೂಡಲೆ ಕೆಲಸಕ್ಕೆ ಸನ್ನದ್ಧಳಾದಳು. ಆ ವೇಳೆಗೆ ಕಿರಣ ಚೀರುತ್ತ ಒಳಗೆ ಬಂದ. ಅವನ ಹಣೆಯೊಡೆದು ರಕ್ತ ಸೋರುತ್ತಿತ್ತು. ತಾರಾ ಚಂಗನೆ ನೆಗೆದು ಅವನ ಗಾಯ ತೊಳೆದು ಪಟ್ಟಿ ಕಟ್ಟಿದಳು. ಕಿರಣ ಬಿಕ್ಕಿಬಿಕ್ಕಿ ಅಳುತ್ತಿದ್ದ.

"ನೋಡ್ರೆವ ನಿಮ್ಮ ಹುಡುಗ. ನನ್ನ ಮಗನ ಕೈಯಾಗಿನ ನೋಟರು ಕಸಿದುಕೊಂಡು ಓಡಿ ಹೋಗತಿದ್ದನಂತ. ಎಡವಿಬಿದ್ದು ಹಣಿ ಒಡಕೊಂಡಾನ" ಎನ್ನುತ್ತ ದೇಸಾಯರ ಕಮಲವ್ವ ಬಂದಳು.

"ಉಡಾಳನಿದ್ದಾನ. ಏನು ಮಾಡುದು" ಎಂದು ತಾರಾ ಕಿರಣನ ಮೈ ಒರಸಹತ್ತಿದಳು. ಹಣೆಯಲ್ಲಿ ಇನ್ನೂ ರಕ್ತ ಸೋರುತ್ತಿತ್ತು. "ನಾ ಬಿದ್ದಿಲ್ಲ ಅವ್ವ. ಅವನೇ ಕಲ್ಲ ಒಗೆದಾನ" ಎಂದು ಕಿರಣ ಜೋರಾಗಿ ಅಳುವನ್ನಾರಂಭಿಸಿದ.

"ಸುಳ್ಳ ಹೇಳತಾನ ಮುಂಡೇಗಂಡ" ಎನ್ನುತ್ತ ಕಮಲಮ್ಮ ಜಾರಿದಳು. ಹಣೆಯಿಂದ ಸೋರುತ್ತಿರುವ ರಕ್ತ ನಿಲ್ಲದ್ದರಿಂದ ತಾರಾ ಅವನನ್ನು ಆಸ್ಪತ್ರೆಗೆ ಕರೆದುಕೊಂಡು ನಡೆದಳು. ಉಷಾ ಬಗಲಲ್ಲಿ ವಿರಾಜಮಾನಳಾದಳು. ಹಾದಿಯಲ್ಲಿ ಕೂಡ ಕಿರಣ ತಾನು ಬಿದ್ದಿಲ್ಲವೆಂದೂ, ಅವನೇ ಕಲ್ಲು ಒಗೆದನೆಂದೂ ಸಾಧಿಸುತ್ತಿದ್ದ. ಅವನ ತಲೆಗೆ ಔಷಧೋಪಚಾರವಾಗಿ ಮನೆಗೆ ಬರುವಾಗ ಮಧ್ಯಾಹ್ನ ಮೀರಿತ್ತು.

ಹೊಲಿಗೆಯ ಕೆಲಸ ಅಲ್ಲಿಗೇ ನಿಂತುಬಿಟ್ಟಿತು.– "ಆವನಂತಾ ಮೋಟಾರು ನನಗೂ ಬೇಕವ್ವ. ಚಿಗಪ್ಪಗ ಪತ್ರಾ ಹಾಕು" ಎಂದು ಕಿರಣ ಕಾಡತೊಡಗಿದ. "ನಾಳೆ ಬರತಾರ, ನಿನಗ ಮೋಟಾರೂ ತರತಾರ ಆತಿಲ್ಲೊ" ಎಂದು ಹೇಳುವಾಗ ತಾರಾನಿಗೆ ತುಂಬ ವೇದನೆಯಾಯಿತು. ತಾನು ಮಕ್ಕಳಿಗೆ ಸುಳ್ಳು ಹೇಳಬೇಕಾದ ಸಂದರ್ಭ ಬಂದುದಕ್ಕೆ ಅವಳು ತುಂಬ ಮರುಗಿದಳು.

ಬೆಳಗು ಜಾವ ಬಹಳ ಬೇಗನೆಯೇ ಎದ್ದು ತಾರಾ ಹೊಲಿಗೆ ಕೆಲಸ ಆರಂಭಿಸಿದಳು. ಯಂತ್ರದ 'ಕಿರರ್....' ಎಂಬ ದನಿಯಲ್ಲಿ ಅವಳು ತನ್ಮಯಳಾದಳು. ಅದೇ ವೇಳೆಯಲ್ಲಿ ವಿಶ್ವಾಸ ಗೋವಿನಪುರದ ನಿಲ್ದಾಣದಲ್ಲಿಳಿದು ಮನೆಯ ಕಡೆಗೆ ಮಂದ ಹೆಜ್ಜೆಗಳನ್ನಿಕ್ಕುತ್ತ ಸಾಗಿದ್ದ. ಅವನ ಮುಖ ನಿಸ್ತೇಜವಾಗಿತ್ತು. ಕಣ್ಣು ಊದಿಕೊಂಡಿದ್ದವು. ತಲೆಯ ಕೂದಲು ಹರವಿಕೊಂಡಿದ್ದವು. ಮೈಯಲ್ಲಿ ಧೂಳಡಗಿತ್ತು. ಅವನ್ನು ತುಟಿಕಚ್ಚಿಕೊಂಡು ಒಂದೇ ಸಮನೆ ಮಾರ್ಗಕ್ರಮಣ ಮಾಡುತ್ತಿದ್ದ. ವಿಚಾರಗಳ ತಾಕಲಾಟದಲ್ಲಿ ಅವನಿಗೆ ನಡೆಯುತ್ತಿರುವ ಅರಿವೂ ಇದ್ದಂತಿರಲಿಲ್ಲ. ಒಂದೇಸವನೆ ಸಾಗಿದ್ದ. ಆಗಾಗ ಬಿಡುವ ನಿಟ್ಟುಸಿರು ಅವನ ಅಂತರಂಗವನ್ನು ತೆರೆದು ತೋರಿಸುತ್ತಿತ್ತು.

ಗೋವಿನಪುರ ನಿಲ್ದಾಣಕ್ಕೂ, ಊರಿಗೂ ಮಧ್ಯದಲ್ಲಿರುವ ಕಟ್ಟಡದೆದುರಿಗೆ ಬಂದು ನಿಂತಾಗ ಆವೇ ಸೂರ್ಯೋದಯವಾಗುತ್ತಿತ್ತು. ಸಹಸ್ರಾರು ಜನರು ಆ ಹೆಬ್ಬಾಗಿಲಿನಲ್ಲಿ ಘುಮುಕುತ್ತಿದ್ದರು. 'ಭೋಂಗಾ'

ಒಂದೇ ಸಮನೆ ಕಿರಚುತ್ತಿತ್ತು. ತಾಯಿಯೊಬ್ಬಳು ಅವಸರದಲ್ಲಿ ಕೂಸಿಗೆ ಮೊಲೆಯೂಡಿಸಿ ಅದು ಅಳುತ್ತಿರುವಾಗಲೇ ಅದನ್ನು ಹಿರಿಯ ಮಗಳ ಕೈಯಲ್ಲಿತ್ತು ಒಳಗೆ ಧುಮುಕಿದಳು. "ಮುದುಕರು, ಹರೆಯದವರು, ಹೆಂಗಸರು, ಮಕ್ಕಳು ಎಲ್ಲರೂ ನುಗ್ಗುತ್ತಿದ್ದಾರೆ. ಏತಕ್ಕಾಗಿ? ಜೀವನದ ಹೋರಾಟಕ್ಕಾಗಿ. ತುತ್ತು ಅನ್ನಕ್ಕಾಗಿ." ಅವನು ಈ ದೃಶ್ಯವನ್ನು ಮನಃಪೂರ್ವಕವಾಗಿ ನೋಡಿದ. "ಈ ಜನರು ದುಡಿತದಲ್ಲಿ ಹಾಯಾಗಿ ಬಾಳುತ್ತಾರೆ. ನಾನೇಕೆ ದುಡಿಯಬಾರದು? ಈ ಕಾವ್ಯ ನನ್ನನ್ನು ದುರ್ಬ ಲನನ್ನಾಗಿ ಮಾಡಿದೆ;- ಆಲಸಿಗನನ್ನಾಗಿ ಮಾಡಿದೆ. ನಾನೂ ದುಡಿಯ ಬೇಕು. ದುಡಿದು ಹಣ ತರಬೇಕು. ಆದರೆ ನನ್ನಿಂದ ಈ ದುಡಿತ ಸಾಗಬಹುದೆ? ಈ ನಿಯಮಿತತನವನ್ನು ನಾನು ಮೈಗೂಡಿಸಿಕೊಳ್ಳಬ ಹುದೆ?....ತಾರಾನಿಗೆ ಯಾವ ಮುಖ ತೋರಿಸಲಿ? ಮಕ್ಕಳ ಗತಿಯೇನು? ನನಗಾಗಿ, ನನ್ನ ಮಕ್ಕಳಿಗಾಗಿ ತಾರಾ ಹೊಲಿಗೆಯ ಕೂಲಿಯಾಗಬೇಕೆ?.." ಭಾರವಾದ ಹೆಜ್ಜೆಗಳನ್ನಿಡುತ್ತ ಅವನು ಮುಂದೆ ಸಾಗಿದ್ದ. ದಾರಿಯ ಎಡಮಗ್ಗಲಲ್ಲಿ ಅಬ್ಬರದಿಂದ ಬೀಳುತ್ತಿತ್ತು ತಡಸಲು. ಅವನು ಆ ಕಡೆ ನೋಡಲಿಲ್ಲ. ಬರಬರುತ್ತ ಭೈರವೀ ಕೊಳ್ಳದ ಅವನ ವಿಹಾರ ಸ್ಥಾನ ಕಂಗೊಳಿಸಿತು. ಆ ಕಡೆಗೆ ಅವನು ಕಣ್ಣೆತ್ತಿ ನೋಡಲಿಲ್ಲ. ಮಾರ್ಕಂ ಡೇಯ ನದಿಯನ್ನು ದಾಟುತ್ತಿರುವಾಗ ಅವನ ಮೈ ಜುಮ್ಮೆನ್ನುತ್ತಿತ್ತು. ಈ ದಿನ ಅವನು ಅದನ್ನು ದಾಟಿದಾಗ ಯಾವ ಭಾವನೆಗಳೂ ಮೈದೋ ರಲಿಲ್ಲ. ಮುಂದೆ ಪಾರ್ವತೀ ಗುಡ್ಡವನ್ನು ಅವನು ಬಳಸಿ ಸಾಗುತ್ತಿರು ವಾಗ ಅದು ಹಿಂದಿನಂತೆ ಅವನನ್ನು ಕೈಮಾಡಿ ಕರೆಯಲಿಲ್ಲ. ಅಧೋ ವದನನಾಗಿ, ವಿಚಾರ ಶೂನ್ಯನಾಗಿ ಅವನು ಒಂದೇ ಸಮನೆ ಸಾಗಿದ್ದ. "ನನ್ನ ಮುಂದಿನ ಜೀವನದ ಗತಿಯೇನು?....ಗತಿ ಏನು??...." ಎಂದು ದೀರ್ಘವಾದ ನಿಟ್ಟುಸಿರು ಬಿಡುತ್ತ ಪಶ್ಚಾತ್ತಾಪ ದಗ್ಧ ಮಾನಸನಾಗಿ ಒಂದೊಂದೇ ಹೆಜ್ಜೆ ಕೀಳತೊಡಗಿದ. ಅವನ ಹೆಜ್ಜೆಯೇ ಅವನಿಗೆ ಭಾರ ವೆನ್ನಿಸಿತು. ಅವನು ಮನೆ ತಲುಪಿದಾಗ ಮಧ್ಯಾಹ್ನ ಸನಿಯವಾಗಿತ್ತು.

ಇಷ್ಟು ನಿಸ್ತೇಜವಾದ ಪತಿಯ ಮುಖವನ್ನು ತಾರಾ ತನ್ನಾಯುಷ್ಯ

ದಲ್ಲಿಯೇ ಕಂಡಿರಲಿಲ್ಲ. ಹೋದ ಕೆಲಸ ಆಲಿಗಲ್ಲವೆಂದು ಆದು ಸಾರಿ ಹೇಳುತ್ತಿತ್ತು. ಅವಳು ಗಾಬರಿಯಾದರೂ ಅದನ್ನು ತೋರಗೊಡದೆ ಮುಖದಲ್ಲಿ ಮಂದಸ್ಮಿತವನ್ನು ಎಳೆದು ತಂದು– "ಎರಡು ದಿನಗಳಲ್ಲಿಯೇ ಬರುವೆನೆಂದು ಹೇಳಿದವರು ನಾಲ್ಕು ದಿನಗಳಾದರೂ ಬರಬಾರದೆ?" ಎನ್ನುತ್ತ ಲಗುಬಗೆಯಿಂದ ಒಳಗೆ ಹೋಗಿ ಕೈಕಾಲು ತೊಳೆದುಕೊಳ್ಳಲು ನೀರು ತಂದಳು. ಅವನು ನಿರ್ವಿಣ್ಣನಾಗಿ ಕಾಲು ತೊಳೆದುಕೊಳ್ಳುವಾಗ ತಟ್ಟೆಯಲ್ಲಿ ಕಾರದ ಚುರುಮುರಿ ತಂದಿತ್ತಳು. ಅವನು ತಟ್ಟೆಯೊಳಗಿನ ಒಂದೊಂದೇ ಕಾಳನ್ನು ಬಾಯಿಗೆ ಹಾಕಿಕೊಳ್ಳುತ್ತ– "ತಾರಾ, ಧಾರಾ ಪುರದಲ್ಲಿ ನನಗೆ ಒಗ್ಗುವ ಚಾಕರಿ ಸಿಗಲಿಲ್ಲ. ಅಲ್ಲಿಯ ಸಂಪಾದಕರ ಗೋಳನ್ನು ಹೇಳತೀರದು. ಅವರಿಗೆ ತಲೆ ಭಾರವಾದ ಸಾಲ. ತಕ್ಕ ಜೀವನಾಂಶ ಸಿಗುವದಿಲ್ಲ. ಅವರೇ ಉಪವಾಸವನ್ನನುಭವಿಸುತ್ತಿರುವಾಗ ನನ್ನನ್ನವರು ಹೇಗೆ ತೆಗೆದುಕೊಂಡಾರು? ಕೊಂಡು ಓದುವ ಜನರಿಲ್ಲದ ಪತ್ರಿಕೆಗಳು ಕೇವಲ ಜಾಹಿರಾತಿನಿಂದ ಜೀವ ಹಿಡಿಯಬೇಕು. ಒಬ್ಬ ಸಂಪಾದಕರು ಮಾತ್ರ ವಿಶೇಷ ಸಂಚಿಕೆಗೆ ಕವನ ಕಳಿಸಲು ಹೇಳಿ ಹತ್ತು ರೂಪಾಯಿ ಕೊಟ್ಟರು. ಆದರಿಂದ ನಾನು ಬದುಕಬಹುದೆ? ಎಲ್ಲರೂ ನನ್ನ ಪ್ರತಿಭೆಯನ್ನು ಹೊಗಳುವವರೇ. ಆದರೆ ಯಾರಿಗೂ ನನ್ನನ್ನು ಪೋಷಿಸುವ ಶಕ್ತಿಯಿಲ್ಲ. ನಾನು ಕೆಲಸ ಕಳೆದುಕೊಂಡು ಬಹಳ ತಪ್ಪು ಮಾಡಿದೆ ತಾರಾ."

ಅವನಿಗೆ ಮುಂದೆ ಮಾತನಾಡುವದಾಗಲಿಲ್ಲ. ಬಾಯಲ್ಲಿ ನುರಿಸುತ್ತಿರುವ ಕಾಳುಗಳು ಉಂಡೆಯಾಗಿ ಬಂದವು. ಶೂನ್ಯದೃಷ್ಟಿಯಿಂದ ಆವನು ಹೆಂಡತಿಯನ್ನೊಮ್ಮೆ ನೋಡಿದ. ತಾರಾನಿಗೆ ಅತೀವ ವೇದನೆಯಾಯಿತು. ಆ ವೇದನೆಯನ್ನವಳು ಪ್ರಯತ್ನ ಪೂರ್ವಕವಾಗಿ ಹತ್ತಿಕ್ಕಿಕೊಂಡು– "ಹೋಗಲಿಬಿಡಿರಿ. ಮತ್ತೆಲ್ಲಿಯಾದರೂ ಮಾರ್ಗ ಸಿಕ್ಕೀತು." ಎಂದಳು. ಆ ವೇಳೆಗೆ ಕಿರಣ ಓಡುತ್ತ ಬಂದು– "ಚಿಗಪ್ಪ ಬಂದಾನ ಮೋಟರ, ಫೇಡೆ ತಂದಾನ" ಎನ್ನುತ್ತ ನಾಗ್ಗುತ್ತಿರುವಾಗ ಅವನ ಹಿಂದೆಯೇ ಉಷಾ ಕೈಚಪ್ಪಾಳೆಯಿಕ್ಕುತ್ತ– "ಹೂನೂ ತಂದಾನ" ಎಂದು

ಕುಣಿಯುತ್ತ ಬಂದಳು. ತಾರಾನಿಗೆ ತನ್ನ ಸುಳ್ಳಿನ ಅರಿವಾಗಿ ಅವಳು ಕಿರಣನನ್ನು ಹತ್ತಿರ ಎಳೆದು–"ಒಳಗೆ ಬಿಸ್ಕೇಟೋಣ್ಯಾಗ ಚುರಮುರಿ ಐತ ಹೋಗು. ಉಷಾನಿಗೂ ಕೊಡು" ಎಂದು ಒಳಗೆ ಅವಳು ಮಂದಸ್ಮಿತ ಳಾಗಿ ಪತಿಯನ್ನು ನೋಡಿದಳು. ಆ ನಗೆಯ ಹಿಂದೆ ಅವಿತುಕೊಂಡ ಕಾರ್ಮೋಡವನ್ನು ವಿಶ್ವಾಸ ಅರಿಯದಿರಲಿಲ್ಲ.

ದಿನಗಳ ಮೇಲೆ ದಿನಗಳುರುಳಿದವು. ಆದರೆ ವಿಶ್ವಾಸನ ಆರ್ಥಿಕ ಸ್ಥಿತಿ ಸುಧಾರಿಸಲೇಯಿಲ್ಲ. ಅವನು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲ ವಾದವು. ಅನೇಕ ವಿದ್ಯಾ ಸಂಸ್ಥೆಗಳಲ್ಲಿ ದುಡಿಯಲು ಹೆಣಗಿಸಿದ. ಸಿಕ್ಕ ಸಿಕ್ಕಲ್ಲಿ ಅರ್ಜಿ ಹಾಕಿದ. ಆದರೆ ಎಲ್ಲಿಯೂ ಆಸರೆ ಸಿಗಲಿಲ್ಲ. ಬಡತನ ಭೀಕರವಾಗಿ ಮಕ್ಕಳ ಪೋಷಣೆ ಭಾರವೆನ್ನಿಸಿತು. ಕೊನೆಯ ಪ್ರಯತ್ನ ವೆಂದು ಮನೆಯಲ್ಲಿ ಕೆಲವು ವಿದ್ಯಾರ್ಥಿಗಳಿಗೆ ಪಾಠ ಹೇಳಲಾರಂಭಿಸಿದ. ಇದರಿಂದ ಅಲ್ಪ-ಸ್ವಲ್ಪ ಹಣ ಬಂದರೂ ಅದೂ ಕೆಲದಿನಗಳಲ್ಲಿಯೇ ನಿಂತು ಹೋಯಿತು. ಪಾಸಿನ ದೃಷ್ಟಿಯಿಂದ ಅವನ ಪಾಠ ನಿಷ್ಪ್ರಯೋ ಜಕವೆಂದು ಬಗೆದ ವಿದ್ಯಾರ್ಥಿಗಳು ಒಬ್ಬೊಬ್ಬರಾಗಿ ಅವನನ್ನು ತೊರೆದು ಶಾಲೆಯ ಅಧಿಕೃತ ಶಿಕ್ಷಕರ ಮೊರೆ ಹೊಕ್ಕರು. ತಾರಾನ ದುಡಿತ ಅಖಂ ಡವಾಗಿ ಸಾಗಿದರೂ ಪ್ರಯೋಜನವಾಗಲಿಲ್ಲ. ಅವನು ಹೌಹಾರಿದ. ಮಕ್ಕಳ ವಸ್ತ್ರಗಳ ಮೇಲೆ ನಿಂತ ತೇಪೆಗಳು ಅವನ ಕಣ್ಣನ್ನು ಚುಚ್ಚಿದವು. ಹೆಂಡತಿಯ ಸೀರೆಯ ಮೇಲೆ ಎದ್ದು ಕಾಣುವ ಹೊಲಿಗೆಗಳು ಅವನ ಕರುಳನ್ನಿರಿದವು. ಇದನ್ನು ನೋಡಲಾರದೆ ಅವನೊಂದು ದಿನ-"ತಾರಾ, ಇಲ್ಲಿ ಉಪವಾಸ ಸಾಯುವದಕ್ಕಿಂತ ಅಣ್ಣನ ಮನೆಗೇಕೆ ಹೋಗಬಾರದು? ಮಕ್ಕಳಾದರೂ ಹೊಟ್ಟೆತುಂಬ ಉಣ್ಣಬಹುದು" ಎಂದ.

ಗಂಡನ ಅಂತರಾಳವನ್ನು ಭೇದಿಸಿ ಬಂದ ಈ ಮಾತುಗಳು ಅವಳ ಸ್ವಾಭಿಮಾನಕ್ಕೆ ಕಾದ ಬರೆಯನ್ನೇ ಎಳೆದವು. "ನಾವು ಯಾವ ಗೆಲುವಿನ ಮುಖದಿಂದ ಅಲ್ಲಿ ಹೋಗಬೇಕು.?"

"ನನಗೆ ನೌಕರಿ ಸಿಗುವವರೆಗಾದರೂ...."

"ಪದವೀಧರರು ನೌಕರಿಯನ್ನೇ ಮಾಡಬೇಕೆಂದು ಎಲ್ಲಿ ಹೇಳಿದೆ? ಜೀವನಕ್ಕೆ ಬೇರೆ ಮಾರ್ಗಗಳೇ ಇಲ್ಲವೆ? ನೀವು ನಿಮ್ಮ ವಿಚಾರ ದೃಷ್ಟಿಯನ್ನು ಬದಲಿಸಿದರೆ...."

"ನಾನು ಕೂಲಿಕುಂಬಳಿ ಮಾಡಿ ಹೊಟ್ಟೆ ಹೊರೆದುಕೊಳ್ಳಬೇಕೆಂದು ನಿನ್ನ ಅಭಿಪ್ರಾಯವೆ? ಒಂದು ವೇಳೆ ನಿನ್ನ ಅಭಿಪ್ರಾಯವನ್ನು ಒಪ್ಪಿದರೂ ಆ ಶಕ್ತಿ ಈ ವಿದ್ಯಾವಂತನಿಗಿಲ್ಲ. ನನ್ನ ವಿದ್ಯೆ ನನ್ನ ದೇಹ ಶಕ್ತಿಯನ್ನು ನುಂಗಿ ನೀರು ಕುಡಿದಿದೆ."

"ನಾನು ನಿಮಗೆ ಕೂಲಿ ಮಾಡಲು ಹೇಳಲಿಲ್ಲ. ನೌಕರಿಯೊಂದೇ ಜೀವನ ಮಾರ್ಗವಲ್ಲವೆಂದು ಹೇಳಿದೆ."

"ನಿನಗೆ ಅಣ್ಣನ ಮನೆಗೆ ಹೋಗುವದು ಬೇಡವಾಗಿದೆ. ಅದಕ್ಕಾಗಿಯೇ ಈ ಮಾತು ಅಲ್ಲವೆ?"

"ನಿಮ್ಮ ಮಾತು ನಿಜ. ನನಗೆ ಕೂಳಿಗಾಗಿ ಬೀಳುವ ನಾಯಿಯಾಗಿ ಬಾಳುವದು ಬೇಕಿಲ್ಲ. ಅವರೆ ಬಾಳಿನ ಕಷ್ಟವೇ ಅವರಿಗಿರುವಾಗ ನಾವು ಅವರ ಮೇಲೆ ಭಾರ ಹಾಕುವದು ನ್ಯಾಯವೆ? ದೇವರು ಕಣ್ಣು ಮುಚ್ಚಿಲ್ಲ. ನಮಗೂ ಬೆಳಕು ಕಾಣುವ ದಿನ ಬಂದೇ ಬರುತ್ತವೆ. ಸುಮ್ಮನೆ ಇನ್ನೊಬ್ಬರ ಮೇಲೆ ಭಾರ ಹಾಕುವಲ್ಲಿ ಯಾವ ಪುರುಷಾರ್ಥವೂ ಇಲ್ಲ." ಹೀಗೆ ಮಾತನಾಡುವ ಕಾಂತನ ಕಣ್ಣುಗಳಲ್ಲಿಯ ಅಶ್ರುಬಿಂದುಗಳನ್ನು ಕಂಡು ಅವನು ಉತ್ತರಿಸಿದ. "ನನಗೆ ಯಾವ ಮಾರ್ಗವೂ ತೋರದಾಗಿದೆ."

"ಸೂರ್ಯ ಮೂಡುವವರೆಗೆ ಬೆಳಕಿನ ದಾರಿ ಕಾಯಬೇಕಾಗುವದು. ಕರಾಳ ಕತ್ತಲೆ ಸಹಿಸಬೇಕಾಗುವದು."

"ಆ ಬೆಳಕು ಸಿಗುವವರೆಗಾದರೂ ಅಣ್ಣನ ಆಶ್ರಯದಲ್ಲಿದ್ದರೆ ತಪ್ಪೇನು?" ಕಾಂತನ ಕಣ್ಣೊಳಗಿಂದ ಪಳಕ್ಕನೆ ನೀರು ಚಿಮ್ಮಿದವು. ಈ ಮಾತುಗಳ

ಹಿನ್ನೆಲೆಯಲ್ಲಿ ಅವನು ಹಟ ಸಾಧಿಸುವ ಗುರಿ ಎದ್ದು ಕಾಣುತ್ತಿತ್ತು ಮಾತಿಗೆ ಮಾತು ಬೆಳೆಸಿ ಕಹಿಯನ್ನು ಎಳೆದು ತರುವದು ಅವಳಿ ಬೇಕಿರಲಿಲ್ಲ. ತಾನು ಸೋಲಬೇಕೆಂದೇ ಅವಳು ನಿರ್ಧರಿಸಿಕೊಂಡು– "ಆಗಲಿ ಅಲ್ಲಿಗೇ ಹೋಗೋಣ. ಅದೂ ನನ್ನ ಮನೆಯೆ." ಎಂದಳು.

ಹೆಂಡತಿಯ ಸೋಲು ಅವನಲ್ಲಿ ಕಳವಳವನ್ನೇ ಉಂಟು ಮಾಡಿತು. ಆ ವೇಳೆಗೆ ಕಿರಣ- "ದೊಡ್ಡಪ್ಪ ಬಂದ" ಎಂದು ಕೂಗಿದ. ದಂಪತಿ ಗಳು ಅವಾಕ್ಕಾಗಿ ತಲೆಬಾಗಿಲತ್ತ ನೋಡುವಾಗ ಅಚ್ಯುತರಾಯರು ಕಿರಣನ ಮೈತಟ್ಟುತ್ತಿದ್ದರು. ಅಣ್ಣನ ಈ ಅನಿರೀಕ್ಷಿತ ಆಗಮನವನ್ನು ಕಂಡು ವಿಶ್ವಾಸ ಸರ್ರನೆ ಹೋಗಿ– "ಒಂದು ಕಾಗದವನ್ನಾದರೂ ಬರೆ ಯಬಾರದಿತ್ತೆ" ಎಂದು ಅಣ್ಣನಿಗೆ ನಮಸ್ಕರಿಸಿ ಒಳಗೆ ಕರೆದು ತಂದ. ತಾರಾ ಬಾಗಿ ನಮಿಸಿದಳು.

ರಾಯರಿಗೆ ಆಕ್ಷಣ ಮನೆಯ ವಾತಾವರಣ ತಿಳಿಯಿತು. ಅವರ ಕಣ್ಣೊಳಗಿಂದ ಎರಡು ದೊಡ್ಡ ಹನಿಗಳುದುರಿದವು. ಮಾತನಾಡುವದೇ ಕಷ್ಟವಾಯಿತು. ಕೆಲಸಮಯ ಕಳೆದ ಮೇಲೆ- "ವಿಶೂ, ನಿನಗೊಬ್ಬ ಅಣ್ಣನಿರುವನೆಂಬುದು ನೀನು ಮರೆಯಬೇಕೆ? ನಿನ್ನ ನೌಕರಿ ಹೋಗಿ ಇಷ್ಟು ದಿನಗಳಾದರೂ ನನಗೊಂದನ್ನೂ ತಿಳಿಸಬಾರದೆ? ನಿಮ್ಮ ದುರ ವಸ್ಥೆಯನ್ನು ನಾನು ಹೆರವರ ಬಾಯಿಂದ ಕೇಳಿ ಬರಬೇಕೆ? ತಾರಾ ನೀನಾದರೂ ಇವನಿಗೆ ಹೇಳಬಾರದಿತ್ತೆ?" ಎನ್ನುತ್ತ ಕಂಠ ತುಂಬಿದರು.

"ಹಾಗೇನಿಲ್ಲ ಅಣ್ಣ. ಈ ನೌಕರಿ ಹೋದರೂ ಇನ್ನೊಂದು ಸಿಗ ಬಹುದೆಂಬ ಆಸೆಯಿಂದ ನಿನಗೆ ತಿಳಿಸಲಿಲ್ಲ."

"ಹುಚ್ಚಪ್ಪ ಆದದ್ದು ಆಗಿ ಹೋಯಿತು. ನಿಮ್ಮನ್ನು ಕರೆದು ಕೊಂಡು ಹೋಗಲು ನಾನೇ ಬಂದಿದ್ದೇನೆ. ಸಂಜೆಗೆ ಹೋಗೋಣ ಒಂದು ಬಕ್ಕರಿಯಲ್ಲಿ ನಿನಗೂ ಅರ್ಧ."

"ಅಣ್ಣಾ, ನಿನ್ನ ಭಾರ ನಿನಗೆ ಕಡಿಮೆಯೆ?"

"ನಿನ್ನದೂ ನನ್ನದೇ ತಮ್ಮ. ನನ್ನದು–ನಿನ್ನದು ಸಧ್ಯಬೇಡ. ಎಲ್ಲವೂ ಹಿರಿಯರದು." ವಿಶ್ವಾಸನ ಕಣ್ಣಲ್ಲಿ ನೀರೂರಿತು. ತಾರಾ ಲಗು ಬಗೆಯಿಂದ ಅಲ್ಲಲ್ಲಿ ಸಾಮಾನುಗಳನ್ನು ಬೇಡಿ ತಂದು ಊಟಕ್ಕೆ ಅಣಿ ಮಾಡಿದಳು. ಭಾವನವರಿಗೆ ಒಳಿತಾಗಿ ಊಟ ಹಾಕುವ ಪುಣ್ಯವಿಲ್ಲದ್ದಕ್ಕೆ ಮರುಗಿದಳು.

ಆ ರಾತ್ರಿ ಅಣ್ಣ ತಮ್ಮಂದಿರಿಬ್ಬರೂ ಬಹಳ ಹೊತ್ತಿನವರೆಗೆ ಮಾತಾಡಿದರು. ಆ ಮಾತಿನಲ್ಲಿ ಅಣ್ಣನ ಆರ್ಥಿಕ ಸ್ಥಿತಿ ದಿನದಿನಕ್ಕೂ ಎಷ್ಟು ಹದಗೆಟ್ಟಿದೆ ಎಂದು ಅವನು ತಿಳಿದುಕೊಂಡ. ಇಂತಹ ಆಪತ್ತಿನಲ್ಲೂ ರಕ್ಷಣೆಯ ಕೈಚಾಚಿದ ಅಣ್ಣನ ಔದಾರ್ಯಕ್ಕೆ ಮನಸ್ಸಿನಲ್ಲೇ ಶಿರಬಾಗಿದ. ಆದರೆ ಇಂತಹ ಸ್ಥಿತಿಯಲ್ಲಿ ಅವನ ಮೇಲೆ ಭಾರ ಹಾಕುವದು ಅನುಚಿತವೆನ್ನಿಸಿತು, ವಿಶ್ವಾಸನಿಗೆ.

"ತಮ್ಮ, ನಿನ್ನ ವಿದ್ಯೆಗೆ ಜಗತ್ತಿನಲ್ಲಿ ಬೆಲೆಯಿಲ್ಲ. ಇಂದು ಜಗತ್ತು ಮುತ್ಕಾಳರಿಗಿದೆ. ಮನೋರಮೆಯ ಗಂಡ ವೆಂಕಟೇಶನನ್ನು ಬಲ್ಲೆಯಷ್ಟೆ?"

"ಹೌದು. ಕಾಲೇಜಿನಲ್ಲಿ ಅವನು ನನ್ನ ಗೆಳೆಯನಾಗಿದ್ದ. 'ಪುಸ್ತಕದ ವೈರಿ'ಯೆಂದು ನಾವು ಆಗ ಅವನನ್ನು ಕರೆಯುತ್ತಿದ್ದೆವು."

"ಈಗವನು ಲಕ್ಷಾಧೀಶನಾಗಿರುವ ವಿಶೂ, ಹಣ ಅವನಿಗೆ ಕಾಲ ಕಸವಾಗಿದೆ. ಅವನ ಉದ್ಯೋಗವೇನೊ ತಿಳಿಯದು. ಕಾರಿನಲ್ಲಿ ತಿರುಗುತ್ತ ಹಾಲಳ್ಳಿಯಲ್ಲಿ ದೊಡ್ಡ ಮನುಷ್ಯನೇ ಆಗಿರುವ. ಮನೋರಮೆಯ ಸೌಭಾಗ್ಯ ಅರಳಿ ನಿಂತಿದೆ."

"ನೋಡಣ್ಣ–ಆ ಮನೋರಮೆಯನ್ನು ನನ್ನ ಕೊರಳಿಗೆ ಕಟ್ಟಿ ಪಾಪ! ಅವಳ ಆಯುಷ್ಯವನ್ನೇ ಹಾಳು ಮಾಡುತ್ತಿದ್ದಿರಿ" ಎಂದು ವಿಶ್ವಾಸ ನಗೆಯಾಡಿದ.

ಮರುದಿನ ರಾಯರು ಮತ್ತೆ ಅವರನ್ನು ಕರೆದುಕೊಂಡು ಹೋಗುವ

ಗೊಳ್ಳಬಾರದೆಂದು ಅವಳು ಮನಸಾ ಇಚ್ಛಿಸುತ್ತಿದ್ದಳು. ಕದಡಿದ ಮನಸ್ಸನ್ನು ಜಗ್ಗಿ ಇನ್ನೂ ಹದಗೆಡಿಸಬಾರದೆಂದು ತಾರಾ ಆ ಮಾತನ್ನು ಅಷ್ಟಕ್ಕೇ ನಿಲ್ಲಿಸಿ ಕಿರಣನನ್ನು ಕೂಗುವ ವೇಳೆಗೆ ಅವನೊಂದು ದಪ್ಪ ಲಕೋಟೆಯನ್ನು ತೆಗೆದುಕೊಂಡು ಓಡುತ್ತ ಬಂದ. ಅವಳು ಆ ಕಾಗದ ಬಿಚ್ಚಿ ಓದಿಕೊಂಡಳು. ಅವಳಿಗೆ ಗಂಡನ ಬಗ್ಗೆ ಅಭಿಮಾನ ಉಕ್ಕಿತ್ತು. ಸಂತೋಷದಿಂದ- "ಹೂವಿನ ಹಳ್ಳಿಯ ಕನ್ನಡ ಸಂಘದವರು ಸಂಘದ ವಾರ್ಷಿಕೋತ್ಸವಕ್ಕೆ ನಿಮ್ಮನ್ನು ಆಮಂತ್ರಿಸಿದ್ದಾರೆ. ನಿಮ್ಮ ಕಾವ್ಯ ವಾಚನ ಕೇಳಲು ಜನರೆಲ್ಲ ಆತುರರಾಗಿದ್ದಾರೆ. ನೀವೇ ಮುಖ್ಯ ಅತಿಥಿಗಳು." ಎಂದು ಬಾಯಿ ತುಂಬಾ ಹೇಳಿ ತಾರಾ ನಗೆ ಬೀರಿದಳು.

ವಿಶ್ವಾಸನ ಕಣ್ಣು ಕೆಂಪಗಾದವು. ಅವನು ನಿಷ್ಠುರನಾಗಿ- "ಸಂಘದ ಕೆಲಸಗೇಡಿಗಳು ಬಾಳ ಹೇಡಿಯಾದ ನನ್ನನ್ನು ಬಿಟ್ಟರೆ ಇನ್ನಾರನ್ನು ಆಮಂತ್ರಿಸಬೇಕು? ಕವಿ ವಿಶ್ವಾಸ ಸತ್ತು ಹೋದನೆಂದು ಅವರಿಗೆ ಸ್ಪಷ್ಟವಾಗಿ ತಿಳಿಸು."

ತಾರಾ ಜರ್ರನೆ ಇಳಿದು ಹೋದಳು. ಅವಳ ಕಣ್ಣಾಲಿ ತುಂಬಿ ದವು- "ಎಂತಹ ಅಭದ್ರ ಮಾತನಾಡುವಿರಿ? ಈ ದಿನ ನಿಮಗೆ ಆಗಿದೆ ಯಾದರೂ ಏನು? ಈ ಆಮಂತ್ರಣ ನೀವು ಸ್ವೀಕರಿಸಲೇಬೇಕು."

"ಖಂಡಿತ ಸಾಧ್ಯವಿಲ್ಲ. ಈ ಬಾಳು ನನಗೆ ಹೇಯವಾಗಿದೆ. ತಿರಸ್ಕರಣೀಯವಾಗಿದೆ."

"ನಿಮಗೆ ನನ್ನ ಕೊರಳಾಣೆಯಾಗಿದೆ. ನೀವು ನನಗಾಗಿ ಹೋಗ ಲೇಬೇಕು. ನನ್ನ ಮಾತನ್ನು ನಡೆಯಿಸಿಕೊಡಬೇಕು. ಎರಡು ದಿನ ಬದಲಾವಣೆಯಾದರೂ ಆಗುವದು." ಹೆಂಡತಿಯ ಒತ್ತಾಯಕ್ಕೆ ಅವನು ತಲೆಬಾಗಿದ. ಆದರೂ ಕೊನೆಯ ಮಾತೆಂದು- "ಅವರಿಂದ ಹಣವಾದರೂ ಬರಲಿ ನೋಡೋಣ" ಎಂದು ಮಾತು ಮುಗಿಸಿದ.

"ಈ ದಿನವೇ ಮನಿಯಾರ್ಡರ ಮೂಲಕ ಹಣ ಕಳಿಸಿದ್ದಾರಂತೆ. ಹಣ ಮುಟ್ಟಿದರಾದರೂ ಹೋಗುವಿರಾ?"

"ನಿನ್ನ ಮಾತನ್ನು ಮೀರುವ ಶಕ್ತಿ ನನ್ನಲ್ಲಿಲ್ಲ ತಾರಾ" ಎಂದು ಅವನು ಆ ಮಟ್ಟಿಗೆ ಹೆಂಡತಿಯನ್ನು ಮುಗುಳು ನಗೆಯಿಂದ ನೋಡಿದ. ಆ ನೋಟದಲ್ಲಿ ಅನುಗ್ರಹದ ಛಾಯೆಯಿರಲಿಲ್ಲ. ಅಭಿಮಾನ ಮೂಡಿ ನಿಂತಿತ್ತು.

ಮಾತಿನ ಸಂದರ್ಭವನ್ನರಿತ ಕಿರಣನಿಗೆ ವಿಶ್ವಾಸ ಯಾವುದೋ ಊರಿಗೆ ಹೋಗುವ ಸ್ಪಷ್ಟ ಕಲ್ಪನೆಯಾಯಿತು. ತಾಯಿಯ ಮೊಗವನ್ನು ಹೆದರಿಕೆಯಿಂದ ನೋಡುತ್ತ ತಂದೆಯ ಬಳಿಸರಿದು ತನ್ನ ಬೇಡಿಕೆ ಮಂಡಿಸಿದ- ಈ ಸಾರೆಯಾದರೂ ನನಗೊಂದು ಮೋಟಾರು ತೆಗೆದುಕೊಂಡು ಬಾ ಚಿಗಪ್ಪ. ದೊಡ್ಡದು ಬೇಡ ಸಣ್ಣದೇ ಇರಲಿ"

"ಈ ಹುಡುಗನಿಗೊಂದು ಮೋಟಾರ ಹುಚ್ಚೇ ಹಿಡಿದಿದೆ" ಎಂದು ತಾರಾ ಕಿರಣನನ್ನು ಸುಮ್ಮನಿರುವಂತೆ ಸನ್ನೆ ಮಾಡಿದಳು. "ನಾ ಏನ ನಿನಗ ಹೇಳೂದುಲ್ಲ ಬಿಡು. ಚಿಗಪ್ಪಗ ಹೇಳೀನಿ' ಎನ್ನುವ ಅವನ ಮಾತಿಗೆ ಆ ದಂಪತಿಗಳು ನಕ್ಕರು.

ಸಂಘದವರು ವಿಶ್ವಾಸನಿಗೆ ಇಂಟರ ವರ್ಗದ ಪ್ರವಾಸಕ್ಕೆ ತಗಲಬಹುದಾದ ಹಣ ಕಳಿಸಿದ್ದರು. ನಿಲ್ದಾಣದ ದಾರಿಯಲ್ಲಿ ಅವನು ಮೂರನೆಯ ವರ್ಗದಲ್ಲಿ ಪ್ರವಾಸ ಮಾಡಿ ಉಳಿದ ಹಣದಿಂದ ಕಿರಣನಿಗೊಂದು ಆಟಿಗೆ ಮೋಟಾರು ಕೊಳ್ಳಬೇಕೆಂದಿದ್ದ. ಆದರೆ ನಿಲ್ದಾಣವನ್ನು ತಲುಪಿದಾಗ ಅವನಿಗೆ ತನ್ನ ವಿಚಾರ ತಪ್ಪೆಂದು ತೋರಿತು. ಸಂಘದ ಗೌರವ ಕಡೆಗಣಿಸುವದು ತರವಲ್ಲವೆಂದು ಅವನು ಇಂಟರ್ ವರ್ಗದ ಟಿಕೀಟನ್ನು ಪಡೆದು ಗಾಡಿ ದಾರಿ ಕಾಯತೊಡಗಿದ. ಆ ಹೊತ್ತು ಜನದಟ್ಟಣೆ ವಿಶೇಷವಾಗಿದ್ದರಿಂದ ಮೂರನೆಯ ವರ್ಗದಲ್ಲಿ ಗದ್ದಲ ವಿಪರೀತವಾಗಿತ್ತು. ತನ್ನ ನಿರ್ಣಯವೇ ಸರಿಯೆಂಬ ಸಮಾಧಾನದಿಂದ ಅವನು ಇಂಟರ ವರ್ಗದ ಡಬ್ಬಿಯೆಡೆಗೆ ಧಾವಿಸಿದ. ಬಾಗಿಲನ್ನು ಭದ್ರವಾಗಿ ಹಾಕಿಕೊಂಡು ಗೋಣುಚಾಚಿದ ಯುವಕನೊಬ್ಬ ಅವನನ್ನು ಕಂಡು- "ಇದು ಇಂಟರ ವರ್ಗ. ಮುಂದೆ ಸಾಗಿರಿ" ಎಂದ.

ವಿಶ್ವಾಸನಿಗೆ ತನ್ನ ಯೋಗ್ಯತೆಯ ಅರಿವಿತ್ತು. ಸಾಬೂಣದ ಲೇಪನವಿಲ್ಲದೆ ಒಗೆದು ಹಾಕಿಕೊಂಡ, ನೆಹರೂ ಶರ್ಟು; ಪಾಯಜಾಮುಗಳು ಈ ಪ್ರವಾಸಕ್ಕೆ ಯೋಗ್ಯವಲ್ಲವೆಂದು ಅವನೂ ತಿಳಿದಿದ್ದ. ತಲೆಯ ಮೇಲೆ ಹುಲುಸಾಗಿ ಬೆಳೆದ ಎಣ್ಣೆ ಕಾಣದ ಕ್ರಾಪು ಮೂರನೆಯ ವರ್ಗದ ಪ್ರಯಾಣಕ್ಕೂ ಅಯೋಗ್ಯನೆಂದು ಸಾರುತ್ತಿತ್ತು. ಆದರೆ ಇಷ್ಟರಿಂದ ತನ್ನ ಯೋಗ್ಯತೆಯ ನಿರ್ಣಯಕ್ಕೆ ನಿಂತ ಆ ಯುವಕನ ಹೀನ ಸಂಸ್ಕೃತಿಗೆ ಅವನಿಗೆ ಸಂತಾಪವಾಯಿತು. ಅವನು ಪಳಿಯ ಮೇಲೆ ನಿಂತು ನಿಷ್ಠುರ ಸ್ವರದಲ್ಲಿ- "ನಾನು ಯಾವ ವರ್ಗದವನೇ ಇರಲಿ. ಅದನ್ನು ಕೇಳುವ ಹಕ್ಕು ನಿಮ್ಮದಲ್ಲ ಸ್ವಾಮಿ. ರೇಲ್ವೆ ಅಧಿಕಾರಿಗಳಿದ್ದಾರೆ. ಸುಮ್ಮನೆ ದಾರಿ ಬಿಡಿರಿ" ಎಂದ. ಯುವಕ ತೆಪ್ಪಗಾದ.

ಕುಳಿತುಕೊಳ್ಳಲು ಎಲ್ಲಿಯೂ ಸ್ಥಳ ಸಿಗದೆ ವಿಶ್ವಾಸ ಗಾಡಿ ಬಿಟ್ಟ ಕೂಡಲೆ ಜನರನ್ನು ದಾಟುತ್ತ ಆ ಡಬ್ಬಿಯ ಕೊನೆಯ ಸಾಲಿಗೆ ಬಂದ. ಅಲ್ಲಿ ಒಂದು ಬೆಂಚಿನ ಮೇಲೆ ದಂಪತಿಗಳು ಹಾಯಾಗಿ ಕಾಲು ಚಾಚಿ ಕುಳಿತಿದ್ದರು. ಅವರ ಮೂರು ವರುಷದ ಮಗು ಹೋಲ್ಡಾಲಿನ ಮೇಲೆ ಕುಳಿತು ಬೆಂಚಿನ ಮೇಲೆ ಕಾಲು ಚಾಚಿ ಆಡುತ್ತಿತ್ತು. ಅದರ ಕೈಯಲ್ಲಿ ಒಂದು ಆಟಿಗೆ ಮೋಟಾರು ಶೋಭಿಸುತ್ತಿತ್ತು. ಅದನ್ನು ಆಶೆಬುರುಕನಂತೆ ನೋಡುತ್ತ– "ಕಿರಣನಿಗೂ ಇಂಥ ಮೋಟಾರು ಬೇಕು. ಆದರೆ...."

ಆ ದಂಪತಿಗಳ ಜೀವನ ಅವನಿಗೆ ಬಹಳ ಸುಖಪ್ರದವಾಗಿರುವಂತೆ ಕಂಡಿತು. ಆ ತುಂಬುಗಲ್ಲದ ನಲ್ಲೆಯ ಮುಖವನ್ನು ತಾರಾನ ಮುಖದೊಡನೆ ಹೋಲಿಸಿ ನೋಡಿದ. ತಾರಾನ ಮುಖವೇ ಸುಂದರವಾಗಿ ಕಂಡರೂ ಅದು ಮೋಡ ಮುಸುಕಿದ ಚಂದ್ರಕಳೆಯಂತೆ ಬಾಡಿದಂತೆ ತೋರಿತು. ತಾರಾನ ಬಡತನದ ವಸ್ತ್ರಗಳು ಅವಳ ಸೌಂದರ್ಯವನ್ನು ನುಂಗಿ ನೀರು ಕುಡಿದಂತೆ ಭಾಸವಾಯಿತು. ಆದರೆ ಅವಳ ಹೃದಯದ ಸೌಂದರ್ಯ ಅವಳದೇ–ಎಂದುಕೊಂಡ. ಅವನ ಕಾಲು ನೋಯಲಾರಂಭಿಸಿದ್ದರಿಂದ ಕುಳಿತುಕೊಳ್ಳಲು ಹವಣಿಸಿ ಅವನು ನಲ್ಲನನ್ನು ಉದ್ದೇಶಿಸಿ–

"ಸ್ವಲ್ಪ ಕಾಲು ತೆಗೆದುಕೊಂಡರೆ ನನಗೂ ಕುಳಿತುಕೊಳ್ಳಲು ಅನುವಾಗುವದ." ಎಂದ. ಆ ಮಾತು ಗಾಳಿಯಲ್ಲಿ ಹೋಯಿತು. ಕೇಳಿಯೂ ಕೇಳದಂತೆ ಆ ಮಹಾನುಭಾವ ಹೆಂಡತಿಯೊಡನೆ ಸರಸವಾಡುವಲ್ಲಿ ಮಗ್ನನಾದ. ಅವನ ಈ ನಡತೆಯಿಂದ ಜಿಗುಪ್ಸೆಗೊಂಡು ವಿಶ್ವಾಸ ತಿರುಗಿ ಅವನನ್ನು ಕೇಳಲಿಲ್ಲ.

ಎರಡನೆಯ ನಿಲ್ದಾಣದಲ್ಲಿ ಗಾಡಿ ನಿಂತಾಗ ಸಂಪೂರ್ಣ ಸೂಟುಧಾರಿಯೊಬ್ಬ ಕೈಯಲ್ಲಿ ತೊಗಲಿನ ಚೀಲ ಹಿಡಿದುಕೊಂಡು ಒಳಗೆ ನುಗ್ಗಿದ. ಅವನು ನೇರವಾಗಿ ಒಳಗೆ ಬಂದು ಆ ನಲ್ಲನಿಗೆ ಕಾಲು ತೆಗೆದುಕೊಳ್ಳ ಹೇಳಿ ಅವನ ಉತ್ತರದ ದಾರಿಯನ್ನೂ ಕಾಯದೆ ಕುಳಿತುಬಿಟ್ಟ. ಆ ನಲ್ಲ ಸರ್ರನೆ ಕಾಲು ಸರಿಸಿಕೊಂಡ. ವಿಶ್ವಾಸನಿಗೆ ನಗೆ ಬಂದಿತು. ಜಗತ್ತಿನಲ್ಲಿ ಬಾಳಬೇಕಾದರೆ ಗಟ್ಟಿಯಾಗಿಯೇ ಬಾಳಬೇಕು. ಸೂಕ್ಷ್ಮಭಾವನನ್ನು ತಿಳಿದುಕೊಳ್ಳುವ ಗೋಜಿಗೆ ಯಾರೂ ಹೋಗುವದಿಲ್ಲ. ಆದರೂ ಅವನಿಗೆ ಕುಳಿತುಕೊಳ್ಳಬೇಕೆನ್ನಿಸಲಿಲ್ಲ. ಕುಳ್ಳಿರೆಂದು ಯಾರೂ ಅವನನ್ನು ಕರೆಯಲಿಲ್ಲ. "ನಾನೊಬ್ಬ ದೊಡ್ಡ ಕವಿ; ಸಾಹಿತ್ಯ ಒಂದು ಸಂಘದ ಉತ್ಸವಕ್ಕೆ ಮುಖ್ಯ ಅತಿಥಿಯಾಗಿ ಹೋಗುತ್ತಿದ್ದೇನೆ. ಆದರೆ ಜೀವನದಲ್ಲಿ, ಸಮಾಜದಲ್ಲಿ ನನ್ನ ಸ್ಥಾನವೇನು? ನನ್ನ ವಸ್ತ್ರಗಳು ನನ್ನ ಜೀವನವನ್ನು ಪ್ರತಿಬಿಂಬಿಸುತ್ತವೆ. ನನ್ನ ಬಡತನದಿಂದ ನಾನೊಬ್ಬ ಕ್ಷುದ್ರ ವ್ಯಕ್ತಿ. ಈ ದಾರಿದ್ರ್ಯವನ್ನು ನಾನು ಹೊಡೆದೋಡಿಸಬೇಕು. ಸುಖ ಜೀವನ ಕಂಡುಕೊಳ್ಳಬೇಕು" ಹೀಗೆ ವಿಚಾರಿಸುತ್ತ ನಿಂತ ಅವನಲ್ಲಿ ಅನೇಕ ದಾರಿಗಳು ಕಂಡವು. ಅಕ್ಷಣ ಅವನಿಗೆ ಭೈರವೀ ಕೊಳ್ಳದಲ್ಲಿ ಕಂಡ ಸ್ವಪ್ನದ ಅರಿವಾಯಿತು. "ಆ ಸ್ವಪ್ನ ಸುಂದರಿಯ ದರ್ಶನ ಸಾಂಕೇತಿಕವಾಗಿದೆ. ನಾನವಳನ್ನು ಪಡೆಯಬೇಕೆಂಬುದೇ ಸಂದೇಶವಾಗಿದೆ. ಆ ಕನ್ಯೆ ಜೀವನದ ಗುರುಹಾಗಿದ್ದಾಳೆ. ಅದನ್ನು ಪಡೆದುಕೋ ಎಂದು ಹೇಳಿ ಅವಳು ಮಾಯವಾಗಿದ್ದಾಳೆ. ಹೌದು ನಾನೂ ಸುಖಜೀವನ ಪಡೆಯಬೇಕು ಪಡೆಯಬೇಕು...." ವಿಶ್ವಾಸನ ವಿಚಾರ ಶಕ್ತಿ ಹುಚ್ಚು ಹೊಳೆಯಾಗಿ ಹರಿಯುತ್ತಿತ್ತು.

ಹೂವಿನ ಹಳ್ಳಿಯ ನಿಲ್ದಾಣದಲ್ಲಿ ಸಂಘದ ಕಾರ್ಯಕರ್ತರೆಲ್ಲ ಸ್ವಾಗತಕ್ಕಾಗಿ ನೆರೆದಿದ್ದರು. ಅವರಲ್ಲನೇಕರನ್ನು ವಿಶ್ವಾಸ ಎಲ್ಲಿಯೋ ಕಂಡಂತೆ ಭಾಸವಾಯಿತು. ಕಾರ್ಯದರ್ಶಿ ಮುಂದೆ ಬಂದು ಅವನ ಕೊರಳಿಗೆ ಸೇವಂತಿಗೆಯ ಮಾಲೆ ಹಾಕಿದ. ಆ ಹೂಮಾಲೆ ಕಂಡು ಅವನಿಗೆ ಸಮಾಧಾನವಾಗದೆ ದುಗುಡವೇ ಆಯಿತು. ಉಷಾ ಅನೇಕ ಸಾರೆ ಹೂಗಳನ್ನು ತರಲು ಹೇಳಿದ್ದಳು. ಅವನಿಂದ ಆ ಕೆಲಸವಾಗಿರಲಿಲ್ಲ. ಈ ಹೂವಿನ ಮಾಲೆ ಕಾಯ್ದಿಟ್ಟುಕೊಂಡು ಆ ಮಗುವಿಗೆ ಕೊಡಬೇಕೆಂಬ ಭಾವ ಅವನಲ್ಲಿ ಸುಳಿದಾಗ ತುಸು ಸಮಾಧಾನವಾಯಿತು. ಬಂದವರಲ್ಲಿ ಅನೇಕರಿಗೆ ಅವನ ಮಲಿನ ವಸ್ತ್ರ, ವ್ಯಕ್ತಿತ್ವ ಮೆಚ್ಚಿಗೆಯಾದಂತೆ ತೋರಿದ್ದರಿಂದ ಕಾರ್ಯಕ್ರಮದ ಬಗ್ಗೆ ಶಂಕೆಯನ್ನೇ ತಾಳಿದರು. ಕವನಗಳನ್ನು ಬರೆದ ನೋಟ ಬುಕ್ಕುಗಳ ಕೈಚೀಲ ಬಿಟ್ಟರೆ ಅವನವೆನ್ನುವ ಬೇರೆ ಸಾಮುಗ್ರಿಗಳಿರಲಿಲ್ಲ.

ಕಾರ್ಯದರ್ಶಿಗಳ ಮನೆಯಲ್ಲಿ ಸಮೀಚೀನವಾದ ಫಲಾಹಾರದ ಸಿದ್ಧತೆಯಾಗಿತ್ತು. ವಿಶ್ವಾಸನನ್ನು ಒಳಗೆ ಕರೆದುಕೊಂಡು ಹೋಗಿ ತಟ್ಟೆಗಳ ಮುಂದೆ ಕೂಡ್ರಿಸಿದಾಗ ಅವನಿಗಾದ ಹಸಿವೆ ಮಾಯವಾಯಿತು. ಬಿಸ್ಕೀಟು, ಸಜ್ಜಿಗೆವಡೆ, ಉಪ್ಪಿಟ್ಟಿನ ಪ್ಲೇಟುಗಳನ್ನು ಕಾಣುತ್ತಿರುವಂತೆ ಅವನಿಗೆ ತನ್ನ ಸಂಸಾರದ ದುರ್ದೆಸೆ ನೆನಪಾಯಿತು. ಕಿರಣ ಅನೇಕ ಸಾರಿ ಬಿಸ್ಕೀಟು ಬೇಡಿದ ದೃಶ್ಯ ಅವನೆದುರು ಸುಳಿದು ಅವುಗಳನ್ನು ಮುರಿಯುವದಾಗಲಿಲ್ಲ. ಉಪ್ಪಿಟ್ಟು ಕಹಿಯಾಯಿತು; ಸಜ್ಜಿಗೆ ಸಪ್ಪಗೆನ್ನಿಸಿತು. ಅವನು ಬರಿಯ ಒಂದು ಕಪ್ಪು ಚಹ ಕುಡಿದು ಎದ್ದ. ಅವನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. ಕಾರ್ಯದರ್ಶಿಗಳು ಅಂದಿನ ಕಾರ್ಯಕ್ರಮ ವಿವರಿಸಿ ಕೊನೆಯದಾಗಿ– "ತಮ್ಮನ್ನು ಈ ರಾತ್ರಿ ಇಲ್ಲಿಯೇ ಇಟ್ಟುಕೊಳ್ಳಬೇಕೆಂದಿದ್ದೆವು. ಆದರೆ ಹಾಲಳ್ಳಿಯ ಸಾಹುಕಾರ ವೆಂಕಟೇಶರಾಯರು ನಿಮ್ಮನ್ನು ತಮ್ಮಲ್ಲಿಗೆ ಕಳುಹಿಸಲು ಬಿನ್ನವಿಸಿದ್ದಾರೆ. ಹಾಲಳ್ಳಿ ಇಲ್ಲಿಂದ ಕೇವಲ ಹನ್ನೆರಡು ಮೈಲು. ಎಂಟೂವರೆ ಗಂಟೆಗೆ ಕಾರು ಕಳಿಸುತ್ತಾರೆ. ಇದಕ್ಕೆ ತಮ್ಮ ಒಪ್ಪಿಗೆಯಷ್ಟೆ?" ಎಂದರು.

"ಓ? ವೆಂಕಟೇಶ ಹೇಳಿ ಕಳಿಸಿದ್ದಾನೆಯೆ? ಆಗಲಿ ಅದಕ್ಕೇನು? ಅವನು ನನ್ನ ಆತ್ಮೀಯ ಸ್ನೇಹಿತ" ಎಂದ ಅವನು. ವೆಂಕಟೇಶನ ಚಿತ್ರ ಅವನ ಕಣ್ಣೆದುರು ಸುಳಿದು ಹೋಯಿತು;- ಅಣ್ಣಾ ಹೇಳಿದ ಮಾತು ನೆನಪಾಗಿ ಮನೋರಮೆಯ ಮೊಗ ಕಂಗೊಳಿಸಿತು. ಗೆಳೆಯನ ಭೆಟ್ಟಿಯಾಗುವ ಸಂದರ್ಭದಿಂದ ಅವನಿಗೆ ಸಂತೋಷವೂ ಆಯಿತು.

ವಿಶ್ವಾಸ ಸಭಾಗೃಹಕ್ಕೆ ಬಂದಾಗ ಅದು ಕಿಕ್ಕಿರಿದು ತುಂಬಿತ್ತು. ಸ್ವಾಗತ ಗೀತೆಯಾಗಿ ಸಭೆ ಪ್ರಾರಂಭವಾಗುವ ವೇಳೆಗೆ ಸಂಘದ ಸ್ತ್ರೀ ಸದಸ್ಯೆಯೊಬ್ಬಳು ಪ್ರತಿಷ್ಠಿತ ಸ್ತ್ರೀಯೊಬ್ಬಳನ್ನು ಕರೆದುಕೊಂಡು ಬರುತ್ತಿದ್ದರಿಂದ ಸಭೆಯ ಕಾರ್ಯಕ್ರಮಕ್ಕೆ ತುಸು ತಡೆಯಾಯಿತು. ಬಂದ ಮಹಿಳೆ ಮುಖ್ಯ ಅತಿಥಿಗಳ ಹತ್ತಿರದಲ್ಲೇ ತೆರವಾಗಿದ್ದ ಸ್ಥಾನವನ್ನಲಂಕರಿಸಿದಳು. ಕಾರ್ಯದರ್ಶಿಗಳು ಗಡಿಬಿಡಿಯಿಂದ ಅವಳ ಹತ್ತಿರ ಹೋಗಿ- "ವೆಂಕಟೇಶ ರಾಯರೂ ಬಂದಿರುವರೆ?" ಎಂದು ಕೇಳಲು ಅವಳು ಮುಗುಳು ನಗೆ ಸೂಸುತ್ತ- "ಇಲ್ಲ. ಅವರಿಗೆ ಬರಲಾಗಲಿಲ್ಲ. ನಾನೇ ಕರೆದುಕೊಂಡು ಹೋಗುತ್ತೇನೆ" ಎಂದಳು.

ವಿಶ್ವಾಸ ಗಡಬಡಿಸಿದ. ಬಂದವಳು ಮನೋರಮೆ ಎಂದು ಅವನಿಗೆ ಖಚಿತವಾಯಿತು. ಅವನೊಮ್ಮೆ ಅವಳೆಡೆಗೆ ನೋಡಿದಾಗ ಅವಳು ಮಂದಸ್ಮಿತಳಾಗಿ ಅವನನ್ನು ನೋಡುತ್ತಿದ್ದಳು. ಬಹಳ ದಿನಗಳ ಹಿಂದೆ ಅವಳನ್ನು ನೋಡಿದ ಅವನಿಗೆ ಈದಿನ ಅವಳು ಅಪೂರ್ವ ರಮಣಿಯಾಗಿ ಶೋಭಿಸಿದಳು. ಅವಳ ವೇಷಭೂಷಣಗಳಲ್ಲಿ ಸಿರಿವಂತಿಕೆ ತುಂಬಿ ತುಳುಕುತ್ತಿತ್ತು. ಆದರೆ ಡಂಭಾಚಾರ ಮಾತ್ರ ಇರಲಿಲ್ಲ. ಆಕ್ಷಣ ಅವನೆದುರಿಗೆ ತಾರಾನ ಮುಖ ಕುಣಿಯಿತು. ಆ ಮುಖ ಅಪೂರ್ವ ಕಾಂತಿಯಿಂದ ಕೂಡಿದಂತೆ ಅವನಿಗೆ ಭಾಸವಾಯಿತು. ಅದರ ಮುಂದೆ ಈ ಮೊಗ ಕಾಂತಿಹೀನವಾಗಿ, ನಿರ್ಜೀವವಾಗಿ ತೋರಿತು. ಈಗವನ ಕಣ್ಣಿಗೆ ತಾರಾನ ಮೊಗ ಮಾತ್ರ ಎದ್ದು ನಿಂತಿತು;- ಅವನಲ್ಲಿ ಹೊಸ ಸ್ಫೂರ್ತಿ ತುಂಬಿತು. ಆ ಸ್ಫೂರ್ತಿಯಲ್ಲೇ ಅನೇಕ ಕರತಾಡನಗಳ ಮಧ್ಯೆ ಅವನು ಎದ್ದು ನಿಂತ. ಜನ ಸ್ತಬ್ಧವಾಯಿತು.

ಜನ ಮಂತ್ರ ಮುಗ್ಧರಾಗಿ ಅವನ ಕವನ ವಾಚನ ಕೇಳುತ್ತಿದ್ದರು. 'ಪ್ರೇಮ ದೇವತೆಗೆ' ಎಂಬ ಮೊದಲ ಕವನವೇ ಜನರ ಹೃದಯವನ್ನು ಸೂರೆಗೊಂಡಿತು. 'ವೈಗೂಡಿದ ಪ್ರೇಮಾ! ತುಂಬಲಿ ಭೂ-ವ್ಯೋಮಾ' ಎಂಬ ಪಲ್ಲವಿಯನ್ನು ಅವನು ಪದೇ ಪದೇ ನುಡಿಯುವಾಗ ಜನರ ಕಾವ್ಯನಾಡಿ ಸ್ಪಂದನ ಮಾಡಿತು. ಸೃಷ್ಟಿ ವೈಭವದ ಚಮತ್ಕಾರಿಕ ನವೋನವವಾದ ಕವನಗಳ ಜೇನು ಮಳೆಯ ಸುಖಾನುಭವ ಹೊಂದಿದ ಜನರು ಪರವಶರಾದರು. ಅವನ ಪ್ರಣಯ ಗೀತಗಳು, ಸಂಸಾರದ ಕಟು ಮಧುರ ವಿನ್ಯಾಸದ ವಕ್ರೋಕ್ತಿಗಳ ಸುಧಾರಸವನ್ನು ಸೂಸುವ ಸಂಸಾರ ಗೀತಗಳು ಜನರನ್ನು ಮುಗ್ಧರನ್ನಾಗಿ ಮಾಡಿದವು. 'ಮೆಚ್ಚಿದಾಕೆ' ಎಂಬ ಕವನವನ್ನು ಅವನು ಅಮೋಘವಾಗಿ ನುಡಿಯುತ್ತಿರುವಾಗ ಮನೋರಮೆ ಕರವಸ್ತ್ರದಿಂದ ಕಣ್ಣೊರೆಯಿಸಿಕೊಂಡಳು. 'ನಗುನಗುತ ಕವಿಯ ರಸಗೆಯ್ಯ ಹಿಡಿದ ಜಡು!' ಎಂಬ ಕವನದಲ್ಲಿ ಕವಿಯ ಹೆಂಡತಿಯ ವ್ಯಕ್ತಿತ್ವ ಅನೇಕರಲ್ಲಿ ಕಣ್ಣೀರನ್ನು ತಂದಿತು. ಮನೋರಮೆಯಂತೂ ಕರಗಿ ನೀರಾದಳು. ಒಂದೂವರೆ ತಾಸಿನವರೆಗೆ ಅಮೋಘವಾಗಿ ಹಾಡಿದ ಅವನು ಸ್ತಬ್ಧನಾಗಿ ನಿಂತಾಗ ಅವನ ವೈ ನಡುಗುತ್ತಿತ್ತು. ಕಣ್ಣು ಒದ್ದೆಯಾಗಿದ್ದವು. ಅವನ ಜೀವನಪಕ್ಷಿ ಕಾವ್ಯ ಬಾನಿನಲ್ಲಿ ಮನಸ್ವಿಯಾಗಿ ಹಾರಾಡಿ ಕೊನೆಗೆ ನಿತ್ಯಜೀವನದ ನೆಲದಲ್ಲಿ ಕುಪ್ಪಳಿಸಿದಂತೆ ಅವನೂ ಕೆಳಗೆ ಕುಳಿತುಬಿಟ್ಟ. ಅವನ ಕಣ್ಣೆದುರಿಗೆ ಮಲನಾಂಬರ ವಸನ ಧಾರಿಯಾದ ಪತ್ನಿಯ ಮೊಗ ಕಾಣಿಸಿತು. "ಈ ಸಾರೆಯಾದರೂ ಮೋಟಾರು ತೆಗೆದುಕೊಂಡು ಬಾರೋ ಚಿಗಪ್ಪ" ಎಂದ ಕಿರಣನ ಧ್ವನಿ- "ಹೂ ತರತಾನ, ಮಾಲೀ ತರತಾನ" ಎಂಬ ಉಷಾಳ ಮುಗ್ಧ ಮಾತು ಅವನಿಗೆ ಮತ್ತೆ ಕೇಳಿಬಂದವು. ಅವನು ಹತಾಶನಾದವನಂತೆ ಎರಡೂ ಕೈಗಳಿಂದ ಮೊಗ ಮುಚ್ಚಿಕೊಂಡು ಕುಳಿತ. ಅವನ ಕವನ ರಸಾಸ್ವಾದನೆಯಲ್ಲಿ ಸಂಭ್ರಮ ಪುಳಕಿತರಾದ ಜನ ಈ ವೇದನೆಯನ್ನೆಂತು ಕಾಣಬೇಕು? ಬಂದವರೆಲ್ಲ ಹೊಗಳಿಕೆಯ ಹೂಮಾಲೆ ತೊಡಿಸಿ ಚದುರಿದರು. ತನ್ನ ಆಸನದಲ್ಲಿ ಎದ್ದು ನಿಂತ ಮನೋರಮೆ ಆದರ ಪೂರ್ವಕವಾಗಿ ಅವನನ್ನು ನೋಡುತ್ತ- "ಇನ್ನು ಹೋಗಬಹುದಲ್ಲವೆ ನಾವು?" ಎಂದಳು.

"ವೆಂಕಟೇಶ ಬರಲಿಲ್ಲವೆ?" ವಿಶ್ವಾಸ ಗೊಂದಲದ ದನಿಯಲ್ಲಿ ಕೇಳಿದ.

"ನಿಮಗಾಗಿ ಮನೆಯಲ್ಲಿಯೇ ದಾರಿಕಾಯುತ್ತಿದ್ದಾರೆ."

"ಕಾವ್ಯದ ಕಡುವೈರಿ ಆತ" ವಿಶ್ವಾಸ ನಗೆಯಾಡುತ್ತ ಹೊರಟು ನಿಂತ. ಸಭಾಗ್ರಹದ ಹೊರ ಬಾಗಿಲಲ್ಲಿ ಮಿರಿಮಿರಿ ಮಿಂಚುವ ಕಾರು ಸಿದ್ಧವಾಗಿತ್ತು. ಮನೋರಮೆ ತಾನೇ ಮೊದಲು ಏರಿ ಕುಳಿತು ಅವನಿಗೆ ಸ್ಥಳ ಸರಿಪಡಿಸಿದಳು. ಅವನು ಮುಂದೆ ಕುಳಿತುಕೊಳ್ಳಬೇಕೊ, ಹಿಂದೆ ಹೋಗಬೇಕೊ ಎನ್ನುವ ಹೊತ್ತಿಗೆ ಅವಳು– "ಮುಂದಿನ ಸೀಟಿನಲ್ಲಿ ಸಾಮಾನಿಡಲಾಗಿದೆ. ತಾವಿಲ್ಲಿಯೆ ಬರಬಹುದು" ಎಂದಳು. ಅನೇಕ ಹೂಮಾಲೆಗಳನ್ನು ಧರಿಸಿದ ಅವನು ಒಳಗೆ ಕುಳಿತು ಕರಜೋಡಿಸುತ್ತಲೆ ಕಾರು ಸಾಗಿತು.

ಪರಿಚಯದವಳಾದರೂ ಶ್ರೀಮಂತನ ಮಡದಿಯೊಂದಿಗೆ ಕುಳಿತು ಕೊಳ್ಳುವ ಸಂದರ್ಭ ಬಂದುದಕ್ಕೆ ಅವನ ಮನ ಮುದುಡಿತು; ನಾಲಿಗೆ ಏಳದಾಯಿತು. ತನ್ನ ಜೀವನ, ಈ ಪ್ರವಾಸ–ಎಲ್ಲ ವಿಚಿತ್ರವೆನ್ನಿಸಿತವ ನಿಗೆ. ದಾರಿಯಲ್ಲಿ ಒಂದೆರಡು ಬಾರಿ ಏನನ್ನೊ ಮಾತನಾಡಲು ಹವ ಣಿಸಿದ. ಆದರೆ ನಾಲಿಗೆ ಏಳಲಿಲ್ಲ. ಅವಳಿಗೂ ಅದೇ ಗತಿಯಾಗಿತ್ತು. ಮನಸ್ಸು ಎಲ್ಲಿಯೋ ಸಂಚರಿಸುತ್ತಿತ್ತು. ಅನೇಕ ದಿನಗಳ ಹಿಂದೆ ಅವಳ ತಾಯಿ– "ವಿಶ್ವಾಸನೇ ನಿನ್ನ ಗಂಡನೆಂದು" ಹೇಳಿದ ಮಾತು, ಅದನ್ನೇ ಅವಳು ಹೃದಯದಲ್ಲಿಟ್ಟುಕೊಂಡು ಒಮ್ಮೆ ಅವನು ಮನೆಗೆ ಬಂದಾಗ ಹೊರಗೆ ಬಾರದಿದ್ದುದೂ,– "ಈಗೆಯೆ ಹೀಗೆ. ನಾಳೆ ಮದುವೆಯಾದ ಮೇಲೆ ಹೇಗೆಂದು" ತಾಯಿ ಚೇಷ್ಟೆ ಮಾಡಿದುದು–ಎಲ್ಲವೂ ಈಗವಳಿಗೆ ನೆನಪಾದವು. ಹಿಂದಿನ ನೆನಪನ್ನು ಮರೆಯಲು ಅವಳು– "ನೀವು ನನ್ನ ಗುರುತು ಹಿಡಿಯುವಿರೊ ಇಲ್ಲವೊ ಎಂದು ಹೆದರಿದ್ದೆ" ಎಂದಳು.

"ಪರಿಚಯದವರನ್ನು ಮರೆಯುವಷ್ಟು ನನ್ನ ಸ್ಥಿತಿಯಲ್ಲೇನೂ ಬದಲಾವಣೆಯಾಗಿಲ್ಲ ಮನೋರಮಾ ಬಾಯಿ! ನನ್ನನ್ನು ಇನ್ನೂ ನೆನಪಿಟ್ಟು ಕರೆಯ ಕಳುಹಿಸಿದ್ದು ವೆಂಕಟೇಶನ ಘನತೆ" ಎಂದು ಅವನು ಬಾಯಿ ತೆರೆದ.

"ಕಾಲೇಜಿನಲ್ಲಿ ನೀವಿಬ್ಬರೂ ಜೀವದ ಗೆಳೆಯರಾಗಿದ್ದಿರಂತೆ.

"ನಿಜ. ಆದರೆ ಇಂದಿನ ನನ್ನ ಜೀವನ ಗೆಳೆತನ ಕುದುರಿಸುವಂತಹದಿಲ್ಲ. ವೆಂಕಟೇಶನ ಭಾಗ್ಯವನ್ನು ಕುರಿತು ಮೊನ್ನೆ ಅಣ್ಣಾ ಹೇಳಿದಂದಿನಿಂದ ನನಗೂ ಬಹಳ ಕುತೂಹಲ ಬೆಳೆದಿತ್ತು. ನಿಮ್ಮ ಸುದ್ದಿವನ್ನು ಅಣ್ಣಾ ಬಹಳ ಹಿಗ್ಗಿ ಹೇಳಿದರು."

"ದೇವರು ಕಣ್ಣು ತೆರೆದಿದ್ದಾನೆ. ಅವರಿಗೆ ಯಾವ ಕೊರತೆಯೂ ಇಲ್ಲ."

"ವೆಂಕಟೇಶ ಭಾಗ್ಯವಂತ."

"ನಿಮ್ಮ ಭಾಗ್ಯಕ್ಕೇನು ಕೊರತೆಯಿದೆ ಮತ್ತೆ? ನಿಮ್ಮ ಕೈಹಿಡಿದವಳು ಪುಣ್ಯವನ್ನೇ ಮಾಡಿದ್ದಾಳೆ."

"ಆ ಪುಣ್ಯವೇ ಅವಳನ್ನು ಬಡತನದಲ್ಲಿ ಒದ್ದಾಡಿಸುತ್ತದೆ. ತಾರಾನ ಜೀವನಕ್ಕೆ ಯಾವ ಸುಖವೂ ಇಲ್ಲ ಮಾನೋರಮಾಬಾಯಿ."

"ನೀವು ಸಿರಿತನದ ಮಾನದಂಡದಿಂದ ಸುಖವನ್ನಳೆಯುತ್ತಿದ್ದೀರಿ ತಾನೆ?"

"ಸಿರಿತನ ಹೋಗಲಿ. ಹೊಟ್ಟೆಯ ಮಾನದಂಡದಿಂದ ಅಳೆಯುವದು ಅನಿವಾರ್ಯವಷ್ಟೆ?"

"ಅಂದರೆ ನೀವು ಶಿಕ್ಷಕರಾಗಿ...."

"ಅದು ಹಿಂದಿನ ಮಾತು ಮನೋರಮಾಬಾಯಿ"

"ಈಗ?"

"ಕವಿಯಾಗಿ ಕಾವ್ಯಗಳನ್ನು ಮಾತ್ರ ಬರೆಯುತ್ತೇನೆ."

"ಈ ಭಾಗ್ಯವೇನು ಕಡಿಮೆಯದೆ.?"

"ಯಾರಿಗೆ?"

"ನಿಮಗೆ. ನಿಮ್ಮ ಕೈಹಿಡಿದವಳಿಗೆ."

ಅವಳ ಮಾತುಗಳನ್ನು ಕೇಳಿ ಅವನು ನಕ್ಕು ಹೇಳಿದ- "ಹಣದ ಸುಪ್ಪತ್ತಿಗೆಯಲ್ಲಿ ಹೊರಳಾಡುವ ನಿಮಗೆ ಬಡತನದ ಅರಿವಾಗಲಾರದು. ತಾರಾ ನನಗೆ ಸ್ಫೂರ್ತಿಯಾಗಿ ಬಾಳುತ್ತಾಳೆ. ಆ ಭಾಗ್ಯ ನನ್ನದು. ನನ್ನ ಕೈಹಿಡಿದದ್ದು ಮಾತ್ರ ಅವಳ ದುರ್ಭಾಗ್ಯ. ಬಡತನದ ಬೆಂಕಿಯಲ್ಲಿ ಅವಳು ಬೆಂದು ಹೋಗಿದ್ದಾಳೆ. ಅವಳ ಅನುಪಮ ತ್ಯಾಗಕ್ಕೆ ನಾನು ಕೊಟ್ಟಿದ್ದು ಬಡತನ; ಉಪವಾಸ."

ಅವಳು ದೀರ್ಘವಾದ ಉಸಿರು ಹಾಕಿದಳು- "ಹಣದ ಸುಪ್ಪತ್ತಿಗೆ ಯಲ್ಲಿ ಹೊರಳಾಡುವವರೂ ಸುಖವಾಗಿರುವದಿಲ್ಲ. ನನ್ನ ಮಟ್ಟಿಗೆ ತಾರಾ ಸುಖವಾಗಿಯೇ ಇದ್ದಾಳೆ. ಅವಳ ಜೀವನಕ್ಕೊಂದು ಅರ್ಥವಿದೆ. ಅವಳ ತ್ಯಾಗಕ್ಕೆ ಬೆಲೆಯಿದೆ. ಎಂದ ಅವಳಲ್ಲಿ ಅದಾವುದೋ ದುಃಖ ಹೊಗೆ ಯಾಡುತ್ತಿತ್ತು. ಅದನ್ನು ಗುರುತಿಸಿದ ವಿಶ್ವಾಸ ಮಾತಿನ ಸರಣಿಯನ್ನು ಬದಲಿಸಬೇಕೆಂದು- "ಇಂದಿನ ಕಾರ್ಯಕ್ರಮಕ್ಕೆ ವೆಂಕಟೇಶನು ಬಂದಿದ್ದರೆ ಒಳಿತಾಗುತ್ತಿತ್ತು" ಎಂದ.

"ಅವರಿಗೆ ಬಿಡುವೇ ಇರುವದಿಲ್ಲ. ವಾರಕ್ಕೊಮ್ಮೆಯಾದರೂ ಮನೆ ಯನ್ನು ಕಾಣುವದು ದುಸ್ತರವಾಗುತ್ತದೆ. ವ್ಯವಹಾರ ಬೆಳೆದು ಹೋದ ದ್ದರಿಂದ ಅವರಿಗೆ ತುಂಬಾ ಕೆಲಸ. ಇಂದು ಬೆಳಿಗ್ಗೆ ಆಕಸ್ಮಾತ್ತಾಗಿ ಇಲ್ಲಿಗೆ ಬಂದಾಗ ನಿಮ್ಮ ಕಾರ್ಯಕ್ರಮ ತಿಳಿದುಕೊಂಡು ಮನೆಗೆ ಬಂದವರೇ ನಿಮ್ಮ ವಿಷಯ ನನಗೆ ಹೇಳಿ ತಮಗೆ ಬಿಡುವು ಸಿಗದಿದ್ದರೆ ನಾನೇ ಹೋಗಿ ನಿಮ್ಮನ್ನು ಕರೆತರಲು ಹೇಳಿದರು. ಅವರಿಗೆ ಬಿಡುವು ಸಿಗದೆ ನಾನೇ ಬಂದೆ."

ಕಾರು ವಾಯುವೇಗದಿಂದ ಓಡುತ್ತಿತ್ತು. ಕೆಲವು ಸಮಯ ಅವರು ಯಾವ ಮಾತನ್ನೂ ಆಡದೆ ಮೌನವಾಗಿ ಕುಳಿತಿದ್ದರು. ಅವನ ದುಃಖ ದಾರಿದ್ರ್ಯಕ್ಕಾಗಿ ಸಹಾನುಭೂತಿ ತೋರಿಸುವಂತೆ ವೇದನಾಪೂರ್ಣಳಾಗಿ ಕುಳಿತಿದ್ದಳು ಅವಳು. ಆಗಾಗ ನಿಟ್ಟುಸಿರು ಸೂಸಿ ಬರುತ್ತಿತ್ತು. ಜೀವನದ ಕಹಿ ನೆನಪಾಗಿ ಅವನ ಅಂತರಂಗದಲ್ಲೂ ಬಿರುಗಾಳಿ ಎದ್ದಿತ್ತು. ಅದರ ಹೊಡೆತವನ್ನು ತಪ್ಪಿಸಿಕೊಳ್ಳುವವನಂತೆ ಅವನೂ ಮೌನವಾಗಿದ್ದ.

ದೂರದ ಗಿಡಗಳ ಮಧ್ಯದಲ್ಲಿ ದೀಪಗಳು ಕಾಣಿಸಿದವು. "ಅದೇ ನಮ್ಮ ಮನೆ" ಎಂದು ಹೇಳುವಾಗ ಮನೋರಮೆಯ ದನಿ ಕುಗ್ಗಿತು. ಕಾರು ಕೊಂಕುದಾರಿಯನ್ನು ಬಳಸಿ ಭರದಿಂದ ಸಾಗಿತ್ತು. ಕೊನೆಗೆ ವಿಶಾಲವಾದ ತೋಟದ ಭವ್ಯ ಬೀದಿಯಲ್ಲಿ ಸಾಗಿ ಬಂಗಲೆಯೆದುರು ನಿಲ್ಲುತ್ತಿರುವಾಗ ಒಳಗಿನಿಂದ ವೆಂಕಟೇಶ ಓಡಿಬಂದು– "ಕವಿಗಳಿಗೆ ಸ್ವಾಗತ" ಎಂದು ಕಾರಿನ ಬಾಗಿಲು ತೆರೆದ.

"ಹೇಳಿದ ವೇಳೆಗೆ ಎಂದೂ ಬಾರದ ನೀವು ಈ ದಿನ ಸರಿಯಾದ ವೇಳೆಗೆ ಮನೆಯಲ್ಲಿರುವದನ್ನು ನೋಡಿದರೆ ಕವಿಗಳಿಗೆ ನಾನೇ ಕೃತಜ್ಞ ಳಾಗಿರಬೇಕು" ಎಂದು ಮನೋರಮೆ ಮಂದಹಾಸ ಬೀರಿದಳು.

"ನನ್ನ ವಿಷಯವನ್ನೆಲ್ಲ ಅವನಿಗೆ ಹೇಳಿಬಿಟ್ಟೆಯಾ?" ಎಂದು ನಗುತ್ತ ವೆಂಕಟೇಶ ಸ್ನೇಹಿತನನ್ನು ತಬ್ಬಿಕೊಂಡು ಒಳಗೆ ಕರೆದುಕೊಂಡು ನಡೆದ. ವಿದ್ಯುದ್ದೀಪಗಳಿಂದ ಝಗಝಗಿಸುವ ಹೊರಗಿನ ಕೋಣೆಯು ಥಳಥಳ ಹೊಳೆಯುವ ಆಸನಗಳು, ಬಾಗಿಲವರೆಗೆ ಹಾಸಿದ ರತ್ನಗಂಬಳಿ, ಸುವಾ ಸನೆ ಬೀರುತ್ತ ಸುಸ್ವಾಗತಗೈಯುವ ಹೂವಿನ ಕುಂಡಗಳು–ಎಲ್ಲವೂ ವೆಂಕಟೇಶನ ಶ್ರೀಮಂತಿಕೆಯನ್ನು ಸಾರಿ ಹೇಳುತ್ತಿದ್ದವು. ವಿಶ್ವಾಸನಿಗೆ ಇಂದ್ರಭವನವನ್ನು ಹೊಕ್ಕಂತೆ ಭಾಸವಾಯಿತು. ಗೆಳೆಯನನ್ನು ಸ್ಪ್ರಿಂಗಿನ ಆಸನದಲ್ಲಿ ಕುಳ್ಳಿರಿಸಿ ವೆಂಕಟೇಶ ಅವನ ಬಳಿಯಲ್ಲಿಯೇ ಕುಳಿತು– "ಎಷ್ಟು ಬದಲಾಗಿದ್ದೀ ವಿಶ್ವಾಸ?" ಎಂದ.

ವಿಶ್ವಾಸ ಅವನನ್ನೇ ನೇರವಾಗಿ ನೋಡುತ್ತ- "ನಾನು ಮಾತ್ರ ಬದಲಾಗಿದ್ದೇನೆಯೆ? ನೀನೂ ಬದಲಾಗಿದ್ದಿ, ಆದರೆ ನೀನು ಬದಲಾದ ರೀತಿಗೂ ವ್ಯತ್ಯಾಸವಿದೆ" ಎಂದು ನಗೆಯಾಡಿದ. ಅದೇ ವೇಳೆಗೆ ಅದೇ ಮಡಿಕೆ ಮುರಿದ ಶುಭ್ರವಾದ ಟಾವೇಲನ್ನು ಹೆಗಲ ಮೇಲೆ ಹಾಕಿಕೊಂಡು ಬಾಗಿಲಲ್ಲಿ ಬಂದು ನಿಂತ ಅಡಿಗೆ ಆಳನ್ನು ನೋಡಿ ವೆಂಕಟೇಶ- "ಮೊದಲು ನೀರ ತೊಳೆದುಕೊ. ಆ ಮೇಲೆ ಮಾತನಾಡಲು ಬೇಕಾದಷ್ಟು ಸಮಯವಿದೆ ಎಂದು ಹೇಳಲೂ ವಿಶ್ವಾಸ ಹೊರಗೆ ಹೋಗಿ ಮೊಗ ತೊಳೆದುಕೊಂಡು ಬಂದ. ಆ ವಸ್ತ್ರವನ್ನು ಅವನು ತೆಗೆದುಕೊಂಡಾಗ ಅದರಿಂದ ಒರೆಯಿಸಿಕೊಳ್ಳಲು ಹೆದರಿಕೆಯೇ ಆಯಿತು. ಅಡಿಗೆಯ ಆಳು ಚಹದ ಬಟ್ಟಲುಗಳನ್ನು ತುಂಬಿಕೊಂಡು 'ಟ್ರೇ'ಯನ್ನು ಸ್ಟೂಲಿನ ಮೇಲಿಟ್ಟು ಹೋಗುವಾಗ ವೆಂಕಟೇಶ- "ಏನಾದರೂ ತಿನ್ನಲಿಕ್ಕೆ ಕಳಿಸು" ಎಂದು ಕಿಟಕಿಯಲ್ಲಿ ಕೇಳಲು "ಅಡಿಗೆ ಸಿದ್ಧವಾಗಿದೆ" ಎಂದುತ್ತರ ಬಂದಿದ್ದರಿಂದ ಇಬ್ಬರೂ ಚಹ ಕುಡಿದರು. ಗೆಳೆಯನಿಗೆ ವಿಶ್ರಾಂತಿ ತೆಗೆದುಕೊಳ್ಳಲು ಹೇಳಿ ವೆಂಕಟೇಶ ಮರೆಯಾದ. ವಿಶ್ವಾಸ ಏಕೋ ವೇದನಾಪೂರ್ಣನಾದ. ಬೆರಗುಗಣ್ಣುಗಳಿಂದ ಆ ಕೋಣೆಯನ್ನು ನಿರುಕಿಸಿದ. ಕಾಲೇಜ ಜೀವನದಲ್ಲಿ ಕೇವಲ ಮಂಕು ಮೂರ್ತಿಯಾದ ವೆಂಕಟೇಶನಿಗೂ ಇಂದಿನ ಸಂಪನ್ನ ಮೂರ್ತಿಗೂ ಹೊಂದಿಸಿ ನೋಡಿದ. "ಪುಸ್ತಕದ ವೈರಿ ಇಂದು ವೈಭವ ಶಿಖರಕ್ಕೇರಿರುವ. ಕಾವ್ಯೋಪಾಸನಾಗಿ ನಾನು ದರಿದ್ರನಾಗಿಬಿಟ್ಟೆ. ನನ್ನ ಬಾಳಿಗೆ ಯಾವ ಅರ್ಥವಿದೆ? ಆದರೆ ನನ್ನ ಬಾಳಿನ ಅರ್ಥವನ್ನು ತಾರಾ ಮಾಡಿಕೊಂಡಿದ್ದಾಳೆ. ನನ್ನ ಕಷ್ಟ ಅವಳಿಗೆ ಅರ್ಥವಾಗಿದೆ. ಆದರೆ ಅದಕ್ಕಾಗಿ ಅವಳು ತೆರುತ್ತಿರುವ ತ್ಯಾಗವೆಷ್ಟು?.. ಮನೋರಮೆ ಸುಖವಾಗಿದ್ದಾಳೆ. ಆದರೆ ಅವಳ ಮುಖ ಪರಿಪೂರ್ಣವಾದ ಸುಖವಿಲ್ಲದೆ ಕಾತರಿಸುತ್ತದೆ. ಏಕೆ?..ಅವಳ ಬಾಳಿನಲ್ಲಿ ಯಾವ ಕೊರತೆಯಿದೆ?....ಯಾವ ಕೊರತೆ ಇದೆ?...."

"ಒಳಗೆ ಹೋಗೋಣ ವಿಶ್ವಾಸ. ತಾಟು ಹಾಕಿದೆ" ಎನ್ನುತ್ತ ವೆಂಕಟೇಶ ಬಂದದ್ದರಿಂದ ವಿಶ್ವಾಸ ಒಮ್ಮೆಲೆ ಎದ್ದು ನಿಂತ. ಅಡಿಗೆ

ಮನೆಗೆ ಹೊಂದಿಕೊಂಡಿರುವ ನಡುಮನೆಯಲ್ಲಿ ಸ್ವಚ್ಛವಾದ ಎರಡು ಮಣೆಗಳ ಎದುರಿಗೆ ಎರಡು ಬೆಳ್ಳಿಯ ತಾಟುಗಳನ್ನು ಹಾಕಲಾಗಿತ್ತು. ಅನ್ನವನ್ನುಳಿದು ಎಲ್ಲ ವ್ಯಂಜನ ಪದಾರ್ಥಗಳನ್ನು ಬಡಿಸಿಯಾಗಿತ್ತು. ಬೆಳ್ಳಿಯ ತಂಬಿಗೆಗಳಲ್ಲಿ ನೀರು ತುಂಬಿ ಇರಿಸಲಾಗಿತ್ತು. ಬೆಳ್ಳಿಯ ಚೆಂಬುಗಳೆರಡು ತಂಬಿಗೆಗಳ ಮಗ್ಗುಲಲ್ಲಿ ಲಕಲಕ ಹೊಳೆಯುತ್ತಿದ್ದವು. ಆ ತಾಟುಗಳೆದುರಿಗೆ ಸ್ವಲ್ಪ ದೂರದಲ್ಲಿ ಹೂವಿನ ಎಸಳುಗಳಲ್ಲಿ ಎರಕ ಹೊಯ್ದ ವಿದ್ಯುದ್ದೀಪದ ಸ್ಟ್ಯಾಂಡು ಪ್ರಕಾಶವನ್ನು ಬೀರುತ್ತಿತ್ತು. ವಿಶ್ವಾಸ ಇದೆಲ್ಲವನ್ನೂ ಬೆಕ್ಕಸ ಬೆರಗಾಗಿ ನೋಡುತ್ತ ಮಣೆಯ ಮೇಲೆ ಕುಳಿತು ಕೊಳ್ಳುತ್ತಲೇ ಗೆಳೆಯನನ್ನುದ್ದೇಶಿಸಿ– "ಈ ಊರಲ್ಲಿ ವಿದ್ಯುದ್ದೀಪಗಳಿರು ವಂತೆ ತೋರುವದಿಲ್ಲ. ಆದರೆ...."

"ನನ್ನ ಮನೆಗಾಗಿ ಈ ಏರ್ಪಾಟನ್ನು ಸ್ವಂತ ಖರ್ಚಿನಿಂದ ಮಾಡಿ ಕೊಂಡಿದ್ದೇನೆ" ನಗುತ್ತ ಹೇಳಿದ ವೆಂಕಟೇಶ.

"ನೀನು ಬಹಳ ದೈವಾನನಪ್ಪ ವೆಂಕಟೇಶ" ಎಂದು ವಿಶ್ವಾಸ ಆನಂದದಿಂದ ನುಡಿದ. ಗಮಗಮಿಸುವ ಸಣ್ಣಕ್ಕಿಯ ಅನ್ನವನ್ನು ಅಡಿಗೆ ಯವನು ನೀಡಿ ಹೋದ. ಆ ವಾಸನೆ ವಿಶ್ವಾಸನ ಮೂಗಿಗೆ ತಾಗಿದಾಗ ಮನೆಯಲ್ಲಿ ಮಕ್ಕಳು ದಿನಾಲು ತಿನ್ನುತ್ತಿರುವ ಕದನ್ನದ ನೆನಪಾಯಿತು. ಬಾದಾಮಿ ಬಣ್ಣದ ರೇಶಿಮೆಯ ಪತ್ತಲವನ್ನು ಗೋಲಾಕಾರವಾಗಿ ಸುತ್ತಿ ಕೊಂಡು ಅದೇ ಬಣ್ಣದ ರವಕೆಯನ್ನು ತೊಟ್ಟುಕೊಂಡ ಮನೋರಮೆ ಬೆಳ್ಳಿಯ ಪಾತ್ರೆಯಲ್ಲಿ ತುಪ್ಪವನ್ನು ತಂದಳು. ಅವಳ ಮೊಗ ತುಂಬಾ ಪ್ರಫುಲ್ಲಿತವಾಗಿತ್ತು. ಅವಳು ಅಪೂರ್ವ ಸುಂದರಿಯಾಗಿ ಶೋಭಿಸುತ್ತಿದ್ದಳು. ಹೆಂಡತಿಯ ಈ ಲಾವಣ್ಯವನ್ನು ಎಂದೂ ನೋಡದವನಂತೆ ವೆಂಕಟೇಶ ಅವಳನ್ನು ಕಣ್ಣು ತುಂಬಾ ನೋಡಿ– "ಕವಿಗಳ ಪ್ರಭಾವ ಜಡ ವಸ್ತು ಗಳಲ್ಲೂ ಚೇತನ ತುಂಬುತ್ತದೆ ವಿಶ್ವಾಸ" ಎಂದು ಅವಳನ್ನು ಮತ್ತೊಮ್ಮೆ ಹುಬ್ಬೇರಿಸಿ ನೋಡಿದ.

"ನಿಮ್ಮ ಗೆಳೆಯರ ಕವನಗಳನ್ನು ನೀವು ಕೇಳಬೇಕಿತ್ತು. ಹೂವಿನ

ಹಳ್ಳಿಯ ಜನ ಇಂದು ರಸಗಡಲಿನಲ್ಲಿ ತೇಲಿಬಿಟ್ಟರು" ಅವಳು ಅಭಿಮಾನ ದಿಂದ ಹೇಳಿದಳು.

"ಇದಕ್ಕೆ ನೀನೆ ಸಾಕ್ಷಿ ಮನೂ."

"ಅವರ ಪ್ರಭಾವವೇ ಅಂತಹದು."

"ಕವಿಗಳ ವರ್ಚಸ್ಸು ನಿನ್ನ ಮೇಲೆ ತುಂಬಾ ಬಿದ್ದಂತೆ ಕಾಣುತ್ತದೆ."

ಮನೋರಮೆಗೆ ಈ ಮಾತು ರುಚಿಸಲಿಲ್ಲ. –"ಅವರ ವರ್ಚಸ್ಸಿಗೆ ಒಳಗಾಗದ ಅರಸಿಕರು ಹೂವಿನ ಹಳ್ಳಿಯಲ್ಲಿಯೇ ಇಲ್ಲ. ನನಗೆ ಆ ಕವನಗಳು ಬಹಳ ಹಿಡಿದವು."

"ನನ್ನ ಕವನಗಳು ಮನಸ್ಸು ಹಿಡಿಯುವ ಕವನಗಳಲ್ಲ ಮನೋ ರಮಾಬಾಯಿ. ಮನಸ್ಸನ್ನು ಕೊರೆಯುವ ಗೀತೆಗಳವು. ಕೇಳಿದವರಿಗೂ ಸುಖವಿಲ್ಲ. ಹೇಳಿದವರಿಗೂ ಸುಖವಿಲ್ಲ."

"ಚಂದ್ರನಿಗೆ ತಾನು ಬೀರುತ್ತಿರುವ ಬೆಳದಿಂಗಳಿಂದ ಯಾವ ತಂಪೂ ತಗಲದಿರುವದು ಸ್ವಾಭಾವಿಕವಷ್ಟೆ?" ಮನೋರಮೆಯ ಈ ಮಾತನ್ನು ವಿಶ್ವಾಸ ಬಹಳವಾಗಿ ಮೆಚ್ಚಿದ. ವೆಂಕಟೇಶನಿಗೆ ಈ ಮಾತು ಅರ್ಥವಾ ದಂತೆ ತೋರಲಿಲ್ಲ. "ಕವಿಗಳು ಹಸಿದಿದ್ದಾರೆ. ನಿನ್ನ ಮಾತಿನಿಂದಲೇ ಅವರ ಹೊಟ್ಟೆ ತುಂಬಿಸಬೇಡ."

ಮನೋರಮೆ ಅಡಿಗೆಯವನನ್ನು ಕೂಗಿ ಇನ್ನಿಷ್ಟು ಸೀಕರಣೆ ಹಾಕು ವಂತೆ ಹೇಳಿದಳು. ವೆಂಕಟೇಶನ ಮಾತಿನ ಸರಣಿ ಅವಳಲ್ಲಿ ಭೀತಿಯನ್ನೇ ಹುಟ್ಟಿಸಿತು. ಊಟವಾದ ಮೇಲೆ ಗೆಳೆಯರಿಬ್ಬರೂ ಹೊರಗಿನ ಕೋಣೆ ಯಲ್ಲಿ ತಾಂಬೂಲ ಸೇವನೆಗೆ ಕುಳಿತರು. ಆ ವೇಳೆಗೆ ಗುಮಾಸ್ತೆ ಜೀವಣ್ಣ ಬಂದಿದ್ದರಿಂದ ವೆಂಕಟೇಶ ಅವನನ್ನು ಇನ್ನೊಂದು ಕೋಣೆಗೆ ಕರೆದೊಯ್ದ. ಅವರ ಮಾತು ಅಲ್ಲಿ ಬಿಸಿಬಿಸಿಯಾಗಿ ನಡೆಯಿತು.

"ಈ ಸಾವಿರ ರೂಪಾಯಿ ನಿಮ್ಮಪ್ಪ ಕೊಡುವನೇನು? ಮೊನ್ನೆ ಐದುನೂರು ರೂಪಾಯಿ ನೀರಿನಲ್ಲಿ ಹಾಕಿದಿ. ಈ ದಿನ ಮತ್ತೆ ಅದೇ ಮಾತು."

"ಕ್ಷಮಿಸಬೇಕು ಧನಿಯರೆ. ಸ್ವಲ್ಪ ಅಲಕ್ಷದಿಂದ ಹೀಗಾಯಿತು."

"ಅಲಕ್ಷತನವೆ? ಒಡೆಯರ ಗಂಟನ್ನು ಮುಳುಗಿಸುವ ಕುತಂತ್ರವಿದು. ಮನೆಯಲ್ಲಿ ಅತಿಥಿಗಳಿಲ್ಲದಿದ್ದರೆ ನಿನ್ನ ದವಡೆಗೆ ಹೊಡೆಯುತ್ತಿದ್ದೆ. ಹಾಳಾಗಿ ಹೋಗು. ಲಕ್ಷದಲ್ಲಿರಲಿ. ಇದೇ ಕೊನೆಯ ಸಲ. ಆ ವ್ಯಾಪಾರಿಗಳೊಡನೆ ಕುತಂತ್ರ ಹೂಡಿದ್ದು ಇನ್ನೊಮ್ಮೆ ಕಂಡು ಬಂದರೆ...."

"ನಾನು ಅವರೊಡನೆ...."

"ನನಗೆಲ್ಲ ಗೊತ್ತಿದೆ ಹೋಗು. ಸುಮ್ಮನೆ ನಡೆ. ಇಲ್ಲದಿದ್ದರೆ ಒದೆತ ತಿಂದೀ" ಎಂದು ಜೀವಣ್ಣನನ್ನು ಕೆಕ್ಕರಿಸಿ ನೋಡುತ್ತ ಹೊರಬಿದ್ದ ವೆಂಕಟೇಶ. ಇಂತಹ ಚರ್ಚೆಯನ್ನು ಮನೋರಮೆ ದಿನಾಲು ಕೇಳುತ್ತಿದ್ದರೂ ಈದಿನ ಅತಿಥಿಗಳೆದುರಿಗೆ ಇದು ಇನ್ನೂ ವಿಕೋಪಕ್ಕೆ ಹೋಗಬಾರದೆಂದು ಆಗಲೇ ಬಾಗಿಲಿಗೆ ಬಂದಿದ್ದಳು. ಕಣ್ಣು ಕೆಂಪಗೆ ಮಾಡಿಕೊಂಡು ಹೊರಬಿದ್ದ ಪತಿಯನ್ನೂ, ಕಣ್ಣೀರು ಸುರಿಸುತ್ತ ಅಲ್ಲಿಯೇ ನಿಂತ ಜೀವಣ್ಣನನ್ನೂ ಅವಳು ಒಮ್ಮೆಲೇ ನೋಡಿದಳು. "ಸುಮ್ಮನೆ ಏಕೆ ಅವನ ಜೀವ ತಿನ್ನುತ್ತೀರಿ? ಮತ್ತೆ ಬೇರೆ ಸಮಯವಿಲ್ಲವೆ?"

"ಅವನು ನನ್ನ ಜೀವವನ್ನೇ ತಿನ್ನುತಿದ್ದಾನೆ ಮುಠ್ಠಾಳ"

"ಮಕ್ಕಳೊಂದಿಗೆ ಪಾಪ! ಏ ಜೀವಣ್ಣ, ಹೊತ್ತಾಗಿದೆ ಊಟಕ್ಕೆ ಹೋಗು."

ಜೀವಣ್ಣ ಕಣ್ಣೀರು ಸುರಿಸುತ್ತ ಹೊರಟು ಹೋದ. ಸಿಟ್ಟಿನ ವೆಂಕಟೇಶನ ತಲೆ ಕಾಯಿಸುತ್ತಿರುವಾಗ ರಜಾಕ್‌ಸಾಹೇಬ ಗೆಲುವಿನ ಹೆಜ್ಜೆಗಳನ್ನು ಹಾಕುತ್ತ ಒಳಗೆ ಬಂದು ದನಿಯರ ಕೈಯಲ್ಲಿ ಹಣದ ಚೀಲವನ್ನಿತ್ತು- "ನಾಳೆ ಮತ್ತೆ ಹನ್ನೆರಡು" ಎಂದ.

"ಅಚ್ಛಾ! ನಿನ್ನ ಕೈಚಳಕವೂ ಈ ಮುತ್ಸಾಳನಲ್ಲಿಲ್ಲ."

"ಪರದೇಶಿ ಸಿಗದಿದ್ದರೂ ದೇಶಿಯಾದರೂ...."

"ಸರಿ-ಸರಿ. ಕುಡಿಯುವ ಮಕ್ಕಳಿಗೆ ಯಾ ದೇಶವೇನು?" ಎಂದು ವೆಂಕಟೇಶ ಸಮಾಧಾನದಿಂದ ನಕ್ಕ. ಅವನ ಕೋಪವೆಲ್ಲ ಶಾಂತವಾಗಿತ್ತು- "ರಜಾಕ ಮೊದಲು ಊಟಮಾಡು. ಆ ಮೇಲೆ ನನ್ನ ಹಾಸಿಗೆ ಸಿದ್ಧಪಡಿಸು" ಎಂದು ಹೇಳಿ ಅವನು ಆನಂದದಿಂದ ವಿಶ್ವಾಸನ ಬಳಿ ಬಂದ- "ಈ ನೌಕರಿಯುವರನ್ನು ಸಂಬಾಳಿಸುವದೇ ಕಠಿಣವಾಗಿದೆ. ಈ ಜೀವಣ್ಣ ಮೊದಮೊದಲು ಬಹಳ ಪ್ರಾಮಾಣಿಕನಿದ್ದ. ಈಗ ಅವನ ಬುದ್ಧಿ ಸರಿಯಾಗಿಲ್ಲ. ನೋಡುವಷ್ಟು ನೋಡುವದು. ಆ ಮೇಲೆ ಕತ್ತು ಹಿಡಿದು ದಬ್ಬುವದು. ಈ ವ್ಯವಹಾರಕ್ಕೆ ಸಾವಿರ ಕಣ್ಣೂ ಸಾಲುವದಿಲ್ಲ. ಎಲ್ಲವನ್ನೂ ನಾನೊಬ್ಬನೇ ಹೇಗೆ ನೋಡುವದು?" ಎಂದು ಎಲೆಗೆ ಸುಣ್ಣ ಹಚ್ಚಿದ.

ವಿಶ್ವಾಸನಿಗೆ ಏನೂ ತಿಳಿಯದ್ದರಿಂದ- "ವ್ಯವಹಾರದ ಜವಾಬುದಾರಿ ಮತ್ತೆ" ಎಂದು ಸುಮ್ಮನಾದ.

ನಿಮ್ಮ ಶಾಲೆಯಲ್ಲಿ ಶಿಕ್ಷಕರೆಷ್ಟು ಮಂದಿ? ಹುಡುಗರ ಸಂಖೆ ಬೆಳೆದಿರಬಹುದಲ್ಲ?" ಎಂದು ಮಾತಿನ ಓಘವನ್ನು ಬೇರೆಡೆಗೆ ಬದಲಾಯಿಸಿದ ವೆಂಕಟೇಶ.

"ನಾನು ಆ ಶಿಕ್ಷಕ ವೃತ್ತಿಯನ್ನು ಬಿಟ್ಟೆ ವೆಂಕಟೇಶ."

"ಃ? ನನಗೆ ಗೊತ್ತಿಲ್ಲ ಬಿಡು. ಒಮ್ಮೆ ನಿಮ್ಮ ಅಣ್ಣ ಭೆಟ್ಟಿಯಾದಾಗ ಹೇಳಿದ್ದರು."

"ನನಗೆ ಆವೃತ್ತಿ ಒಗ್ಗಲಿಲ್ಲ ಗೆಳೆಯ."

"ಹಾಗಾದರೆ ಈಗೇನು ಮಾಡುತ್ತಿರುವೆ?" ವಿಶ್ವಾಸ ಸುಮ್ಮನೆ ನಕ್ಕು

ಬಿಟ್ಟ– "ಅಲ್ಲೋ ಹುಚಪ್ಪ ಈ ಮಾತನ್ನು ನೀನು ನನಗೆ ಮೊದಲೇ ಹೇಳಿದ್ದರೆ ನಿನ್ನನ್ನು...."

"ಈಗಲೂ ಕಾಲ ಮಿಂಚಿಲ್ಲ ವೆಂಕಟೇಶ."

"ಆದರೆ ಈ ಕೆಲಸ ಕವಿಗಳಿಗೆ ಒಗ್ಗುವಂತಹದಲ್ಲ. ವಿಚಾರ ಮಾಡು."

"ನಾನು ಉಪವಾಸ ಸತ್ತು ಹೆಂಡಿರು ಮಕ್ಕಳನ್ನು...."

"ಆ್ಞ? ನಿನಗೆ ಎಷ್ಟು ಮಕ್ಕಳು ಈಗ?"

"ಒಂದು ಗಂಡು ಒಂದು ಹೆಣ್ಣು."

"ಮಕ್ಕಳೆಂದರೆ ಇವಳು ಪ್ರಾಣ ಕೊಡುತ್ತಾಳೆ. ಅವಳ ದೈವಕ್ಕೆ ಒಂದೂ ಆಗಬಾರದೆ?"

"ಈಗೇನು ನೀನು ಮುದುಕನಾದೆಯಾ?" ವೆಂಕಟೇಶ ಅಸಮಾಧಾನದಿಂದ ನಕ್ಕ.

ಆ ರಾತ್ರಿ ಗೆಳೆಯರಿಬ್ಬರೂ ಬಹಳ ಹೊತ್ತಿನ ವರೆಗೆ ಮಾತನಾಡಿದರು. ವಿಶ್ವಾಸ ತನ್ನ ಬಾಳನ್ನು ತೋಡಿಕೊಂಡ. ವೆಂಕಟೇಶನಿಗೆ ಸಹಾಯ ಮಾಡುವ ಮನಸ್ಸಾಗಿತ್ತು. ಆದರೂ ಅವನು ಯಾವ ನಿರ್ಧಾರವನ್ನು ಸೂಚಿಸಲಿಲ್ಲ. ತನ್ನ ಮನಸ್ಸಿನಲ್ಲಿ ಮಾತ್ರ ಏನನ್ನೊ ಗುಣಿಸುತ್ತಿದ್ದ.

ಆ ದಿನ ಬೆಳಗು ಜಾವ ತಾರಾ ಒಂದು ಕನಸು ಕಂಡಳು. ತಳಿರು ತೋರಣಗಳಿಂದ ಅಲಂಕೃತವಾದ ಸಭಾಗೃಹದ ಉನ್ನತವಾದ ವೇದಿಕೆಯ ಮೇಲೆ ನಿಂತು ವಿಶ್ವಾಸ ತನ್ನ ಸುಮಧುರ ಕಂಠದಿಂದ ಕವನ ನುಡಿಯುತ್ತಿದ್ದಾನೆ. ಜನ ತಲ್ಲೀನರಾಗಿ ಕೇಳುತ್ತಿದ್ದಾರೆ. ಪ್ರೇಕ್ಷಕರಲ್ಲಿ ಕುಳಿತ ಅವಳೂ ಮೈಮರೆತಿದ್ದಾಳೆ. ಕಣ್ಣುಗಳಿಂದ ಆನಂದಾಶ್ರು

ಹರಿಯುತ್ತಿವೆ. ಅವನ ಹಾಡು ಗಕ್ಕನೆ ನಿಂತಾಗ ಕಾರ್ಯದರ್ಶಿ ಬಂದು ಸೇವಂತಿಗಿಯ ಮಾಲೆಯನ್ನು ಅವನ ಕೊರಳಿಗೆ ಹಾಕುತ್ತಾನೆ. ಅವನು ಆ ಹಾರವನ್ನು ಕೈಯಲ್ಲಿ ತೆಗೆದುಕೊಂಡು- "ಈ ಮಾನ ನನಗೆ ಸಲ್ಲದು. ನನ್ನ ಸ್ಫೂರ್ತಿದೇವಿಯಾದ ನನ್ನ ಮಡದಿಗೆ ಸಲ್ಲಬೇಕು" ಎಂದು ಅವಳೆಡೆಗೆ ಹಾರದೊಂದಿಗೆ ಸಾಗಿದ್ದಾನೆ. ಆಕಸ್ಮಾತ್ತಾಗಿ ದಾರಿಯಲ್ಲಿ ಅವನನ್ನು ಯಾವನೋ ತಡೆದು ಅದನ್ನು ಕಿತ್ತುಕೊಳ್ಳಲೆತ್ನಿಸುತ್ತಾನೆ. ವಿಶ್ವಾಸ ಅದನ್ನು ಗಟ್ಟಿಯಾಗಿ ಹಿಡಿದು ಅವನೊಂದಿಗೆ ಹೋರಾಡುತ್ತಾನೆ. ಹೂವಿನ ಪಕಳೆಗಳೆಲ್ಲ ಹರಿದು ಬೀಳುತ್ತವೆ. ಕೊನೆಗವನು ಗಟ್ಟಿಯಾಗಿ ಚೀರಿ- "ತಾರಾ, ಈ ಮಾಲೆ ತೆಗೆದುಕೋ" ಎಂದು ಕೂಗುತ್ತಾನೆ. ಅವಳು ಪತಿಯ ಕೂಗನ್ನಾಲಿಸಿ ದಿಗ್ಗನೆದ್ದು ಅದನ್ನು ತೆಗೆದುಕೊಳ್ಳಲು ಮುಂದೆ ಬಂದು ಕೈಯೊಡ್ಡುತ್ತಾಳೆ. ಆ ಮನುಷ್ಯ ಮಾಲೆ ಬಿಡದಾಗುತ್ತಾನೆ. ಆ ಹೊತ್ತಿಗೆ ಸುಂದರ ಯುವತಿಯೊಬ್ಬಳು ಬಂದು ಅವನ ಕೈಯಲ್ಲಿಯ ಮಾಲೆ ಕಸಿದುಕೊಂಡು ತಾರಾನೆಡೆಗೆ ಧಾವಿಸುತ್ತಿರುವಾಗ ಆತ ಅವಳನ್ನು ಕ್ರೂರವಾಗಿ ನೋಡಿ ಕೆನ್ನೆಗೆ ಫಳೀರನೆ ಬಿಗಿಯುತ್ತಾನೆ. ಅವಳು ದೊಪ್ಪನೆ ಬಿದ್ದು ಬಿಡುತ್ತಾಳೆ.

"ಅಮ್ಮಯ್ಯ, ಬಿದ್ದು ಬಿಟ್ಟಳು" ಎನ್ನುತ್ತ ತಾರಾ ಗಡಬಡಿಸಿ ಎಚ್ಚತ್ತಳು. ಅವಳ ಸರ್ವಾಂಗವೂ ನಡುಗುತ್ತಿತ್ತು. ಆ ಭಯಂಕರವಾದ ಸ್ವಪ್ನ ಅವಳೆದೆಯನ್ನು ಕಲುಕುತ್ತಿತ್ತು. ನಾಲ್ಕು ದಿನಗಳಾದರೂ ವಿಶ್ವಾಸ ಬಾರದೆ ಇದ್ದುದರಿಂದ ಅವಳ ಮನಸ್ಸಿನಲ್ಲಿ ಇಲ್ಲದ ಸಂಶಯಗಳು ಹುಟ್ಟಿದವು. ಚಟ್ಟನೆ ಎದ್ದು ಮೊಗ ತೊಳೆದುಕೊಂಡು ತುಳಸೀ ವೃಕ್ಷದ ಮುಂದೆ ದೀಪವನ್ನು ಹಚ್ಚಿಟ್ಟು, ಪ್ರದಕ್ಷಿಣೆ ಹಾಕಿ ಪತಿ ಬೇಗ ಬರುವಂತೆ ಅನುಗ್ರಹಿಸಲು ಬೇಡಿಕೊಂಡಳು.

ಅವಳ ಮನಸ್ಸು ಕದಡಿ ಕಂಗೆಟ್ಟಿತ್ತು. ಮಕ್ಕಳು ಇನ್ನೂ ಹಾಸಿಗೆಯ ಮೇಲೆ ಮಲಗಿದ್ದವು. ಅವರನ್ನು ಕಣ್ಣುತುಂಬಾ ನೋಡಿ ಸರಿದು ಬಿದ್ದ ಹೊದಿಕೆಗಳನ್ನು ಮತ್ತೆ ಹೊಚ್ಚಿ ಹೊಸ್ತಿಲ ಸಾರಿಸಿ ರಂಗವಲ್ಲಿ ಹಾಕಲು ಬಾಗಿಲು ತೆಗೆದು ಹೊರಗೆ ಬಂದಳು. ಮನಸ್ಸು ಎಲ್ಲೋ

ಸುತ್ತುತ್ತಿತ್ತು. ಆದರೆ ಯಾಂತ್ರಿಕವಾಗಿ ಅವಳ ಕೈ ಹೊಸ್ತಿಲ ಸಾರಿಸುವ ಕೆಲಸ ಮಾಡುತ್ತಿತ್ತು. ರಂಗೋಲೆಯ ಎಳೆಗಳನ್ನು ಯಾವಾಗ ತೀಡಿದ ಳೆಂಬ ಅರಿವೇ ಅವಳಿಗಿರಲಿಲ್ಲ. ಅವಳ ಮನಸ್ಸು ಮತ್ತೆ ಮತ್ತೆ ಕನಸಿನ ದೃಶ್ಯವನ್ನು ಮೆಲುಕಾಡಿಸುತ್ತಿತ್ತು. ರಂಗೋಲೆಯನ್ನು ತೀಡಿ ಮೇಲೇಳುವ ಹೊತ್ತಿಗೆ ಬಿಸ್ಕೀಟು ಮಾರುವ ಮೋದಿನಸಾಬ ಅವಳಿಗೆ ಕಾಣಿಸಿಕೊಂಡ. ಪ್ರತಿ ನಿತ್ಯ ಇದೇ ವೇಳೆಗೆ ಆ ಓಣಿಯಲ್ಲಿ ಹಾಡುತ್ತ ಸಾಗುವ ಆ ಸಂಚಾರಿ ವ್ಯಾಪಾರಿಯನ್ನು ಅವಳು ಮನಸ್ಸಿನಲ್ಲಿಯೇ ಶಪಿಸುತ್ತಿದ್ದಳು. ಅವನ ಹಾಡಿಗೆ ಮನಸೋತ ಮಕ್ಕಳು ಬಿಸ್ಕೀಟು ಕೊಡಿಸೆಂದು ಕೇಳು ತ್ತಿದ್ದರು. ಅವಳು ಏನಾದರೂ ನೆವ ಹೇಳಿ ಅವುಗಳನ್ನು ಸಂತೈಸುತ್ತಿ ದ್ದಳು. ಇಂದು ಮತ್ತೆ ಅವನೇ– "ಕುರುಕುರು ಬಿಸ್ಕೀಟಾ। ಬಿಸಿಬಿಸಿ ಬಿಸ್ಕೀಟಾ। ಮೇಲಗಾಡಿಗೆ ಬಂದೇನ್ರಿ। ತಾಜಾ ಬಿಸ್ಕೀಟ ತಂದೇನ್ರಿ। ದುಡ್ಡಿಗೊಂದು ಕೊಡತೇನ್ರಿ। ಆಣೆಗೆ ನಾಲ್ಕು ಕೊಡತೇನ್ರಿ।" ಎಂದು ಮನ ವೊಲಿಸುವ ಹಾಡನ್ನು ಹಾಡುತ್ತ ಬರುತ್ತಿರಲು ಅವಳಿಗೆ ಹೆಚ್ಚಿನ ಸಂಕ ಟವೇ ಆಯಿತು. ಅವಳ ಅಂಜಿಕೆ ತಪ್ಪಾಗಿರಲಿಲ್ಲ. ಸಾಬನ ದನಿಯನ್ನು ಕೇಳಿ ಕಿರಣ ಎಚ್ಚತ್ತು ಓಡುತ್ತ ಬಂದು– "ಅವ್ವಾ, ಬಿಚ್ಚೀಟು ಕೊಡಿಸು" ಎಂದ. ಉಷಾ ಕಣ್ಣು ತಿಕ್ಕಿಕೊಳ್ಳುತ್ತ ಓಡಿ ಬಂದು ಬಿಸ್ಕೀಟಿಗಾಗಿ ಕಾಡಹತ್ತಿದಳು.– "ಸುಡುಗಾಡ ಬಿಸ್ಕೀಟು ತಿಂತಾರ್‍ರೇನೊ ಹುಚ್ಚಗೊಳ್ರ್ಯಾ. ಇಂದ ಸಂಜೆಗೆ ಅವರು ಬರತಾರ. ನಿಮಗೆ ಬಿಸ್ಕೀಟು ತರತಾರ, ಬೇಕಾದಷ್ಟು ತಿನ್ರಿ ಆತಿಲ್ಲೊ?" ಎಂದು ಬುರುಡೆ ಉರುಳಿಸಿದ ಅವಳ ಮನಸ್ಸು ಅಳುಕಿತು. ಹುಡುಗರು ನಿರಾಸೆಯಿಂದ ಸಾಬಿಯನ್ನು ನೋಡಿ ದರು. ಒಂದು ಚಿಮಣೀ ಡಬ್ಬಿಗೆ ಸುತ್ತಲೂ ಗಾಜು ಕೂಡಿಸಿ ಅದನ್ನು ಕೊರಳಿಗೆ ಹಾಕಿಕೊಂಡ ಅವನು ಬಣ್ಣಬಣ್ಣದ ಹಾಳೆಗಳಲ್ಲಿ ಬೀಸ್ಕೀಟು ಗಳ ಪೊಟ್ಟಣ ಮಾಡಿ ಒಳಗಿಟ್ಟಿದ್ದ. ಕೈಯಲ್ಲಿ ಅಂಥವೇ ಕೆಲವು ಪುಡಿಕೆ ಹಿಡಿದಿದ್ದ. ಗರಿಗರಿಯಾದ ವಿಲಕ್ಷಣ ಟೊಪ್ಪಿಗೆ ಹಾಕಿಕೊಂಡಿದ್ದ. ಅವನ ದನಿ– "ಬೆಣ್ಣಿ ಬಿಸ್ಕೀಟಾ। ಬಟಾರ ಬಿಸ್ಕೀಟಾ" ದೂರದೂರ ಸಂಯಿತು. ಮಕ್ಕಳು ನಿರಾಸೆಯಿಂದ ಒಳಗೆ ಸರಿದವು. ಶಾರದಾನ ಕತ್ತು ತುಂಬಿ ಬಂತು. ಅವಳು ಭಾರವಾದ ಹೆಜ್ಜೆಗಳನ್ನೆಳೆಯುತ್ತ ಒಳಗೆ ಸರಿದಳು.

ಅವಳು ಇನ್ನೂ ಪಡಸಾಲೆಯನ್ನು ತಲುಪಿರಲಿಲ್ಲ. ಹೊರಗೆ ಕಾಲು ಸದ್ದಾಯಿತು. ಹಿಂದಿರುಗಿ ನೋಡುವಾಗ ಮನೆಯ ಯಜಮಾನರ ಸವಾರಿ ಬಾಗಿಲಿಗೆ ಬಂದಿತ್ತು. ಈ ನಾಲ್ಕು ದಿನಗಳಲ್ಲಿ ಅವರು ಬಂದದ್ದು ಮೂರನೆಯ ಸಲ. ತಾರಾ ವಿನಯದಿಂದ– "ಅವರು ಇನ್ನೂ ಊರಿನಿಂದ ಬಂದಿಲ್ಲ ಯಜಮಾನರೆ" ಎಂದಳು.

"ಅದಕ್ಕೆ ನಾನೇನು ಮಾಡಲಿ? ಅವರು ಊರಿನಿಂದ ಬರುವದೇ ಇಲ್ಲ."

"ಇಷ್ಟು ದಿನ ತಡೆದಿರುವಿರಿ. ಇನ್ನೊಂದು ನಾಲ್ಕು ದಿನ...."

"ಈ ಮಾತುಗಳನ್ನು ಆರು ತಿಂಗಳಿಂದಲೂ ಹೇಳುತ್ತಿರುವಿರಿ. ನಿಮಗೆ ಭಾಡಿಗೆ ಕೊಟ್ಟದ್ದೇ ನನ್ನ ಮೂರ್ಖತನವಾಗಿದೆ."

"ನಿಮ್ಮ ಬಾಡಿಗೆ ನಾವು ಮುಳುಗಿಸುವ ಅಧೈರ್ಯವೆ?"

"ಹಿಂದಿನ ಬಾಡಿಗೆಗೆ ನಾನು ನೀರು ಬಿಟ್ಟಿದ್ದೇನೆ ತಾರಾಬಾಯಿ. ನನಗೆ ಮುಂದಿನ ಬಾಡಿಗೆಯ ಚಿಂತೆ. ನನ್ನ ಮನೆ ಧರ್ಮಶಾಲೆಯಾಗ ಬಾರದಷ್ಟೆ?"

"ಅವರಿಲ್ಲದಾಗ ನಾನೊಬ್ಬಳೇ ಏನು ಮಾಡಲಿ? ಹಣವೆಲ್ಲಿಂದ ತಂದು ಕೊಡಲಿ. ಸ್ವಲ್ಪ ನಿಧಾನಿಸಿ."

"ನಿಧಾನಿಸಿ ನನಗೆ ಸಾಕಾಗಿದೆ. ಬೇಕಾದಾಗ ಚಕ್ಕಂದ ಮಾಡಲಿಕ್ಕೆ ಬರುತ್ತದೆ. ಆದರೆ ಬಾಡಿಗೆ ಕೊಡಲು ನಿಮ್ಮ ಕೈ ಏಳುವದಿಲ್ಲ." ಈ ಮಾತಿನ ಮೊನೆ ತಾರಾನ ಹೃದಯವನ್ನೇ ಇರಿಯಿತು. ಅವಳ ಕಣ್ಣು ಹನಿಗೂಡಿದವು. ಹೆಂಗಸಿನ ಕಣ್ಣೀರನ್ನು ಕಂಡು ಅವರು ಕರಗಿದರೋ, ಇಲ್ಲವೆ ವಿಶ್ವಾಸ ಬಂದೊಡನೆ ಕತ್ತು ಹಿಡಿದು ದಬ್ಬುವ ನಿರ್ಧಾರ ಮಾಡಿತೋ ಅಂತೂ ಅವರು ಬಿರಬಿರನೆ ಹೊರಟು ಹೋದರು. ಅದೇ ವೇಳೆಗೆ "ಶನಿವಾರ ಸಂತೆ! ಬಡವರಿಗೆ ಬಹು ಚಿಂತೆ" ಎಂದು

ಹಾಡುತ್ತ ದಾಸಯ್ಯ ಬಾಗಿಲಿಗೆ ಬಂದ. ತಾರಾ ಒಳಗೆ ಹೋಗಿ ಒಂದಿಷ್ಟು ಹಿಟ್ಟು ತಂದು ನೀಡಿದಳು. ಅವನು ಮರೆಯಾಗುತ್ತಲೇ ಸಂತೆಯ ಚಿಂತೆ ಅವಳನ್ನು ಬಾಧಿಸಿತು. ಕೈಯಲ್ಲಿ ಕಾಸಿಲ್ಲದೆ ಸಂತೆ ಮಾಡುವದು ಅವಳಿಗೊಂದು ಸಮಸ್ಯೆಯೇ ಆಯಿತು.

ಮತ್ತೆ ನಾಲ್ಕು ದಿನಗಳು ಸರಿದವು. ವಿಶ್ವಾಸ ಇನ್ನೂ ಬರಲಿಲ್ಲ. ನೆರೆಮನೆಯ ರೈತನ ಹೆಂಡತಿ ನಿಂಗವ್ವನಿಂದ ಎರಡು ರೂಪಾಯಿ ಕಡ ತಂದು ಚಿಲ್ಲರೆ ಸಾಲ ಮುಟ್ಟಿಸಿದಳು. ಹೊಲಿಗೆಯಿಂದ ಬಂದ ಮೂರು ರೂಪಾಯಿಗಳು ಸಂತೆಯ ಖರ್ಚನ್ನು ಬಾಯಿಗೂಡಿಸಿದವು.

ಮತ್ತೆ ಎರಡು ದಿನ ಸರಿದವು. ಗಂಡನ ಸುಳಿವೇ ಇಲ್ಲ. ತಾರಾ ನಿಜವಾಗಿಯೂ ಬೆದರಿದಳು. ಹೋಗುವಾಗಿನ ಅವನ ಮನಸ್ಥಿತಿಯನ್ನು ನೆನೆದ ಮೇಲಂತೂ ಅವಳ ಹೆದರಿಕೆ ಇನ್ನೂ ಹೆಚ್ಚಾಯಿತು. ದಾರಿದ್ರ್ಯ ಜೀವನಕ್ಕೆ ಬೇಸತ್ತು ಅವನು ಮನಬಂದತ್ತ ಅಲೆಯುತ್ತಿದ್ದಾನೆಂದು ಅವಳು ವ್ಯಸನಾಕ್ರಾಂತಳಾದಳು. ಆ ಸ್ವಪ್ನ ಬೇರೆ ಅವಳನ್ನು ನೆರಳಿನಂತೆ ಕಾಡುತ್ತಲಿತ್ತು. ತಾನು ಒತ್ತಾಯದಿಂದ ಅವನನ್ನು ಕಳುಹಿಸಬಾರದಿತ್ತೆಂದು ಹಳಹಳಿಸಿದಳು. ಅವಳಿಗೊಮ್ಮೆ ಅಚ್ಯುತರಾಯರಿಗೆ ಎಲ್ಲವನ್ನೂ ತಿಳಿಸಬೇಕೆನ್ನಿಸಿತು. ಈ ಅವಸ್ಥೆಯಲ್ಲಿ ದಿಕ್ಕೆಟ್ಟ, ಅವಳಿಗೆ ಊಟ ರುಚಿಸದಾಯಿತು. "ಅವರು ಒಂದು ಪತ್ರವನ್ನಾದರೂ ಬರೆಯಬಾರದಿತ್ತೆ? ಈ ನಿರ್ದಯತನದಿಂದ ಯಾರಿಗೆ ಸುಖ?" ಎಂದು ಆ ಮಟ್ಟಿಗೆ ಪತಿಯ ಮೇಲೆ ಕೋಪವೂ ಮೂಡಿತು "ಚಿಗಪ್ಪ ಮೋಟಾರ ತರತಾನ ಹೌದಲ್ಲೊ ಮತ್ತ?" ಎಂದು ಕಿರಣ ತಾರಾನ ವಿಚಾರ ಸರಣಿಗೊಂದು ಎಚ್ಚರಿಕೆ ಕೊಟ್ಟ.

"ನಿನಗೊಂದು ಮೋಟಾರಿನ ದೆವ್ವ ಹಿಡಿದಿದೆ" ಎಂದು ತಾರಾ ಕವಸ್ಕನೆ ಕಿರಣನಿಗೆ ಎರಡೇಟು ಕೊಟ್ಟಳು. ಎಂದೂ ಕೈ ಎತ್ತದ ತಾಯಿಯ ಹೊಡೆತದಿಂದ ಕಿರಣ ದೊಡ್ಡದನಿಯಿಂದ ಅಳತೊಡಗಿದ. ಅವನ ಅಳು ಕೇಳಿ ಹೌಹಾರಿ ಉಷಾ ಅಣ್ಣನೊಂದಿಗೆ ತಾನೂ ಸ್ವರ ಕೂಡಿಸಿದಳು.

ತಾರಾನಿಗೆ ತುಂಬಾ ಪಶ್ಚಾತ್ತಾಪವಾಯಿತು. ಮಗನ ಮೇಲೆ ಸುಮ್ಮನೆ ಹರಿಹಾಯ್ದದ್ದು ತಪ್ಪೆಂದು ತೋರಿ ಅವನನ್ನು ಬರಸೆಳೆದು ಬೆನ್ನಮೇಲೆ ಕೈಯಾಡಿಸುತ್ತ- "ಹತ್ತಾ ಮಾಡಿದರ ಅಳತಾರೇನೊ ಹುಚ್ಚಪ್ಪ" ಎಂದು ಸಂತೈಸಿದಳು. ಕಿರಣ ತಾಯ ಮಡಿಲಲ್ಲಿ ಇನ್ನೂ ಬಿಕ್ಕುತ್ತಲಿದ್ದ. ಅವಳು ದಿಙ್ಮೂಢಳಂತೆ ಕುಳಿತ ಸ್ಥಳದಲ್ಲಿ ಕದಲದೆ ಅದೆಷ್ಟೋ ಹೊತ್ತು ಕುಳಿತಿದ್ದಳು. ಅವಳ ಜೀವನ ಬಹಳ ಹೈರಾಣಾಗಿತ್ತೆಂದು ಮೊಗ ಸಾರಿ ಹೇಳುತ್ತಿತ್ತು.

ಸಂಜೆ ತಾರಾ ಮಕ್ಕಳನ್ನು ಕರೆದುಕೊಂಡು ಮಹಾಲಿಂಗೇಶ್ವರ ಗುಡಿಗೆ ಹೋಗಿ ದೇವರ ಮುಂದೆ ದೀವಿಗೆ ಹಚ್ಚಿ, ಕಣ್ಣು ಮುಚ್ಚಿ ಅನನ್ಯ ಭಾವದಿಂದ ಪತಿಯ ಕ್ಷೇಮಚಿಂತನೆಗಾಗಿ ಪ್ರಾರ್ಥಿಸಿದಳು. ಅವನ ಬರುವಿಕೆಯ ಅನುಗ್ರಹ ದಯಪಾಲಿಸಲು ಮೊರೆಯಿಟ್ಟಳು. ಅವಳು ಕಣ್ಣು ತೆಗೆದಾಗ ಹಚ್ಚಿದ ದೀಪ ಶಾಂತವಾಗತೊಡಗಿದಂತೆ ಭಾಸವಾಗಲು ಜೋರೆಂದು ಬೆವೆತಳು; ಗದಗುಟ್ಟಿ ನಡುಗಿದಳು. ಆದರೆ ದೀಪ ಶಾಂತವಾಗಲಿಲ್ಲ. ಮತ್ತೆ ಬೆಳಗಿತು. ತಾರಾ ದೇವರಿಗೆ ಅಡ್ಡಬಿದ್ದಳು. ಅಂಗಾರವನ್ನು ತಾನು ಹಚ್ಚಿಕೊಂಡು ಮಕ್ಕಳ ನೈತುಂಬ ಸವರಿದಳು.

ದಾರಿಯಲ್ಲಿ ಅವಳಿಗೆ ದೀಪದ ವಿಚಾರ ಕಾಡುತ್ತಲಿತ್ತು. "ದೀಪ ಶಾಂತವಾಗುವಂತೆ ತೋರಿತೇಕೆ? ಮತ್ತೆ ಬೆಳಗಿತೇಕೆ? ಇದರಲ್ಲಿ ದೇವರು ನನಗೆ ಯಾವ ಸಂದೇಶ ನೀಡಿರಬಹುದು? ನನ್ನ ದೀಪ ಬೆಳಗಲಿ ತಾಯಿ. ನನ್ನವರು ಕೂಡಲೆ ಬರಲಿ ಮಹಾಲಿಂಗೇಶ್ವರ" ಎಂದು ಮೊರೆಯಿಡುತ್ತಲೆ ಮನೆ ತಲುಪಿದಳು. ಚಿಮಣಿ ಹಚ್ಚಲು ಕಡ್ಡಿಪೆಟ್ಟಿಗೆ ತೆರೆದಳು. ಆದರೆ ಅದರಲ್ಲಿ ಕಡ್ಡಿಗಳೇ ಇರಲಿಲ್ಲ. ನೆರೆಮನೆಗೆ ಹೋಗಿ ದೀಪ ಹಚ್ಚಿ ತಂದಳು. ಅದನ್ನು ಪಡಶಾಲೆಯಲ್ಲಿಟ್ಟು ಯಾವ ಕೆಲಸ ಮಾಡಲೂ ಮನಸ್ಸಾಗದೆ ಸುಮ್ಮನೆ ಕುಳಿತಳು. ದೀಪದ ಸುತ್ತಲೂ ಏರಿ ಬರುವ ಪಕ್ಕದ ಹುಳಗಳಿಗೆ ಹೆದರಿ ಉಷಾ ತಾಯ ಮಗ್ಗುಲಲ್ಲಿ ಹೋಗಿ ಕುಳಿತಳು. ಕಿರಣನಿಗೆ ತಂಗಿಯ ಭಯ ಗೊತ್ತಾಗಿ ಅವನೊಂದು ಪಕ್ಕದ ಹುಳವನ್ನು ತುದಿ ಬೆರಳುಗಳಲ್ಲಿ ಹಿಡಿದು- "ನಿನಗೆ ಕಡಸ್ತೀನಿ" ಎನ್ನುತ್ತ

ಕುಣಿದಾಡಿದ. ಉಷಾ ಅಣ್ಣನ ಪರಾಕ್ರಮಕ್ಕೆ ಹೆದರಿ ಚೀರಲಾರಂಭಿಸಿದಳು. ತಾರಾನ ಮನಸ್ಸು ಈ ಮಕ್ಕಳ ಆಟ ನೋಡಿ ನಲಿಯುವ ಸ್ಥಿತಿಯಲ್ಲಿರಲಿಲ್ಲ. ಆದಾಗಲೇ ಗಂಡನ ಸುತ್ತ ಸುಳಿಯುತ್ತಿತ್ತು.

"ತಾರಾ!" ಅವಳಿಗೆ ದನಿಯು ಪರಿಚಯವಾಗಿ ಸಮಾಧಿ ಭಂಗವಾಯಿತು. "ಬಂದರು ಕಾಣಸ್ತದ ನೋಡು ಕಿರಣ" ಎಂದು ಅವಳು ಎಚ್ಚತ್ತು ನುಡಿದಳು. "ಚಿಗಪ್ಪ ಬಂದ. ಚಿಗಪ್ಪ ಬಂದ" ಎಂದು ಕಿರಣ ಕುಣಿದಾಡಿದ. ಅವನ ಕುಣಿದಾಟಕ್ಕೆ ಹೆಚ್ಚಿನ ಕಳೆ ಏರಿದಂತೆ ತಂದೆಯ ಕೈಯಲ್ಲಿ ಅವನ ಪ್ರೀತಿಯ ಮೋಟಾರು ಶೋಭಿಸುತ್ತಿತ್ತು. ಅವನು ಸರ್ರನೆ ಅದನ್ನು ಕಸಿದುಕೊಂಡು- "ಮೋಟಾರ್. ಮೋಟಾರ್" ಎಂದು ಪಡಸಾಲೆಯ ತುಂಬ ಓಡಾಡಿದ. ಅಣ್ಣನ ಅಬ್ಬರದಿಂದ ಉಷಾ ಕಂಗೆಡುತ್ತಿರುವ ಸಮಯದಲ್ಲಿ ವಿಶ್ವಾಸ ಅವಳಿಗೊಂದು 'ಸಿಲೋಲಾಯ್ಡ'ದ ಪುಟ್ಟ ಪಾಪನನ್ನು ಕೊಟ್ಟದ್ದರಿಂದ ಅವಳ ಕುಣಿದಾಟ ಕಿರಣನ ಅಬ್ಬರವನ್ನು ಸೋಲಿಸಿತು. ವಿಶ್ವಾಸನ ನಗು ಪಡಶಾಲೆಯನ್ನು ತುಂಬಿತು. ತಾರಾ ಆಗಲೆ ಒಳಗೆ ಹೋಗಿ ದೇವರ ಮುಂದೆ ದೀಪ ಹಚ್ಚಿ, ಅರಿಷಿಣ ಕುಂಕುಮ ಏರಿಸಿ ಕುಂಕುಮದ ಬಟ್ಟನ್ನಿಟ್ಟುಕೊಂಡಳು. ಅವಳ ಕಣ್ಣು ಸಂಭ್ರಮದಿಂದ ಒದ್ದೆಯಾಗಿದ್ದವು. ಮಕ್ಕಳ ಗಲಾಟೆಯನ್ನೂ ಪತಿಯ ನಗೆಯ ಕಡಕಡಾಟವನ್ನೂ ಕೇಳಿ ಅವಳು ಹೊರಬಂದಳು. "ನೋಡಿದೆಯಾ ಇವರ ಆಟವನ್ನು" ವಿಶ್ವಾಸ ಹೆಂಡತಿಯ ಮೊಗ ನೋಡಿ ನಗುತ್ತ ಹೇಳಿದ. "ಮೋಟಾರು ಸಿಕ್ಕ ಮೇಲೆ ಇವನನ್ನು ಹಿಡಿಯುವದೇ ಕಷ್ಟ. ನಿನ್ನ ಪಾಪಾ ಎಷ್ಟು ಛಂದದನ ಉಷಾ" ಎನ್ನುತ್ತ ತಾರಾ ಮಕ್ಕಳನ್ನು ಮುದ್ದಿಸಿದಳು.

ಊಟಕ್ಕೆ ಕುಳಿತಾಗಲೂ ಕಿರಣನ ಮಗ್ಗುಲಲ್ಲಿ ಮೋಟಾರು ನಿಂತಿತ್ತು. ಅವನು ಮಲಗುವಾಗಲೂ ಅದವನ ಎದೆಯ ಮೇಲೆ ಶೋಭಿಸುತ್ತಿತ್ತು. ಉಷಾ ತನ್ನ ಪಾಪನನ್ನು ಎದೆಗವಚಿಕೊಂಡೇ ನಿದ್ದೆ ಹೋದಳು. ತಾರಾ ಆ ಆಟಿಕೆಗಳನ್ನು ತೆಗೆದಿರಿಸಿದಳು. ಮಕ್ಕಳ ತುಟಿಯ ಮೇಲೆ ನಲಿದಾಡುತ್ತಿರುವ ನಗೆಯನ್ನು ಕಂಡು ಅವಳೆದೆ ಸಂಭ್ರಮದಿಂದ ತುಂಬಿತು

ಅವರಿಗೆ ಹೊದ್ದಿಸಿ ಅವಳು ಹೊರಗೆ ಬಂದಾಗ ವಿಶ್ವಾಸ ಟ್ರಂಕನ್ನು ತೆರೆಯುತ್ತಿದ್ದ. ಪತ್ನಿಯನ್ನು ಕುತೂಹಲ ನಯನಗಳಿಂದ ನೋಡುತ್ತ ಅವನು ಟ್ರಂಕಿನೊಳಗಿನ ಒಂದೊಂದೇ ಸಾಮಾನುಗಳನ್ನು ಹೊರದೆಗೆಯ ಲಾರಂಭಿಸಿದ. ಅವಳಿಗೆ ಅವುಗಳನ್ನು ನೋಡುತ್ತಿರುವಂತೆ ತುಂಬಾ ಅಚ್ಚರಿಯಾಯಿತು. ಇವುಗಳನ್ನೆಲ್ಲ ಅವನು ಹೇಗೆ ತಂದನೆಂದು ಅವಳಿಗೆ ಕುತೂಲಹವಾಯಿತು. ಉಷಾನಿಗಾಗಿ ತಂದ ಅರ್ಧ ಡಜನ್ ಬಣ್ಣ ಬಣ್ಣದ ಲಂಗಗಳು, ಕಿರಣನಿಗಾಗಿ ತಂದ 'ಶಾವ್ಸನ್' ಕಂಪನಿಯ ಸಿದ್ಧ ವಸ್ತ್ರಗಳು, ಪ್ಯಾಂಟುಗಳು, ಅವುಗಳಿಗೆ ತಕ್ಕ ಅಷ್ಟೇ ಬುಶ್‌ಕೋಟುಗಳು ಅವಳಲ್ಲಿ ದಿಗ್ಭ್ರಮೆಯನ್ನೇ ಉಂಟು ಮಾಡಿದವು. ಅವಳ ಆಶ್ಚರ್ಯಕ್ಕೆ ಕಳಸವಿಟ್ಟಂತೆ ಮೂರು ಸೀರೆ ಪೊಟ್ಟಣಗಳು ಹೊರಬಂದವು. ಎಲ್ಲವೂ ಬೆಲೆ ಬಾಳುವಂತಹವು. ಜರದಂಚಿನಿಂದ ಮಿರುಗಿ ಹೊಟ್ಟೆಯೊಳಗೆ ಜರದ ಕಡ್ಡಿಗಳನ್ನು ತುಂಬಿಕೊಂಡು ಕಣ್ಣು ಕುಕ್ಕಿಸಿದವು. ಅವುಗಳಿಗೆ ತಕ್ಕ ಬಣ್ಣದ 'ಝುಂಪರು'ಗಳು ಮೋಹಕವಾಗಿದ್ದವು. ಅವಳು ಅವುಗ ಳನ್ನೆಲ್ಲ ನೋಡಿ ಪುಲಕಿತಳಾದರೂ ಅವುಗಳು ಬಂದ ಇತಿಹಾಸದ ಪರಿಚಯವಾಗದ್ದರಿಂದ ಸಂತೋಷಕ್ಕೆ ತಡೆಯಾಯಿತು. ಹೆಂಡತಿಯ ಮೇಲಾಗುವ ಈ ಪ್ರತಿಕ್ರಿಯೆಯನ್ನು ಅವನು ಮೊದಲೇ ಊಹಿಸಿದ್ದ ನೆಂದು ತೋರುತ್ತದೆ. ಅವಳ ಸಂದೇಹವನ್ನು ನಿವಾರಿಸಲು ಅವನು— "ತಾರಾ, ಇವೆಲ್ಲ ಮನೋರಮೆ ನನಗಿತ್ತ ಕಾಣಿಕೆಗಳು" ಎಂದ.

ಆ ಹೆಸರನ್ನು ಕೇಳುತ್ತಲೇ ತಾರಾನ ಕೈಯೊಳಗಿನ ಸೀರೆ ಜರಿದು ಬಿತ್ತು. ಅವಳ ಜೀವನದಲ್ಲಿ ಈ ಹೆಸರು ಒಮ್ಮೆ ಅತ್ಯಂತ ಕುತೂಹಲ ವೆಬ್ಬಿಸಿದ್ದರಿಂದ ಅವಳಿಗೆ ಆ ಹೆಸರಿನ ಬಗ್ಗೆ ತಿರಸ್ಕಾರವೇ ಮೂಡಿತ್ತು. ಪತಿಯನ್ನು ದಿಟ್ಟಿಸುತ್ತ ಅವಳು— "ಈ ಮನೋರಮೆಯೆಂದರೆ...."

"ನಿನ್ನ ತಿಳುವಳಿಕೆ ಸರಿಯಾಗಿದೆ. ಅವಳೇ ಇವಳು. ಮನೋರಮೆ ಈಗ ನನ್ನ ಲಕ್ಷಾಧೀಶ ಗೆಳೆಯ ವೆಂಕಟೇಶನ ಧರ್ಮಪತ್ನಿ."

"ಸಿರಿವಂತನ ಮಡದಿಯಾದ ಅವಳು ಪ್ರತ್ಯಕ್ಷ ಲಕ್ಷ್ಮಿಯ ಅವತಾರವೇ

ಆಗಿರಬಹುದು. ಆದರೆ ಅವಳಿಗೆ ಬಡವರನ್ನು ಅಣಕಿಸುವ ಅಧಿಕಾರ ವೆಲ್ಲಿಯದು?" ತಾರಾ ಕಹಿಯಾಗಿ ನುಡಿದಳು.

"ಇದರಲ್ಲಿ ಅಣಕದ ಪ್ರಶ್ನೆಯೇ ಇಲ್ಲ ತಾರಾ. ನೀನು ತಪ್ಪು ತಿಳಿದುಕೊಂಡಿದ್ದೀ. ಅವಳ ಗುಣಗಳನ್ನು ನೀನು ಕಾಣಬೇಕು" ಎಂದು ನಡೆದುದನ್ನೆಲ್ಲ ಅವಳಿಗೆ ವಿವರವಾಗಿ ಹೇಳಿ- "ಇಂದು ನಾನು ನಿರ್ಗತಿಕನಲ್ಲ ವೆಂಕಟೇಶನ ನೌಕರನಾಗಿದ್ದೇನೆ. ಅವನ ವ್ಯವಹಾರಗಳ ಮೇಲ್ವಿಚಾರಕ ನಾಗಿದ್ದೇನೆ. ಕೆಲವು ದಿನ ಕಳೆದ ಮೇಲೆ ಈ ವ್ಯವಹಾರದಲ್ಲಿ ನನಗೂ ತುಸು ಪಾಲು ಕೊಡುವ ಮಾತು ಕೊಟ್ಟಿದ್ದಾನೆ. ಅವನೂ ಒಬ್ಬಂಟಿಗ ನಾದ್ದರಿಂದ ಪ್ರಾಮಾಣಿಕ ಗೆಳೆಯನ ಆವಶ್ಯಕತೆ ಅವನಿಗೂ ಇತ್ತು. ದೈವ ಸಹಾಯದಿಂದ ನನಗೆ ಈ ಸಂಧಿ ದೊರೆತಿರುವಾಗ ನೀನು ಸಂತೋ ಷದಿಂದಿರಬೇಡವೆ? ಮನೋರಮೆ ಗಂಡನ ಮನ ಒಲಿಸಿ ಇಷ್ಟೆಲ್ಲ ಕೆಲಸ ಮಾಡಿದ್ದಾಳೆ ತಾರಾ. ಅವಳ ಔದಾರ್ಯದಿಂದಲೇ ನಾವು ಬದುಕು ವಂತಾಯಿತು. ನಾನು ಹೊರಟು ನಿಂತಾಗ ಈ ಅರಿವೆ ದಯಪಾಲಿಸಿ ಸ್ನೇಹದ ಕಾಣಿಕೆ ಇತ್ತಿದ್ದಾಳೆ. ಇದರಲ್ಲಿ ಖಂಡಿತವಾಗಿಯೂ ವ್ಯಂಗ ವಿಲ್ಲ ತಾರಾ. ನಮ್ಮ ಬಡತನ ಹಿಂಗುವ ಕಾಲ ಬಂದಾಗ...."

"ಈ ನೌಕರಿಯಿಂದ ನಿಮ್ಮ ಸಾಹಿತ್ಯಕ್ಕೆ ಅಡ್ಡಿ ಬರಲಾರದೆ?"

"ನನ್ನ ಸಾಹಿತ್ಯ ನನ್ನ ರಕ್ತದಲ್ಲೇ ಕೂಡಿರುವಾಗ ಯಾವ ನೌಕ ರಿಯೂ ಅದನ್ನು ತಡೆಯಲಾರದು ತಾರಾ."

"ನಿಮ್ಮ ಗೆಳೆಯರ ಯಾವ ವ್ಯವಹಾರದಲ್ಲಿ ಮೇಲ್ವಿಚಾರಣೆ ಮಾಡಬೇಕು.?"

"ಅಲ್ಲಿಗೆ ಹೋದ ಮೇಲೆಯೇ ಎಲ್ಲವೂ ತಿಳಿಯುವದು. ಅವನ ವ್ಯವಹಾರಗಳಿಗೆ ಲೆಕ್ಕವೇ ಇಲ್ಲ."

"ನಿಮ್ಮಿಂದ ಈ ಕೆಲಸ...."

"ಒಮ್ಮೆ ಪೆಟ್ಟು ತಿಂದು ಹೈರಾಣಾಗಿದ್ದೇನೆ. ಮತ್ತೆ ಮತ್ತೆ ಅಂತಹ ಆಘಾತಗಳನ್ನೆದುರಿಸುವೆನೆಂದು ತಿಳಿಯಬೇಡ ತಾರಾ."

ಅವನು ಮಾತು ಮುಗಿಸಿಕೊಂಡೇ ಬಂದಿರುವಾಗ ಇಲ್ಲದ ಸಂಶಯ ಕ್ಕೊಳಗಾಗುವದು ಅನುಚಿತವೆಂದು ಬಗೆದ ತಾರಾನ ಮನಸ್ಸಿನಲ್ಲಿ ತಮ್ಮ ಜೀವನ ಸುಖಕರವಾಗುವ ಸಮಾಚಾರ ಸಂತೋಷವನ್ನುಂಟು ಮಾಡಿತು. ದಾರಿದ್ರ್ಯ ಜೀವನ ಕೊನೆಗೊಂಡಿತೆಂಬ ಪತಿಯ ಸಂತೋಷದಲ್ಲಿ ಅವಳೂ ಭಾಗಿಯಾದಳು.

"ನಾನು ನಿಮಗೆ ಹೇಳಿರಲಿಲ್ಲವೆ-ನಮಗೂ ಒಳ್ಳೆಯ ದಿನಗಳು ಬರಬಹುದೆಂದು. ನನ್ನ ಮಾತೇ ನಿಜವಾಯಿತು."

"ಈ ಸೌಭಾಗ್ಯಕ್ಕೆ ಕೂಡ ನೀನೇ ಹೊಣೆಯಾಗಿರುವಿ ತಾರಾ."

"ಅದು ಹೇಗೆ ಮತ್ತೆ ನಾನು ಹೊಣೆ?"

"ನೀನು ಒತ್ತಾಯ ಮಾಡದಿದ್ದರೆ ನಾನು ಹೂವಿನ ಹಳ್ಳಿಗೆ ಹೋಗುತ್ತಿರಲಿಲ್ಲ ವೆಂಕಟೇಶನ ದರ್ಶನವಾಗದಿದ್ದರೆ ಈ ನೌಕರಿ ಸಿಗುತ್ತಿರಲಿಲ್ಲ."

"ಎಂದ ಮಾತ್ರಕ್ಕೆ ನಾನು ಹೊಣೆಯಾದಂತಾಯಿತೆ? ಈ ಹೊಸ ಜೀವನದ ಹೊಣೆ ಮನೋರಮೆಯದು."

"ಈ ಕಾರ್ಯದಲ್ಲಿ ಅವಳ ಕೈವಾಡವಿದೆಯೆಂದು ಒಪ್ಪಿದರೂ ಮೂಲ ಕಾರಣ ನೀನೇ ಎಂಬುದನ್ನು ನಾನು ಮರೆಯಲಾರೆ." ಗಂಡನ ವಿಶ್ವಾಸ ಪೂರ್ಣ ಮಾತುಗಳನ್ನು ಕೇಳಿ ತಾರಾ ಪುಲಕಿತಳಾದಳು. ಅವಳ ಹರುಷ ಮೇರೆದಪ್ಪಿ ಹರಿಯಿತು. ಹೆಂಡತಿಯ ಈ ಭಾವವನ್ನು ತಿಳಿದು ಕೊಳ್ಳಲು ವಿಶ್ವಾಸನಿಗೆ ವೇಳೆ ಹಿಡಿಯಲಿಲ್ಲ. ಮೊದಮೊದಲು ಕಹಿಯಾಗಿ ಬಂದ ಅವಳ ಮಾತನ್ನು ಕೇಳಿ ಅವನೂ ಬೆದರಿದ್ದ. ಈಗ ಆ ಮೋಡ ಚೆದರಿ ಆಕಾಶ ತಿಳಿಯಾದ್ದರಿಂದ ಉತ್ಸಾಹ ಭರಿತನಾಗಿ ಹೇಳಿದ– "ಮನೋ ರಮೆಯ ಉಪಕಾರವನ್ನು ನಾವು ನೆನೆಯಬೇಕು ತಾರಾ. ನಮ್ಮ ಬಾಳಿ ಗವಳು ಕೈ ದೀಪವಾಗಿ ಬೆಳಗಿದಳು ನೋಡು."

"ಅಂತೂ ಅವಳು ನಿಮಗೆ ಯೋಗ್ಯವಾದ ಉತ್ತರವನ್ನೇ ಕೊಟ್ಟಳು" ತಾರಾನ ತುಟಿಗಳ ಮೇಲೆ ಚಲ್ಲಾಟದ ನಗೆ ತೂಗಿತು.

"ನಿನ್ನ ಮಾತು ಅರ್ಥವಾಗಲಿಲ್ಲ."

"ಅರ್ಥ ಸ್ಪಷ್ಟವಾಗಿಯೇ ಇದೆ. ಅಂದು ನೀವವಳನ್ನು ಕಡೆಗೆಣಿಸಿದಿರಿ. ಇಂದವಳು ನಿಮ್ಮನ್ನು ಕಡೆಗೆಣಿಸಲಿಲ್ಲ."

"ಅಂದರೆ?"

"ನಿಮ್ಮ ಧರ್ಮಪತ್ನಿಯಾಗಿ ಬರಬೇಕಾಗಿದ್ದ ಅವಳನ್ನು ಕಡೆಗೆಣಿಸಿ ನನ್ನ ಕೈ ಹಿಡಿದಿರಿ. ಆ ಸೇಡನ್ನವಳು ತೀರಿಸಿದಳು. ಅವಳೆಸೆದ ಬರೆ ನಿಮಗೆ ಅರ್ಥವಾಗಿಲ್ಲ" ತಾರಾ ಅರ್ಥಪೂರ್ಣವಾಗಿ ನಕ್ಕಳು.

"ಓ, ಆ ಮಾತೊ? ಅದವಳ ಕನಸು ಮನಸ್ಸಿನಲ್ಲೂ ಬಂದಿರಲಿಕ್ಕಿಲ್ಲ ತಾರಾ. ಅದಕ್ಕೆ ಅವಳ ಔದಾರ್ಯವೇ ಸಾಕ್ಷಿಯಾಗಿದೆ. ವೆಂಕಟೇಶನ ಪತ್ನಿಯಾಗಿ ಸಾಧ್ವಿಯಾಗಿ ಬಾಳುತ್ತಾಳೆ ಅವಳು."

"ಅವಳ ಔದಾರ್ಯವನ್ನು ನಾನು ಉಪೇಕ್ಷಿಸಿ ಮಾತಾಡಲಿಲ್ಲ. ನನ್ನ ಕೈಹಿಡಿದ ನಿಮ್ಮ ಔದಾರ್ಯವನ್ನು ನೆನೆಯುತ್ತಿದ್ದೇನೆ ಅಷ್ಟೆ."

ವಿಶ್ವಾಸ ಹೆಂಡತಿಯ ಹತ್ತಿರ ಸರಿದು ಬಂದು ಉದ್ವೇಗದಿಂದ ಅವಳ ಕೈಯನ್ನು ಹಿಡಿದು ಮೆಲ್ಲನೆ ತಟ್ಟುತ್ತ- "ನಾನು ಹಿಡಿದ ಕೈ ಬಹಳ ಪವಿತ್ರವಾಗಿದೆ" ಎಂದು ಕಣ್ಣಿಗೊತ್ತಿಕೊಂಡ. ಗಂಡನ ಭಾವಪೂರ್ಣ ಮುಖದ ಮೇಲೆ ತಾರಾನ ಕೈ ಆಡಿತು. ಹೆಂಡತಿಯ ಹನಿದುಂಬಿದ ಮುಖವನ್ನು ಅವನ ಕಣ್ಣು ಕಂಡಿತು. ಕಣ್ಣಾಲೆಗಳ ಭ್ರಮರ ರೆಪ್ಪೆ ಬಡಿದು ಗರಿಗೆದರಿ ನಿಂತಿತು. ಮಂದಾರ ಪುಷ್ಪದ ಜೇನುಹನಿ ಚಲ್ಲು ವರಿಯಿತು.

ಆ ರಾತ್ರಿ ಪತಿ-ಪತ್ನಿಯರು ಬಹಳ ಹೊತ್ತಿನವರೆಗೆ ಮಾತನಾಡಿದರು.

ಹೊಸ ಜೀವನದ ಯೋಚನೆಗಳೇ ಅವು. ಕೊನೆಕೊನೆಗೆ ತಾರಾ– "ನಮ್ಮ ಜೀವನದಲ್ಲಿ ಹೊಸ ಕಾಲ ಬಂದದ್ದು ದೇವ ಕೃಪೆಯೇ ಆಗಿದೆ. ಆದರೆ ಈ ಹೊಸ ಜೀವನದಲ್ಲಿ ನಿಮ್ಮ ಕಾವ್ಯ ಸ್ಫುರಣವು ನವೋನವವಾಗಿ ಹೊರಬೀಳುವದನ್ನು ನೋಡಿ ನಾನು ಧನ್ಯಳಾಗಬೇಕು. ನಿಮ್ಮ ಕಾವ್ಯ ಕೀರ್ತಿ ದಿಗಂತವನ್ನು ಮುಟ್ಟಬೇಕು" ಎಂದಾಗ ವಿಶ್ವಾಸ ಮೆಲು ದನಿಯಲ್ಲಿ "ಮೊದಲು ಜೀವ ಬದುಕಲಿ ತಾರಾ. ಕಾವ್ಯ ಸ್ಫುರಣವು ತನ್ನ ತಾನೇ ಹೊರಹೊಮ್ಮುತ್ತದೆ."

ತಾರಾ ಆ ಮಾತನ್ನು ಪ್ರತಿಭಟಿಸುವಂತೆ– "ಕಾವ್ಯ ಸ್ಫುರಣವಿಲ್ಲದ ಜೀವಕ್ಕೆ ಯಾವ ಬೆಲೆಯಿದೆ? ನಿಮ್ಮ ಜೀವನವೇ ಕಾವ್ಯವಾಗಬೇಕು" ಎಂದು ಹೇಳಿದಳು.

"ನನ್ನ ಕಾವ್ಯ ಸ್ಫೂರ್ತಿದೇವಿ ನೀನೇ ನನ್ನ ಸುತ್ತು ಬಳಸಿ ನಿಂತಿರುವಾಗ ನನ್ನ ಸೆಲೆ ಎಂದೂ ಬತ್ತಲಾರದು ತಾರಾ" ಎಂದು ಅವನು ಅಭಿಮಾನದಿಂದ ಅವಳ ಕುರುಳು ನೇವರಿಸುತ್ತಿರಲು ತಾರಾ ಸುಲಜ್ಜಿತಳಾಗಿ ಮೃದುವಾಗಿ ನಕ್ಕಳು.

೮

ವಿಶ್ವಾಸನನ್ನು ಹಾಲಹಳ್ಳಿಗೆ ಬರಮಾಡಿಕೊಳ್ಳುವ ಮೊದಲು ವೆಂಕಟೇಶ ದೀರ್ಘವಾದ ಆಲೋಚನೆ ಮಾಡಿಯೇ ಆ ನಿರ್ಧಾರಕ್ಕೆ ಬಂದಿದ್ದ. ಇತ್ತೀಚಿಗೆ ಅವನ ವ್ಯವಹಾರದ ವ್ಯಾಪ್ತಿ ಅಸಾಧ್ಯವಾಗಿ ಹಬ್ಬಿತ್ತು. ಅನಧಿಕೃತ ಕಾಳನ್ನು ಸಂಗ್ರಹಿಸಿ ಕಳ್ಳ ಪೇಟೆಯಲ್ಲಿ ಮಾರುವದು, ಕುತಂತ್ರದಿಂದ ಸಕ್ಕರೆ ಪಡೆದುಕೊಂಡು ಮನಸ್ಸಿಗೆ ಬಂದ ಧಾರಣೆಗೆ ಅದನ್ನು ತಳ್ಳುವದು, ವಿದೇಶಿಯ ಸೆರೆಯನ್ನು ಗುಪ್ತವಾಗಿ ಸಂಗ್ರಹಿಸಿ ಶ್ರೀಮಂತ ಕುಡುಕರಿಗೆ ಪೂರೈಸುವದು, ಸಾಮಾನ್ಯ ಕುಡುಕರಿಗೆ ಭಟ್ಟಿಯ ಸರಾಯಿ ಒದಗಿಸುವದು, ನಯವಾದ ಬಟ್ಟೆಗಳನ್ನು ಯಾರದೋ ಕೃಪೆಯಿಂದ ಪಡೆದುಕೊಂಡು ಒಂದಕ್ಕೆ ಹತ್ತಾಗಿ ಮಾರುವದು–ಹೀಗೆ ಕಳ್ಳಪೇಟೆಯ ಅನಧಿಕೃತ ವ್ಯವಹಾರಗಳೇ ಅವನನ್ನು ವೈಭವ ಶಿಖರಕ್ಕೇರಿಸಿದ್ದವು.

ಇದರಿಂದ ಅವನಿಗೆ ಹಣ ಹಳ್ಳವಾಗಿ ಹರಿಯಿತು. ಧನಪಿಶಾಚಿಯೇ ಹಿಡಿಯಿತು. ಈ ವ್ಯವಹಾರವನ್ನೆಲ್ಲ ಸಾಗಿಸುವ ಕುಶಲತೆ ಅವನಿಗೆ ಸಾಕಷ್ಟಿತ್ತು. ಆದಿಯೂ ಅವನಿಗೆ ಕೆಲವರ ಸಹಾಯವಾದರೂ ಅನಿವಾರ್ಯವಾಗಿ ಬೇಕಾಗುತ್ತಿತ್ತು. ಅದಕ್ಕಾಗಿಯೇ ಜೀವಣ, ರಜಾಕರನ್ನು ಅವನು ಕಾಯ್ದುಕೊಂಡಿದ್ದ. ಮೊದಮೊದಲು ಜೀವಣ್ಣ ಪ್ರಾಮಾಣಿಕನಾಗಿಯೇ ಕೆಲಸ ಮಾಡುತ್ತಿದ್ದ. ಆದರೆ ದಿನಕಳೆದಂತೆ ಅವನು ವೆಂಕಟೇಶನ ಹಣದಲ್ಲಿ ತಾನೂ ಗುಪ್ತ ವ್ಯವಹಾರ ಸಾಗಿಸಿ ಅವನ ಲಾಭಕ್ಕೆ ಅಡ್ಡಿಯಾಗಹತ್ತಿದ್ದ. ಆದರೆ ಅವನನ್ನು ಒಮ್ಮೆಲೇ ಬಿಡಲೂ ಬರುವಂತಿರಲಿಲ್ಲ. ಸಮಯ ಸಾಧಿಸಿ ಯೋಗ್ಯ ಉಪಾಯ ಕೈಕೊಳ್ಳಬೇಕೆಂದು ವೆಂಕಟೇಶ ಮನಸ್ಸಿನಲ್ಲಿಯೇ ನಿರ್ಧರಿಸಿದ್ದ. ಈ ಗೊಂದಲದಲ್ಲಿ ಅವನಿಗೆ ಬಿಡುವೇ ಸಿಗುತ್ತಿರಲಿಲ್ಲ. ಲೆಕ್ಕ ಪತ್ರವನ್ನಿಡಲು ಅವನಿಗೆ ಪ್ರಾಮಾಣಿಕ ಮೇಧಾವಿಯ ಅಗತ್ಯವಿತ್ತು. ಅವನ ಬುದ್ಧಿ ಮತ್ತೆಯಲ್ಲಿ ಸರಕಾರದ ಇನಕಮ್ ಟ್ಯಾಕ್ಸ ತಪ್ಪುವ ಸುಳ್ಳು ಲೆಕ್ಕ ಸಿದ್ಧವಾಗಬೇಕಿದ್ದವು.

ವಿಶ್ವಾಸನ ಬುದ್ಧಿ ಮತ್ತೆಯನ್ನು ಅವನು ಕಾಲೇಜಿನಲ್ಲಿಯೇ ತಿಳಿದಿದ್ದ. ಅವನ ಬಡತನದ ಅರಿವಾದಾಗ ಅವನಿಗೊಂದು ಹಂಚಿಕೆ ಹೊಳೆಯಿತು; ವಿಶ್ವಾಸನನ್ನು ಹಾಲಳ್ಳಿಗೆ ಬರಮಾಡಿಕೊಂಡಿತು. ಮೇಲೆ ಮೇಲೆ ಇದು ಕೇವಲ ಗೆಳೆಯನಿಗೆ ತಾನು ತೋರುವ ಸಹಾನುಭೂತಿಯ ಸೋಗು ಹಾಕಿ ಅವನ ದಾರಿದ್ರ್ಯದ ಸಂಪೂರ್ಣ ಲಾಭ ಪಡೆದು ವಿಶ್ವಾಸನನ್ನು ತಮ್ಮ ಕಂಪನಿಗೆ ಸೇರಿಸಿಕೊಳ್ಳುವದೇ ಆ ಹಂಚಿಕೆಯಾಗಿತ್ತು. ಹೀಗೆ ಅವನು ಮನದಲ್ಲಿಯೇ ಹಂಚಿಕೆ ಹಾಕುತ್ತಿರುವಾಗ ಆ ರಾತ್ರಿ ಏಕಾಂತದಲ್ಲಿ ಪತಿಯನ್ನು ಕಂಡು ಮನೋರಮೆ ಸಾಧ್ಯವಾದಷ್ಟೂ ಹೆಚ್ಚಿನ ನೆರವನ್ನು ವಿಶ್ವಾಸನಿಗೆ ಒದಗಿಸಲು ಕೇಳಿಕೊಂಡಿದ್ದಳು. ಅವನ ಸಹಾಯ ತನಗೆ ಬೇಕಾಗಿದ್ದರೂ ಅದನ್ನು ತೋರಗಡದೆ ಕೇವಲ ಅವಳ ಮಾತಿಗಾಗಿಯೇ ಎನ್ನುವಂತೆ ಅವನನ್ನು ಬರಮಾಡಿಕೊಳ್ಳಲು ವೆಂಕಟೇಶ ಒಪ್ಪಿದ.

ಮನೋರಮೆ ವಿಶ್ವಾಸನನ್ನು ಸ್ವಾಗತಿಸಲು ಪ್ರಬಲವಾದ ಬೇರೆ ಕಾರಣಗಳೂ ಇದ್ದವು. ಹಿಡಿತ ತಪ್ಪಿ ಹರಿಯುತ್ತಿರುವ ಗಂಡನ ಬಾಳನ್ನು

ಜಗ್ಗಿ ಹಿಡಿಯಲು ಅವಳಿಗೆ ಒಬ್ಬರ ನೆರವಿನ ಅಗತ್ಯವಿತ್ತು. ವಿಶ್ವಾಸನಲ್ಲಿ ಆ ಯೋಗ್ಯತೆಯನ್ನು ಕಂಡ ಅವಳಿಗೆ ಅವನ ಬರುವಿಕೆ ಅಮೂಲ್ಯವಾಗಿ ಪರಿಣಮಿಸಿತು. ಮದುವೆಯಾದ ಹೊಸದರಲ್ಲಿ ವೆಂಕಟೇಶನನ್ನು ನೋಡುವ ರೀತಿಗೂ ಧನ ಪಿಶಾಚಿ ಬಡಿದ ಬಳಿಕ ನೋಡುವ ರೀತಿಗೂ ಬಹಳ ವ್ಯತ್ಯಾಸವಾಗಿ ಅವಳ ಬಾಳು ದಿನದಿನವೂ ನೀರಸವಾಗಿ ನಡೆದಿತ್ತು. ಅವಳಿಗೆ ಈ ನರಕದ ಬಾಳು ಹೇಯವಾಗಿತ್ತು. ತನ್ನ ಪತಿಯಲ್ಲಿ ಮಾರ್ಪಾಟಾದರೆ ತನ್ನ ಬಾಳಿಗೊಂದು ಅರ್ಥವೆಂದೇ ಬಗೆದಳು. ಅವನ ಆಚರಣೆಯ ಬಗ್ಗೆ ಅನೇಕ ಸಾರೆ ಅವಳು ಎಚ್ಚರಿಸಿದ್ದರೂ ಅದರಿಂದ ವಿಶೇಷ ಉಪಯೋಗವಾಗಿರಲಿಲ್ಲ. ಅಂದು ನಡೆದು ಹೋದ ಘಟನೆಯಿಂದಂತೂ ಅವಳು ಅವನ ಉಸಾಬರಿಯನ್ನೇ ಬಿಡುವಂತಾಯಿತು. ಹಣದ ಹೊಳೆಯಲ್ಲೀಜತೊಡಗಿದ್ದ ಅವನಲ್ಲಿ ದುಷ್ಟಪ್ರವರ್ತಿಗಳು ಬೆಳೆದು ಬಂದವು. ಕುಡುಕತನ, ಸುಂದರ ವೇಶ್ಯೆಯರ ಸಹವಾಸ ಅವಳ ಕಿವಿ ತಲುಪಿದವು. ಆ ವಿಷಯವನ್ನು ಪತಿಯೆದುರು ಪ್ರಾಸ್ತಾಪಿಸಲು– "ಇದು ಹೆಂಗಸರಿಗೆ ಸಂಬಂಧಿಸಿದ ವಿಷಯವಲ್ಲವೆಂದು ದಬಾಯಿಸಿದ್ದ. ದಿನ ಕಳೆಯುತ್ತಿರುವಂತೆ ಅವನು ಅನೀತಿಗಳ ಮಡುವಿನಲ್ಲೇ ಈಜಾಡಿದ. ಒಮ್ಮೆ ನಾಲ್ಕೆಂಟು ಗೆಳೆಯರನ್ನೂ, ಕೆಲವು ಅಧಿಕಾರಿಗಳನ್ನೂ, ಕರೆದುಕೊಂಡು ಮನೆಯಲ್ಲಿ ಔತಣವನ್ನೇರ್ಪಡಿಸಿದ. ಮನೋರಮೆ ಇದೊಂದನ್ನೂ ಅರಿಯಳು. ಅಡಿಗೆಯೆಲ್ಲವೂ 'ಜನ್ನಾ ಹೋಟೇಲಿ'ನಿಂದ ಬರುವ ಏರ್ಪಾಡಾಗಿದ್ದರಿಂದ ಅವಳಿಗೆ ತಿಳಿಸುವ ಅಗತ್ಯವೂ ಇರಲಿಲ್ಲ. ಇದನ್ನು ಕಂಡು ಅವಳಭಿಮಾನಕ್ಕೆ ಬರೆ ಎಳೆದಂತಾಯಿತು. ಅದನ್ನು ಸಹಿಸಿದಳು. ಆದರೆ ಮನೆಯಲ್ಲಿಯೇ ಎಲ್ಲರೂ ಕುಡಿಯಲಾರಂಭಿಸಿ ಸಿಕ್ಕಾಪಟ್ಟೆ ಹರಟೆ ತೊಡಗಿದ್ದನ್ನು ಅವಳು ಸಹಿಸದಾದಳು. ಅವರನ್ನು ದಬ್ಬಿಯೇ ಬಿಡಬೇಕೆಂದು ಹೊರಗೆ ಬಂದಾಗ ಅವಳು ನೋಡಿದ ದೃಶ್ಯದಿಂದ ಎದೆ ಧಸ್ಸೆಂದಿತು. ಅವಳ ಪತಿ ಹರೆಯದ ವೇಶ್ಯೆಯೊಬ್ಬಳ ಮೇಲೆ ಕೈಹಾಕಿ ಕುಳಿತಿದ್ದಾನೆ. ಅವಳೂ ಮತ್ತವಾಗಿ ಕುಡಿದು ಅವನ ಮುಂಗುರುಳನ್ನು ನೇವರಿಸುತ್ತಿದ್ದಾಳೆ. ಮನೋರಮೆಗೆ ತಡೆಯುವದಾಗಲಿಲ್ಲ. ಅವಳು ಸಿಟ್ಟಿನಿಂದ ಕಂಪಿಸುತ್ತ ಗರ್ಜಿಸಿದಳು– "ಇದು ಮನೆಯೋ, ಧರ್ಮಶಾಲೆಯೊ?

ನಮ್ಮ ಮನೆ ಸೂಳೆಯರ ಮನೆಯಾಗಬೇಕೆ? ಕುಡುಕರ ಗಂಡಗವಾಗ ಬೇಕೆ? ಹುಂ-ಎಲ್ಲರೂ ಹೊರಗೆ ನಡೆಯಿರಿ. ನಡೆಯದಿದ್ದರೆ...."

ವೆಂಕಟೇಶ ಅವಳಿಗೆ ಒಳಗೆ ಹೋಗಲು ಸನ್ನೆ ಮಾಡಿದ. ಅವನ ಕೈ ವೇಶ್ಯೆಯ ಗಲ್ಲಕ್ಕೆ ತಾಕಿದ್ದನ್ನು ಮನೋರಮೆ ಸಹಿಸಲಾರದೆ, ಬಿರ್ರನೆ ಬಂದು- "ಏ ಹೇಸಿಮುಂಡೆ....ಇದೇನು? ನಾಚಿಕೆ ಇಲ್ಲವೆ ನಿನಗೆ?" ಎಂದು ಅವಳನ್ನೆಳೆದು ಹೊರಗೆ ದಬ್ಬಿದಳು. ಅವಳಿಗೆ ಮೈಯಲ್ಲಿ ಆವೇಶ ಬಂದಂತಿತ್ತು. ಸನ್ಮಾನ್ಯ ಅತಿಥಿಗಳಿಗೆ ಈ ದುರ್ಗಾವತಾರದ ಅಬ್ಬರದಿಂದ ನಿಶೆಯಿಳಿಯಿತೇನೊ-ಅವರು ಒಬ್ಬೊಬ್ಬರಾಗಿ ಹೊರಟು ಬಿಟ್ಟರು. ಅವರು ಹೋದೊಡನೆ ವೆಂಕಟೇಶ ಪತ್ನಿಯನ್ನು ಹುಡುಕುತ್ತ ಒಳಗೆ ನಡೆದಾಗ ಅವಳು ಹಾಸಿಗೆಯ ಮೇಲೆ ಬಿದ್ದುಕೊಂಡು ಅಳುತ್ತಿದ್ದಳು.- "ನಾಲ್ಕು ಜನರಲ್ಲಿ ನನ್ನ ಮರ್ಯಾದೆ ಕಳೆದು ಈಗ ಒಳಗೆ ಬಂದು ಅಳುತ್ತ ಬಿದ್ದೆಯಾ?" ಎಂದು ಅವಳಿಗೆ ಬಲವಾಗಿ ಒದೆದ. ಅವಳ ಜೀವಮಾನದಲ್ಲಿ ಯಾರೂ ಅವಳನ್ನೀರೀತಿ ನಡೆಯಿಸಿಕೊಂಡಿರಲಿಲ್ಲ. ಈ ಪೆಟ್ಟು ಅವಳಲ್ಲಿ ಪ್ರತಿಭಟನೆಯನ್ನೆಬ್ಬಿಸಿತು. ಕಣ್ಣುಗಳಿಂದ ನೀರು ಧಾರಾಕಾರವಾಗಿ ಹರಿಯಿತು. ಅವಳು ನಡುಗುವ ಸ್ವರದಲ್ಲಿ- "ಬೀದಿಯ ಬಸವಿಯರನ್ನು ಕರೆದು ತಂದು ಮನೆಯನ್ನು ಹೆಂಡದಂಗಡಿ ಮಾಡುವದು ಮರ್ಯಾದೆನಂತರ ಲಕ್ಷಣವೆ?"

"ನನ್ನ ಮನೆಯಲ್ಲಿ ನಾನು ಬೇಕಾದದ್ದು ಮಾಡುತ್ತೇನೆ. ಅದನ್ನು ಕೇಳಲು ನೀನು ಯಾರು?"

"ಇನ್ನೊಮ್ಮೆ ಅವರು ಕಾಲಿಡಲಿ. ನಾ ಯಾರೆಂದು ಅವರಿಗೆ ತೋರಿಸುತ್ತೇನೆ."

"ಯಾರ ಮುಂದೆ ಈ ಮಾತನ್ನಾಡುತ್ತಿಯೆ?" ಎಂದು ಅವಳ ಕೆನ್ನೆಗೊಂದು ಫಳೀರನೇ ಕೊಟ್ಟು ಅವನು ತತ್ತರಿಸುತ್ತ ಹೊರಗೆ ನಡೆದ.

ಈ ಘಟನೆ ನಡೆದು ಹೋದಮೇಲೆ ಅವನು ಮತ್ತೆ ಇಂತಹ ಅನಾಚಾರವನ್ನು ಮನೆಯಲ್ಲಿ ಮಾಡಲಿಲ್ಲ. ಆದರೂ ಅವನ ಸ್ವಚ್ಛಂದ ಪ್ರವರ್ತಿ ಹೊರಗೆ ನಡೆಯುತ್ತಿರುವದು ಅವಳಿಗೆ ಗೊತ್ತಾಗಿಯೇ ಆಗುತ್ತಿತ್ತು. ಒಂದು ರೀತಿಯ ನಿರಾಸೆ ಅವಳಲ್ಲಿ ಮೂಡಿತು. ಸೂಳೆಯರ ಸಂಪರ್ಕ ದಿಂದ ಮಲಿನಗೊಂಡ ಪತಿಯ ಮೈ ಮುಟ್ಟುವದೂ ಅವಳಿಗೆ ಹೇಸಿಕೆ ಎನ್ನಿಸಿತು. ಅವಳ ಬಾಳು ಯಾಂತ್ರಿಕವಾಗಿ ಸಾಗುತ್ತಿತ್ತು. ಪತಿಯೊಂದಿಗೆ ಎಷ್ಟು ಮಾತೋ ಅಷ್ಟೆ. ವೆಂಕಟೇಶನಿಗೂ ಮನೆಯ ಸುಖ ಮಾಯ ವಾದಂತೆ ತೋರಿದರೂ ಅವನು ಆ ಬಗ್ಗೆ ಹೆಚ್ಚು ವಿಚಾರಿಸಲಿಲ್ಲ. ಅನೇಕ ದಿನಗಳವರೆಗೆ ಅವನು ಮನೆಗೂ ಬರುತ್ತಿರಲಿಲ್ಲ. ಅವಳಿಗೆ ಈ ವರ್ತನೆ ಅಸಹನೀಯವಾಗಿ, ಬಾಳು ಏಕಾಂಗಿಯಾಗಿ ಸಾಗಿತು. ಅವಳಿಗೂ ಸ್ನೇಹದ ಅಗತ್ಯವಿತ್ತು. ತನ್ನ ಕಷ್ಟಗಳನ್ನು ತೋಡಿಕೊಳ್ಳುವ ಜನರ ನೆರವಿನ ಅವಶ್ಯಕತೆ ಇತ್ತು. ವಿಶ್ವಾಸನನ್ನು ಅವಳು ಪೂರಾ ಬಲ್ಲವ ಳಾಗಿದ್ದಳು. ಅವನ ಸ್ನೇಹದಿಂದಲಾದರೂ ತನ್ನ ಮನೆಯಲ್ಲಿ ಹೊಸ ವಾತಾವರಣ ಹುಟ್ಟಬಹುದೆಂದು ಅವಳು ಅವನ ಸಾನಿಧ್ಯ ಬಯಸಿದಳು. ಅವನ ಪತ್ನಿ, ಮಕ್ಕಳ ಸಹವಾಸದಲ್ಲಿ ತನ್ನ ಒಬ್ಬೊಂಟಿಗ ಬಾಳು ಅಳಿದು ಹೋಗಿ ಜೀವನದಲ್ಲಿ ಜೀವ ಬರಬಹುದೆಂದು ಬಯಸಿದಳು. ಆ ಮಕ್ಕಳ ಜೊತೆಗಾದರೂ ಕಾಲ ಕಳೆಯಬಹುದೆಂದು ಬಗೆದಳು. ಅಂಕುಡೊಂಕಾಗಿ ಸಾಗುತ್ತಿರುವ ತನ್ನ ಬಾಳು ಅವನ ಕೃಪೆಯಿಂದಲಾದರೂ ಸರಳ ಮಾರ್ಗಕೆ ಬರಬಹುದೆಂದು ಕನಸು ಕಂಡಳು.

ಹೀಗೆ ದಿವ್ಯ ಸ್ನೇಹಕ್ಕಾಗಿ ಕಾತರಿಸುತ್ತಿದ್ದ ಅವಳ ಮನೆಗೆ ಶಾರಾ ಮಕ್ಕಳೊಂದಿಗೆ ಬಂದಾಗ ಅವಳ ಹಿಗ್ಗು ಹಿಡಿಸದಾಯಿತು. ಉಷಾ ಕಿರಣರು ಮನೆತುಂಬ ಓಡಾಡುತ್ತಿರುವ ದೃಶ್ಯವನ್ನು ಅವಳು ಮೈಮರೆತು ನೋಡುತ್ತಿದ್ದಳು ಮಾತ್ರ. ವಾತ್ಸಲ್ಯ ಅವಳಿಗೆ ಅರಿಯದ ಮಾತಾಗಿತ್ತು. ಬಂದ ಕೆಲ ದಿನಗಳಲ್ಲಿಯೇ- 'ಮನೂಮಾಮಿ' ಕಿರಣನ ತಾಯಿಯಾದಳು. ಅವನೊಡನೆ ಆಡುವದು, ಅಕ್ಕರೆಯ ಮಳೆಗರೆಯುವದೇ ಅವಳಿಗೊಂದು ಕೆಲಸವಾಯಿತು.

ಹೊಸ ಜೀವನಕ್ಕೆ ಹೊಂದಿಕೊಳ್ಳಲು ತಾರಾನಿಗೆ ತುಂಬಾ ತೊಂದರೆಯಾಯಿತು. ಹಿಂದೆ ದಾರಿದ್ರ್ಯ ಜೀವನದಲ್ಲಿ ದುಡಿದು ಸಣ್ಣಾಗಿದ್ದ ಅವಳಿಗೆ ಇಲ್ಲಿ ಮಾಡಲು ಯಾವ ಕೆಲಸವೂ ಇರಲಿಲ್ಲ. ಅಡಿಗೆಯಾಳು ಅಡಿಗೆ ಮಾಡುತ್ತಿದ್ದ. ನೀರಿನವರು ನೀರು ತರುತ್ತಿದ್ದರು. ಗುಡಿಸುವವರು, ಕಸಮುಸುರೆ ಎತ್ತುವವರು ಬೇರೆಯೇ. ಅವಳಿಗೆ ತನ್ನ ಹಾಸಿಗೆ ಹಾಸಿಕೊಳ್ಳುವ ಸ್ವಾತಂತ್ರ್ಯವೂ ಇರಲಿಲ್ಲ. ಬೆಳ್ಳಗಿನ ಮೇಲ್ಹಾಸುಗಳಿಂದ ಲಂಕೃತವಾದ ಗಾದೆಗಳ ಮೇಲೆ ಮಲಗುವ ಮಕ್ಕಳನ್ನವಳು ಅಚ್ಚರಿಯಿಂದ ನೋಡುತ್ತಿದ್ದಳು. ಅವಳು ಏನಾದರೂ ಕೆಲಸಕ್ಕೆ ಕೈಹಾಕಿದರೆ ಮನೋರಮೆ ಮುಗುಳು ನಗೆಯಿಂದ ಅಡ್ಡಬಂದು– ಆಳುಗಳಿಗೆ ಸಂಬಳ ಕೊಡುವದು ಯಾತಕ್ಕಾಗಿ?" ಎನ್ನುವಳು. "ನಾನು ಕೆಲಸ ಮಾಡದಷ್ಟು ಹೇಡಿಯೇ ಮನೋರಮಾ?" ಎಂದು ನಗುತ್ತಲೇ ಅನ್ನುವಾಗ– "ನಿನ್ನ ಮನೆಯಲ್ಲಿ ಮಾಡುವಿಯಂತೆ ಸುಮ್ಮನಿರು" ಎಂದು ಮನೋರಮೆ ನಗುತ್ತಿದ್ದಳು.

ದಿನಗಳುರುಳುತ್ತಿರುವಂತೆ ಮನೋರಮೆಯ ಔದಾರ್ಯ, ಸದ್ಗುಣಗಳನ್ನು ತಾರಾ ಮೆಚ್ಚಿದಳು. ಆದಿನ ಪತಿಯೆದುರು ತೋರಿದ ಕಹಿ ವಿಚಾರಕ್ಕೆ ಅವಳಿಗೆ ಪಶ್ಚಾತ್ತಾಪವಾಯಿತು. ಅವಳಂಥ ಸ್ತ್ರೀಯರು ಸಾವಿರಕೊಬ್ಬರೆಂದು ನಂಬಿದಳು. ಈ ಹೊಸ ವಾತಾವರಣದಲ್ಲಿ ಮೈ ತುಂಬಿಕೊಂಡು ನೆಗೆದಾಡುತ್ತಿರುವ ಮಕ್ಕಳನ್ನು ಕಂಡು ಅವಳಿಗೆ ಸುಖವೆನ್ನಿಸುತ್ತಿತ್ತು; ತೃಪ್ತಿಯೆನ್ನಿಸುತ್ತಿತ್ತು. ಮನೆಯಲ್ಲಿ ನೀರು ಮಜ್ಜಿಗೆ ಕಾಣದ ಮಕ್ಕಳು ಕೆನೆಕೆನೆ ಮೊಸರನ್ನು ಕಚ್ಚಿಕಚ್ಚಿ ತಿನ್ನುವದನ್ನು ಕಂಡು ಸಂತೋಷಭರಿತಳಾಗುವಳು. ಉತ್ಸಾಹದುಂಬಿದ ಕಿರಣ ವಿದ್ಯುದ್ದೀಪದ ಕೊಂಡಿಗಳನ್ನು ಅನೇಕ ಸಲ 'ಚಟ್‌ಪಟ್' ಮಾಡಿ ಮನೋರಮೆಯೊಂದಿಗೆ ನಗಾಡುತ್ತಿದ್ದ. ಇಂತಹ ಜೀವನದ ಸೌಲಭ್ಯವನ್ನೊದಗಿಸಿಕೊಟ್ಟ ಅವಳನ್ನು ತಾರಾ ಮನದಲ್ಲಿಯೇ ವಂದಿಸುತ್ತಿದ್ದಳು. ಸುಖ, ಸಮಾಧಾನಗಳಿಂದ ತಾರಾನ ದೇಹ, ಮನಸ್ಸು ತುಂಬಿಕೊಂಡವು. ಅವಳ ಈ ಮಾರ್ಪಾಟನ್ನು ಕಂಡು ಮನೋರಮೆಗೆ ತುಂಬಾ ಸಂತೋಷವಾಯಿತು.

ಸ್ನೇಹದೊಂದಿಗೆ ಎರಡು ಜೀವಗಳೂ ಬೆರೆತುಕೊಂಡವು. ಮನೋರಮೆ ತಾರಾನ ಬಾಯಲ್ಲಿ "ಮನ್ನಕ"ಳಾದಳು. ತಾರಾ ಮನೋರಮೆಯ ನಾಲಿಗೆಯಿಂದ 'ತಾರಕ್ಕ'ನಾಗಿ ರೂಪಗೊಂಡಳು.

ತನ್ನ ವ್ಯವಹಾರದ ಪರಿಚಯ ಮಾಡಿಕೊಡಲು ವೆಂಕಟೇಶ ಗೆಳೆಯನನ್ನು ಕರೆದುಕೊಂಡು ಅಲ್ಲಲ್ಲಿ ಸುತ್ತಾಡಿ ಬಂದ. ಆ ಸುತ್ತಾಟದಿಂದ ಆಯಾಸವಾಗಿತ್ತೋ ಇಲ್ಲವೆ ಆ ವ್ಯವಹಾರ ಅವನಲ್ಲಿ ದುಗುಡವನ್ನು ತಂದಿತ್ತೋ ತಿಳಿಯದು. ಅವನ ಮುಖ ತುಸು ಸಪ್ಪಗಾಗಿತ್ತು. ಅವನ ಮನಸ್ಸಿನಲ್ಲಿ ಅದಾವುದೋ ವಿಚಾರಮಂಥನ ನಡೆದದ್ದು ಸ್ಪಷ್ಟವಾಗಿತ್ತು. ತಾರಾ ಅದನ್ನು ಕಂಡು ಹಿಡಿದರೂ ಅಷ್ಟು ಗಮನಿಸಲಿಲ್ಲ. ಅವಳು ತನ್ನ ಆನಂದದಲ್ಲಿ ಪತಿಯ ಆನಂದವನ್ನೇ ಗುರುತಿಸಿದಳು. ಅವಳಲ್ಲಿ ಈ ಹೊಸ ಜೀವನ ಹೊಸ ಹರುಷವನ್ನೇ ತಂದಿತ್ತು.

ವೆಂಕಟೇಶನ ರಸಿಕತೆ ಈ ದಿನ ಹೊನಲಾಗಿ ಹರಿಯಿತು. ಅವನು ಊಟಕ್ಕೆ ಕುಳಿತಾಗ ತನ್ನ ಪತ್ನಿಯನ್ನುದ್ದೇಶಿಸಿ- "ಈ ದಿನ ಹೂವಿನ ಹಳ್ಳಿಗೆ ಸಿನೇಮಾ ನೋಡಲು ಹೋಗೋಣವೆ ಮನು?" ಎಂದು ಕೇಳಿದ. ಈಚೆಗೆ ಇಂತಹ ಸೂಚನೆಗಳೆಂದೂ ಬಂದಿರಲಿಲ್ಲ. ಇದೊಂದು ಶುಭ ಸೂಚಕವೆಂದು ತಿಳಿದು ಅವಳು- "ಆಗಲಿ ಅದಕ್ಕೇನು? ಎಲ್ಲರೂ ಹೋಗೋಣ" ಎಂದಳು.

"ಸಂಜೆ ಜೀವಣ್ಣನಿಗೆ ಬರಲು ಹೇಳಿಲ್ಲವೆ?" ಕರ್ತವ್ಯದ ನೆನಪಾಗಿ ವಿಶ್ವಾಸ ಹೇಳಿದ.

"ಬಂದು ಹೋಗುತ್ತಾನೆ ಬಿಡು. ನಮಗೂ ವಿಶ್ರಾಂತಿ ಬೇಡವೆ? ಮಕ್ಕಳನ್ನು ಕಾರಿನಲ್ಲಿ ಸುತ್ತಾಡಿಸಿಕೊಂಡು ಬರೋಣ. ತಾರಾಬಾಯಿ ಪಟ್ಟಣ ನೋಡಲಿ. ಯಾಕೆ ಮನು?" ವೆಂಕಟೇಶ ತಾರಾನನ್ನು ನೋಡುತ್ತ ಕೇಳಿದ. "ನನ್ನ ಸಂಪೂರ್ಣ ಒಪ್ಪಿಗೆಯಿದೆ." ಮನೋರಮೆ ವಿಶ್ವಾಸನನ್ನು ನೋಡುತ್ತ ನುಡಿದಳು.

"ಮಹಾರಾಣಿಯವರ ಆಜ್ಞೆಯನ್ನು ಮೀರಬಹುದೇನೊ ವಿಶ್ವಾಸ?" ವೆಂಕಟೇಶನ ಈ ಮಾತು ಮನೋರಮೆಯಲ್ಲಿ ನವಿರನ್ನೆಬ್ಬಿಸಿತು. ಇಂತಹ ರಸ ಹನಿಗಳಿಗಾಗಿ ಅವಳ ಜೀವ ಕಾತರಿಸುತ್ತಿತ್ತು. ಅವಳು ಮಂದ ವಾಗಿ ನಗುತ್ತ ತಾರಾನೆಡೆಗೆ ನೋಡಲು ಅವಳೂ ವೆಂಕಟೇಶನ ಮಾತು ಗಳನ್ನು ಕೇಳಿ ಮಂದಸ್ಮಿತಳಾದಂತೆ ತೋರಿತು.

ಸಂಜೆ ಕಾರು ಸಿದ್ಧವಾಗಿ ಬಂದಿತು. ರೇಶಿಮೆಯ ಬಟ್ಟೆ ಧರಿಸಿದ ಸುರಸುಂದರಿಯರಂತೆ ಹೆಂಗಸರಿಬ್ಬರೂ ಹೊರಬಂದರು. ಕಿರಣ ಮರಿ ಸಾಹೇಬನಾಗಿ ಮನೂಮಾಮಿಯ ಕೈಹಿಡಿದಿದ್ದ. ಉಷಾ ಬಣ್ಣದ ಲಂಗ ಹಾಕಿಕೊಂಡು ತಾರಾನ ಬಗಲಲ್ಲಿ ಕುಳಿತಿದ್ದಳು. ವಿಶ್ವಾಸ ಪತ್ನಿ, ಮಕ್ಕಳ ಸಂತೋಷದ ನಗೆ ಕಂಡು ತನ್ನಬಾಳು ಸಾರ್ಥಕವಾಯಿತೆಂದು ಕೊಂಡ ಅವನಲ್ಲೀಗ ಉತ್ಸಾಹ ತುಂಬಿ ತುಳುಕುತ್ತಿತ್ತು. ಅವರು ಹೊರಡುವ ವೇಳೆಗೆ ಜೀವಣ್ಣ ಕಾಗದಪತ್ರಗಳನ್ನು ತೆಗೆದುಕೊಂಡು ಬಂದ. ಅವನನ್ನು ನೋಡಿ ಮನೋರಮೆ- "ನಿನ್ನ ಹಣೆಬರಹವೇ ಹೀಗೆ. ನಾವು ಹೊರಡುವ ಹೊತ್ತಿಗೆ ನಿನ್ನ ಕಾಟ ತಪ್ಪಿದ್ದಲ್ಲ" ಎಂದು ಕಟ್ಟಿಗೆ ಮುರಿದಂತೆ ಮಾತನಾಡಿದಳು. ಜೀವಣ್ಣನಿಗೆ ಅವಳ ಮಾತು ಅರ್ಥ ವಾಗದಿದ್ದರೂ ಅವನು ತೀರ ವಿನಯದಿಂದ- "ನೀವು ಹೋಗಿ ಬನ್ನಿರಿ ತಾಯಿ. ನಾನು ರಾತ್ರಿ ಬರುತ್ತೇನೆ. ಅದಕ್ಕೇನು?" ಎನ್ನುತ್ತ ನೂರು ರೂಪಾಯಿಗಳ ಹತ್ತು ನೋಟುಗಳನ್ನು ವೆಂಕಟೇಶನ ಕೈಯಲ್ಲಿತ್ತು- "ಸಧ್ಯಕ್ಕೆ ಇಷ್ಟು ಕೊಟ್ಟಿದ್ದಾರೆ. ನಾಳೆ ಎಲ್ಲವನ್ನೂ ಕೊಡುತ್ತಾರಂತೆ" ಎಂದ. ವೆಂಕಟೇಶ ಆ ಹಣ ತೆಗೆದುಕೊಂಡು- "ಚಿಲ್ಲರೆ ಖರ್ಚಿಗಾಗಿ ಈ ಹಣ ನಿನ್ನ ಹತ್ತಿರ ಇರಲಿ ಮನೂ" ಎಂದು ನಿರ್ಲಕ್ಷ್ಯದಿಂದ ಆ ನೋಟುಗಳನ್ನು ಪತ್ನಿಗೆ ಕೊಟ್ಟ. ಚಿಲ್ಲರೆ ಖರ್ಚಿಗಾಗಿ ಹೆಂಡತಿಗೆ ಸಾವಿರಾರು ರೂಪಾಯಿ ಕೊಡುತ್ತಿರುವ ಅವನ ಶ್ರೀಮಂತಿಕೆ ಊಹಿಸಿ ತಾರಾ ದಿಗ್ಭ್ರಾಂತಳಾದಳು. ಇಷ್ಟು ಹಣವನ್ನು ಎಂದೂ ಕೊಡದವರು ಇಂದು ಕೊಟ್ಟಿದ್ದು ಮನೋರಮೆಯನ್ನು ಆಶ್ಚರ್ಯಚಕಿತಳನ್ನಾಗಿ ಮಾಡಿದರೂ ಇದೂ ಒಂದು ಅವರಲ್ಲಿ ಆಗುತ್ತಿರುವ ಮಾರ್ಪಾಟಿನ ಶುಭ ಸೂಚನೆ ಯೆಂದು ಬಗೆದು ಅವಳು ಹಣವನ್ನು ತನ್ನ ಕೈಚೀಲದಲ್ಲಿ ಹಾಕಿಕೊಂಡಳು.

ಜೀವಣ್ಣ ಸೂಕ್ಷ್ಮವಾಗಿ ಕಣ್ಣು ಹಾಯಿಸುತ್ತಿರುವದನ್ನು ಕಂಡ ಮನೋರಮೆ- "ಜೀವಣ್ಣ, ಇವರು ವಿಶ್ವಾಸ ರಾಯರ ಮನೆಯವರು" ಎಂದು ಪರಿಚಯ ಮಾಡಿಕೊಟ್ಟಳು. "ಬಹಳ ಸಂತೋಷ. ಬಹಳ ಸಂತೋಷ" ಎಂದು ಹಲ್ಲು ಕಿರಿದು ಅವನೊಂದು ಸಲ ವೆಂಕಟೇಶನನ್ನು ಇನ್ನೊಂದು ಸಲ ತಾರಾನನ್ನು ನೋಡಿದ. ಅವನ ನೋಟವನ್ನು ವಿಶ್ವಾಸ ಕಂಡುಹಿಡಿದರೂ ಅದನ್ನು ಗಮನಿಸಲಿಲ್ಲ. ಕಾರು ಹೊರಡುವಾಗ ಜೀವಣ್ಣ ಏನೋ ಅರ್ಥವಾದವನಂತೆ ಗೋಣು ಹಾಕಿದುದನ್ನು ಕಂಡಾಗ ಮಾತ್ರ ಅವನ ಬಗ್ಗೆ ವಿಶ್ವಾಸನಲ್ಲಿ ತಿರಸ್ಕಾರ ಮೂಡಿತು.- "ನೀನು ರಾತ್ರಿ ಬರುವ ಕಾರಣವಿಲ್ಲ ಜೀವಣ್ಣ. ನಾಳೆ ಎಲ್ಲ ಹಣವನ್ನು ತೆಗೆದುಕೊಂಡು ಬಾ" ಎಂದು ಹೇಳಿ ವೆಂಕಟೇಶ ಕಾರು ಸಾಗಿಸಿದ.

ತಾರಾ ಸಿನೇಮಾ ನೋಡಿ ಸಂತೋಷಿಸಿದಳು. ಮಕ್ಕಳಿಗೊಂದು ಹೊಸ ಅನುಭವವೇ ಆದದ್ದರಿಂದ ಅವರು ಮೇರೆದಪ್ಪಿ ಕುಣಿದಾಡಿದರು. ವೆಂಕಟೇಶನ ರಸಿಕತೆ ಕವಲು ಕವಲಾಗಿ ಹರಿಯಿತು. ಮನೋರಮೆಗೆ ಗಂಡನ ಈ ಉತ್ಸಾಹ ಹೊಸ ಜೀವನವನ್ನೇ ತಂದಿತು. ಅವಳು ನಗೆ ಮಲ್ಲಿಗೆಯಾದಳು. ಈ ಉತ್ಸಾಹಭರಿತ ಜೀವಿಗಳಲ್ಲಿ ನಿರುತ್ಸಾಹಿಯಾದವನು ವಿಶ್ವಾಸನೊಬ್ಬನೇ. ಅವನಿಗೆ ತಾನು ನೋಡಿದ ಚಿತ್ರ ಅರ್ಥವಾಗಲಿಲ್ಲ. ಕಾರು ಬಿಡುವಾಗ ಗೋಣು ಹಾಕಿ ನಕ್ಕ ಜೀವಣ್ಣನ ಚಿತ್ರವೇ ಅವನ ಮುಖಮೆದುರು ಕುಣಿಯುತ್ತಿತ್ತು. "ಜೀವಣ್ಣ ತಿಳಿದುಕೊಂಡಿರುವದಾದರೂ ಏನು? ಏತಕ್ಕಾಗಿ ಅವನು ನಕ್ಕ?" ಎಂದು ಅವನು ಒಂದೇ ಸವನೆ ಯೋಚಿಸುತ್ತಿದ್ದ. ಕೊನೆಗೆ ಅವನು ಹಾಗೆ ನಕ್ಕದ್ದು ವ್ಯವಹಾರಕ್ಕೆ ಸಂಬಂಧಿಸಿರಬೇಕೆಂದು ದುಗುಡವನ್ನು ತಳ್ಳಿಹಾಕಿದ.

ಅಷ್ಟು ದೊಡ್ಡದಲ್ಲದಿದ್ದರೂ ಅಚ್ಚುಕಟ್ಟಾದ ಬಂಗಲೆಯಲ್ಲಿ ತಾರಾ ಸಂಸಾರ ಹೂಡುವ ದಿನ ಬಂದಾಗ ಅವಳ ಹೃದಯದಲ್ಲಿ ಸಂತೋಷ ಕಲಕಾಡಿತು. ಮನೋರಮೆಯ ಸಹವಾಸದಲ್ಲಿ ಅವಳು ಹೊಸ ಜೀವನದ

ತರಬೇತಿಯನ್ನು ಚನ್ನಾಗಿ ಹೊಂದಿದ್ದಳು.– "ಮನ್ನಕ್ಕ, ನನ್ನ ಬಾಳಿಗೊಂದು ನೆಲೆಯನ್ನು ತಂದ ನಿನ್ನ ಉಪಕಾರವನ್ನು ನಾನು ಹೇಗೆ ತೀರಿಸಬೇಕು ಹೇಳು. ನನ್ನ ಭಾಗ್ಯದ ಭಾಗ್ಯ ದೇವತೆ ನೀನು" ಹೊಸ ಮನೆಗೆ ಹೊರಡುವ ದಿನ ತಾರಾ ಹನಿದುಂಬಿ ಅವಳಿಗೆ ಹೇಳಿದರೂ ಆ ಮಾತು ವೆಂಕಟೇಶನನ್ನು ಕುರಿತಾಗಿತ್ತು.

"ಇದರಲ್ಲಿ ನಾವು ಮಾಡಿರುವದಾದರೂ ಏನು ದೊಡ್ಡದು ತಾರಾ ಬಾಯಿ! ವಿಶ್ವಾಸ ದುಡಿಯುತ್ತಾನೆ. ನನಗೆ ಸಹಾಯ ಮಾಡುತ್ತಾನೆ. ಅದಕ್ಕಾಗಿ ಸಂಬಳ ತೆಗೆದುಕೊಳ್ಳುತ್ತಾನೆ. ಉಪಕಾರದ ಮಾತೇ ಇಲ್ಲ." ವೆಂಕಟೇಶ ನಗುತ್ತ ಹೇಳಿದ. "ಈ ಉಪಕಾರವನ್ನು ನಾನು ಮರೆಯುವದಿಲ್ಲ. ನಮ್ಮ ಮಾರ್ಗದರ್ಶಕರು ನೀವು" ಎಂದು ತಾರಾ ಅವನನ್ನು ಮನಃಪೂರ್ವಕವಾಗಿ ಅಭಿನಂದಿಸಿದಳು.

ತಾರಾನ ಜೀವನದಲ್ಲಿ ಅದ್ಭುತವಾದ ಮಾರ್ಪಾಡು ತಲೆದೋರಿತು. ಹೊಸ ಬಾಳಿನ ಯೋಗ್ಯತೆಗೆ ತಕ್ಕ ಅಧಿಕಾರ ವಹಿಸಿಕೊಂಡು ಸಂಸಾರ ನಿರ್ವಹಿಸಲಾರಂಭಿಸಿದಳು. ಸುಖ ಜೀವನವನ್ನೇ ನೆಚ್ಚಿಕೊಂಡಂತೆ ಅವಳೀಗ ದಿನದ ಹೆಚ್ಚಿನ ಭಾಗವನ್ನೆಲ್ಲ ಮನೆಯನ್ನು ಸಿಂಗರಿಸುವಲ್ಲಿ, ಮಕ್ಕಳ ಬಟ್ಟೆ ಬದಲಾಯಿಸುವಲ್ಲಿ, ಸ್ವಂತ ಸಿಂಗಾರದಲ್ಲಿ ಕಳೆಯುತ್ತಿದ್ದಳು. ಹೊಸ ಜೀವನ ಅವಳಿಗೊಂದು ರೀತಿಯ ಉನ್ಮಾದವನ್ನೇ ತಂದಿತ್ತು.

ತನ್ನ ಪತ್ನಿ–ಮಕ್ಕಳು ಸುಖವಾಗಿ ನಲಿಯುತ್ತಿರುವದನ್ನು ಕಂಡ ವಿಶ್ವಾಸನಿಗೆ ಹಾಯಾಗಿ ಬದುಕಬೇಕೆಂಬ ತನ್ನ ಸೂತ್ರವೇ ನಿಜವೆನ್ನಿಸಿತು. ಹಿಂದಿನ, ಇಂದಿನ ಬಾಳನ್ನು ಹೋಲಿಸಿ ನೋಡಿದಾಗ ಎಂತಹ ಅಂತರ! ಇಂದಿನ ಸುಖ ಜೀವನದ ವಿಚಾರವಾಗಿ ಅವನಲ್ಲಿ ಅಭಿಮಾನವೇ ಮೂಡಿತು. ಕಾವ್ಯವು ತನ್ನ ಜೀವನದಲ್ಲಿ ಹಾಸು ಹೊಕ್ಕಾಗಿದೆ. ಅದನ್ನು ಬೇಕಾದಾಗ ಪಡೆಯಬಹುದು. ಆದರೆ ಜೀವನದ ಸುಖವನ್ನು ಒಮ್ಮೆ ಕಡೆಗೆಣಿಸಿದರೆ ಅದು ತಿರುಗಿ ಸಿಗುವದು ಸಾಧ್ಯವಿಲ್ಲ. ಇಂದು ಈ ಜೀವನವನ್ನು ಪಡೆದಿದ್ದೇನೆ. ಇದನ್ನು ಅನುಭೋಗಿಸಬೇಕು. ಕಾವ್ಯ

ಜೀವನವನ್ನು ಜೀವನದ ಉದ್ಧಾರದಲ್ಲಿಯೇ ಪಡೆದರೆ ಕಾವ್ಯವೇನು ಆಕಾಶ ಕುಸುಮವಲ್ಲವೆಂದು ವಿಚಾರಿಸುವನು. "ಆದರೆ....ಈಚೆಗೆ ನನ್ನಿಂದ ಒಂದು ಬಿಡಿಕವನವೂ ಬಂದಿಲ್ಲವಲ್ಲ. ನಾನು ಅನೇಕ ಸಲ ಪ್ರಯತ್ನಿಸಿದೆ. ಸ್ಫೂರ್ತಿಯೇ ಬರಲಿಲ್ಲ. ಇದಕ್ಕೆ ಕಾರಣ? ಕಾವ್ಯದೇವಿ ನನ್ನಿಂದ ಸಿಡಿದು ಹೋದಳೆ? ನಾನು ಅಷ್ಟು ದರಿದ್ರನಾದಾಗ ತೆರೆತೆರೆಯಾಗಿ ತೇಲಿ ಬರುತ್ತಿದ್ದ ಭಾವಗಳು ಇಂದೇಕೆ ಮರೆಯಾಗಿವೆ? ಕಾವ್ಯ ದೇವಿ ದರಿದ್ರರ ಕೈವಾರಿಯೆ? ನನಗೆ ಇಂದು ಯಾವದು ಮುಖ್ಯ? ಕಾವ್ಯವೆ-ಜೀವನವೆ?...." ವಿಶ್ವಾಸ ಮೇಲಕ್ಕೆದ್ದು ಕೋಣೆಯಲ್ಲಿ ಎಡೆಯಾಡತೊಡಗಿದ. ಅವನ ಕಣ್ಣ ಮುಂದೆ ಹರಕು ಸೀರೆಯುಟ್ಟ ಅಂದಿನ ತಾರಾ, ರೇಶಿಮೆಯ ಸೀರೆಯುಟ್ಟ ಇಂದಿನ ತಾರಾ–ಕಾಣಿಸಿಕೊಂಡರು. "ಅದೇ ಅದೇ....ಜೀವನವೇ ಅಲ್ಲ..ಕಾವ್ಯ....ಕಾವ್ಯವೇ ಜೀವನವಲ್ಲ....ಆದರೆ...." ಗಡಿಯಾರದಲ್ಲಿ ಹನ್ನೆರಡು ಬಾರಿಸಿತು. ಹೊರಗೆ ಕತ್ತಲೆ ಕವಿದಿತ್ತು. ಯಾರೋ ಬಾಗಿಲು ತಟ್ಟಿದ ಸದ್ದಾಯಿತು.- "ಯಾರು ರಜಾಕ್" ಎಂದು ಅವನು ಬಾಗಿಲು ತೆಗೆದ

"ಮೂರು ಡಜನ್ ತಂದಿದ್ದೇನೆ" ಎಂದು ಹೇಳಿದ ರಜಾಕ ಒಂದು ಭಾರವಾದ ಟ್ರಂಕನ್ನು ಹೊತ್ತುಕೊಂಡು ಒಳಗೆ ಬಂದ. ಕೂಡಲೇ ಚಿಲಕ ಹಾಕಿ ಆ ಟ್ರಂಕನ್ನು ಒಳಗಿನ ಕೋಣೆಯ ನೆಲದಲ್ಲಿ ಗುಪ್ತವಾಗಿ ಕಾಣದಂತಿರುವ ನೆಲ ಮನೆಯಲ್ಲಿ ಇಟ್ಟುಬಂದ. ಅದೇ ವೇಳೆಗೆ ಟ್ರಕ್ಕು ಬಂದ ಸದ್ದಾಯಿತು. ಹಿಂದಿನ ಭವ್ಯವಾದ ಕೋಣೆಯಲ್ಲಿ ಸಕ್ಕರೆ ಚೀಲ ಇಡಿಸಿ ಬಂದ. ವೆಂಕಟೇಶನ ವ್ಯವಹಾರವೆಲ್ಲ ಇರುಳಿಗೇ ಮೀಸಲಾಗಿದ್ದರಿಂದ ಈ ರೀತಿಯು ದೈನಂದಿನವಾಗಿತ್ತು. ಈಚೆಗೆ ಉಗ್ರಾಣದ ಹೊಸ ನಿರ್ಮಾಣ ವಿಶ್ವಾಸನ ಮನೆಯಲ್ಲೂ ಆಗಿತ್ತು. ಆ ಹೊಣೆಗಾರಿಕೆಯನ್ನವನು ತುಂಬಾ ಜಾಗರೂಕನಾಗಿ ನೋಡಿಕೊಳ್ಳುತ್ತಿದ್ದ.

ಆದಿನ ಸಾಮಾನುಗಳನ್ನೆಲ್ಲ ಭದ್ರವಾಗಿರಿಸಿ ಬಂದ ವಿಶ್ವಾಸ ಬರೆಯುತ್ತಿದ್ದ. ಈ ಸಾಮಾನುಗಳನ್ನೆಲ್ಲ ಯಾರು ಯಾರಿಗೆ ಯಾವ ಹೊತ್ತಿನಲ್ಲಿ, ಯಾವ ಮಾರ್ಗವಾಗಿ ತಲುಪಿಸಬೇಕೆಂದು ವಿಚಾರಿಸುತ್ತ

ಸಮಯ ಕಳೆಯುತ್ತಿದ್ದ. ಹೊರಗೆ ಸದ್ದಾಯಿತು. ಅವನು ಹೋಗಿ ಬಾಗಿಲು ತೆಗೆದಾಗ ವೆಂಕಟೇಶನ ಮೂರ್ತಿ ಕಂಗೊಳಿಸಿತು. ಅವನ ಕಣ್ಣು ಕೆಂಪಗಾಗಿದ್ದವು. ಬಾಯಿಯಿಂದ ವಾಸನೆ ಉಗ್ರವಾಗಿ ಬರುತ್ತಿತ್ತು. ವಿಶ್ವಾಸ ಅವನನ್ನೊಮ್ಮೆ ನೇರವಾಗಿ ನೋಡಿದ ಮಾತ್ರ. ಅವನು ತತ್ತರಿಸುತ್ತ ಒಳಗೆ ಬಂದು ಖುರ್ಚಿಯ ಮೇಲೆ ಕುಸ್ಸಳಿಸಿದ.- "ಆ ಜೀವಣ್ಣನ ಗಂಟಲು ಹಿಚಕಬೇಕು. ಬದಮಾಷ್. ಅಕ್ಕಿಯ ವ್ಯವಹಾರದಲ್ಲಿ ಐದು ನೂರು ರೂಪಾಯಗಳನ್ನು ಗಿಟ್ಟಿಸಿದ್ದಾನೆ" ಎನ್ನುತ್ತ ಅವನು ಮುಷ್ಟಿಯನ್ನೆತ್ತಿದ.

"ಆ ಸಂಶಯ ನನಗೂ ಬಂದಿದೆ ವೆಂಕಟೇಶ. ಆದರೆ ಒಮ್ಮೆಲೇ ದುಡುಕುವದು ತರವಲ್ಲವೆಂದು ಸುಮ್ಮನಿದ್ದೇನೆ. ಈ ವ್ಯವಹಾರದ ಮಾತೇ ಹೀಗೆ. ಅವನ ವೈರವನ್ನು ಕಟ್ಟಿಕೊಳ್ಳುವದು ಕೂಡಲೆ ಸಾಧ್ಯವಿಲ್ಲ. ನಾನು ಜಾಗರೂಕನಾಗಿರುತ್ತೇನೆ" ವಿಶ್ವಾಸ ಸಮಾಧಾನದಿಂದ ನುಡಿದ.

"ಒದ್ದು ಬಿಡು ಬದಮಾಷನನ್ನು. ಅವನನ್ನು ಜೇಲಿಗೆ ಕಳಿಸುವ ವ್ಯವಸ್ಥೆ ಮಾಡುತ್ತೇನೆ."

"ಅಂತಹ ಪ್ರಸಂಗ ಬಂದಾಗ ಬಿಡುಗಡೆ ಮಾಡೋಣವಂತೆ ಬಿಡು."

ವೆಂಕಟೇಶ ಡುರುಕಿ ಹಾಕಿದಂತೆ ಮಾಡಿ ಒಮ್ಮೆಲೇ- "ತಾರಾಬಾಯಿ ಮಲಗಿರುವರೆ?" ಎಂದು ಕೇಳಿದ.

"ರಾತ್ರಿ ಎರಡು ಗಂಟೆಯಾಗಿದೆ ಮಾರಾಯ. ಹೆಂಗಸರು ಎಚ್ಚರಾಗಿರುವದು ಸಾಧ್ಯವೆ?" ವಿಶ್ವಾಸ ಗಡಬಡಿಸಿ ಹೇಳಿದ.

"ಸ್ವಲ್ಪ ಎಬ್ಬಿಸಿ ಚಹ ಮಾಡಿಸಬಾರದೆ?" ವಿಶ್ವಾಸ ಒಳಗೆ ಹೋಗಿ ಬಂದ. ಸ್ವಲ್ಪ ಸಮಯದಲ್ಲಿ ತಾರಾ 'ಟ್ರೇ'ದಲ್ಲಿ ಚಹ ತುಂಬಿದ ಕಿಟ್ಲಿಯನ್ನೂ ಎರಡು ತೆರವಾದ ದೊಡ್ಡ ಕಪ್ಪುಗಳನ್ನೂ ತೆಗೆದುಕೊಂಡು

ಬಂದಳು. ಸ್ವಾಭಾವಿಕವಾದ ನಗೆ ಅವಳ ಮೊಗದಲ್ಲಿ ತೇಲುತ್ತಿತ್ತು. ಅದೇ ತಾನೆ ಹಾಸಿಗೆಯಿಂದ ಎದ್ದುದರಿಂದ ಮುಂಗುರುಳುಗಳು ಕಪೋಲಗಳ ಮೇಲೆ ಹಾರಾಡುತ್ತಿದ್ದವು. ತಾರಾನನ್ನು ನೋಡಿ ವೆಂಕಟೇಶ ನಗುತ್ತ– "ನಿಮಗೆ ತ್ರಾಸವಾಯಿತು ತಾರಾಬಾಯಿ" ಎಂದು ಬಾಯಿತೆರೆದ. ಉಗ್ರವಾದ ವಾಸನೆಯನ್ನು ಮೂಸಿದ ತಾರಾ ಬೆದರಿದಳು. ಶಂಕಿತಳಾಗಿ ಅವನನ್ನು ನೋಡಿದಾಗ ಅವನ ಕೆಂಪಡರಿದ ಕಣ್ಣುಗಳನ್ನು ನೋಡಿ ಅಲ್ಲಿ ನಿಲ್ಲಲಾರದೆ ಒಳಗೆ ನಡೆದಳು.

"ತಾರಾಬಾಯಿ ಬಹಳ ಸುಧಾರಿಸಿದ್ದಾರೆ ನೋಡು ವಿಶ್ವಾಸ. ಬಹಳ ಸುಂದರವಾಗಿ ಕಾಣುತ್ತಾರೆ" ಕೈನಡುಗುತ್ತಿದ್ದರೂ ಪ್ರಯತ್ನದಿಂದ ಬಾಯಿಗೆ ಚಹ ಸುರಿದುಕೊಳ್ಳುತ್ತ ವೆಂಕಟೇಶ ತೊದಲತೊಡಗಿದ. ಹೆಂಡತಿಯ ಲಾವಣ್ಯದ ಬಗ್ಗೆ ವಿಶ್ವಾಸನಿಗೆ ತುಂಬಾ ಅಭಿಮಾನವಿದ್ದರೂ ವೆಂಕಟೇಶನ ವರ್ಣನೆ ಅವನಿಗೆ ಅಸಹ್ಯವಾಗಿ ತೋರಿತು. ಅವನು ಮಾತು ತಪ್ಪಿಸುವವನಂತೆ– "ಹಾಲಳ್ಳಿಯ ಹವೆ ಅವಳಿಗೆ ಚನ್ನಾಗಿ ಹಿಡಿದಂತೆ ತೋರುತ್ತದೆ. ಅವಳ ಆರೋಗ್ಯ ಸುಧಾರಿಸಿರುವದು ನಿಜ" ಎಂದ.

"ಇನ್ನೂ ಸುಧಾರಿಸುತ್ತದೆ....ಇನ್ನೂ ಸುಧಾರಿಸುತ್ತದೆ....ನೋಡುವಿಯಂತೆ...." ವೆಂಕಟೇಶ ಕೋಣೆ ನಡುಗುವ ಹಾಗೆ ನಕ್ಕ. ಅವನ ಮಾತುಗಳನ್ನು ಕೇಳಿ ತಾರಾ ಕಿಡಿಕಿಡಿಯಾದಳು. ಅಲ್ಲದೆ ಅವನು ಹೆಂಡ ಕುಡಿಯುವನೆಂದು ಮೊದಲ ಬಾರಿ ಕಂಡುಕೊಂಡ ಅವಳು ಮನೋರಮೆಯ ವಿಚಾರದಲ್ಲಿ ಕನಿಕರಗೊಂಡು ಅವಳನ್ನು ಎಚ್ಚರಿಸಬೇಕೆಂದು ನಿರ್ಧರಿಸಿದಳು.

"ನನ್ನನ್ನು ಕಂಡರೆ ಅವಳಿಗೆ ಆಗುವದೇ ಇಲ್ಲ ವಿಶ್ವಾಸ. ಯಾವಾಗಲೂ ದುಮುದುಮು ಉರಿಯುತ್ತಾಳೆ. ನನಗೆ ಸಂಸಾರದಲ್ಲಿ ಸುಖ ಸುಖ....ಸುಖವೇ ಇಲ್ಲ....ನೀನು....ನಿನ್ನ ತಾರಾ....ಬಾಯಿ...." ವೆಂಕಟೇಶನ ಬಾಯಿ ಸಿಕ್ಕಾಪಟ್ಟೆ ಹರಿಯುತ್ತಿತ್ತು. ತಾರಾ ಇದನ್ನು ಕೇಳಿ ವ್ಯಾಕ್ಯಲಳಾದರು. ದುಮುದುಮು ಉರಿದರೆ ಹೆಂಡತಿಯ ಕಾರ್ಯ ಮುಗಿಯಲಿಲ್ಲ.

ಅವಳಿಗೆ ಅವನನ್ನು ತಿದ್ದುವ ಕರ್ತವ್ಯವೂ ಇದೇ' ಎಂದು ಮನೋರಮೆಗೆ ಹೇಳಬೇಕೆಂದುಕೊಂಡಳು ಅವಳು.

ವೆಂಕಟೇಶನನ್ನು ವಿಶ್ವಾಸ ಮನೆಗೆ ತಲುಪಿಸಿ ಬಂದ. ಮನೆಗೆ ಬಂದಾಗ ಅವನ ಮುಖ ಹೀರಿ ಹೋಗಿತ್ತು. ಅಡಕೊತ್ತಿನಲ್ಲಿ ಸಿಕ್ಕ ಅಡಿಕೆಯಂತಾಗಿತ್ತು ಅವನ ಸ್ಥಿತಿ.– "ಏನು ನಿಮ್ಮ ಗೆಳೆಯರ ಪಾಡಿದು?" ವ್ಯಾಕುಲಚಿತ್ತಳಾದ ತಾರಾ ಅವನು ಬರುತ್ತಲೆ ಉದ್ಗಾರತೆಗೆದಳು.

"ಹೆಂಡಕುಡುಕರ ಹಣೆಯಬರಹವೇ ಹೀಗೆ ಅವನ ಮಾತುಗಳನ್ನು ನೀನು ಹಚ್ಚಿಕೊಳ್ಳುವದರಲ್ಲಿ ಯಾವ ಅರ್ಥವೂ ಇಲ್ಲ."

"ನಾನು ನನಗಾಗಿ ಚಿಂತಿಸುತ್ತಿಲ್ಲ;– ಮನೋರಮೆಗಾಗಿ."

"ಆ ಮಾತು ನನ್ನ ಜೀವವನ್ನೂ ಹಿಂಡುತ್ತದೆ ತಾರಾ. ಏನು ಮಾಡಲಿ ಹೇಳು?"

"ಇದರ ಬಗ್ಗೆ ನೀವವರನ್ನು ಎಚ್ಚರಿಸುವಿರಾ?"

"ಅದರಿಂದ ಯಾವ ಪರಿಣಾಮವೂ ಆಗಲಾರದು. ನಾನು ಸೇವಕ. ಅವನು ಯಜಮಾನ"

"ಆದರೆ ನೀವು ಗೆಳೆಯರೂ ಆಗಿದ್ದೀರಿ."

"ಈ ಗೆಳೆತನದ ಮಾತು ಬಹಳ ಸೂಕ್ಷ್ಮವಾಗಿದೆ ತಾರಾ. ಅವನ ಇಚ್ಛೆಯ ವಿರುದ್ಧ ಹೋದ ದಿನವೇ ನಾನು ಗುಡಚಾಪಿ ಕಿತ್ತಬೇಕಾದೀತು"

"ನಮ್ಮ ಸ್ವಾರ್ಥದಲ್ಲಿ ನಮಗೆ ಅನ್ನ ಹಾಕುವ ಧಣಿ ಅಧೋಗತಿಯ ಹೊಂಡದಲ್ಲಿ ಹೊರಳಾಡುವದನ್ನು ನೋಡುತ್ತ ಸುಮ್ಮನೆ ಕೂಡ್ರುವದು ಕರ್ತವ್ಯವಾದೀತೆ? ನಮಗಾಗಿ ಔದಾರ್ಯದ ಹೊಳೆಯನ್ನೇ ಹರಿಸುತ್ತಿರುವ ಮನೋರಮೆಯ ಬಾಳನ್ನು ಕಡೆಗಣಿಸಬೇಕೆ? ನಮ್ಮ ಬಾಳಿಗೊಂದು ದಾರಿದೋರಿದ ಅವಳ ಬಾಳು ಅಗ್ನಿಮುಖದಲ್ಲಿ ನಿಂತಿರುವದನ್ನು ನೋಡಿಯೂ ನೋಡದಂತಿರುವದು ಕೃತಘ್ನತೆಯಾಗಲಾರದೆ?"

"ನಿನ್ನ ಮಾತುಗಳು ನನಗೆ ಅರ್ಥವಾಗುತ್ತಿವೆ. ಆದರೆ ಒಮ್ಮೆ ಬೇರೂರಿದ ಕೆಟ್ಟ ಚಟಗಳನ್ನು ಬೇರು ಸಹಿತ ಕೀಳುವದು ಸಾಧ್ಯ ತಾರಾ."

"ಹೀಗೆಂದು ಪ್ರಯತ್ನವನ್ನೂ ಮಾಡದೆ ಸುಮ್ಮನೆ ಕೂಡ್ರಲಿಕ್ಕಾದೀತೆ?"

"ಪ್ರಯತ್ನವನ್ನೇನೊ ಮಾಡಬಹುದು. ಆದರೆ ಅದು ಫಲಕಾರಿ ಯಾಗುವದೆಂಬ ಮಾತು ಮಾತ್ರ ಸುಳ್ಳು. ನಾನು ವೆಂಕಟೇಶನನ್ನು ಅರಿತಿದ್ದೇನೆ. ಅವನಿಗೆ ಹಣದ ಬಲವಿದೆ. ಗುಣದ ಬಲವಿಲ್ಲ. ಅಲ್ಲದೆ ಮನೋರಮೆ ತೋರುವ ಆಸಡ್ಡೆಯಿಂದ ಅವನು ಪೂರಾ ಅಡ್ಡದಾರಿಗೆ ಬೀಳಹತ್ತಿದ್ದಾನೆ."

"ಅವಳನ್ನು ದಾರಿಗೆ ತರುವದು ನನ್ನನ್ನು ಕೂಡಿತು.'

"ಆದರೆ ನೀನು ಈ ಕೆಲಸವನ್ನು ಸಾವಧಾನದಿಂದ ಮಾಡಬೇಕು. ಸಿರಿವಂತರ ಸಹವಾಸ ನೀನು ತಿಳಿದುಕೊಂಡಷ್ಟು ಸರಳವಾಗಿಲ್ಲ. ವೆಂಕ ಟೇಶನ ಕೃಪೆ ತಪ್ಪಿದರೆ...."

"ನಾವು ಹುಟ್ಟಾ ಶ್ರೀಮಂತರಲ್ಲ. ಈ ಕೃಪೆಯ ಮಾತನ್ನು ಮಾತ್ರ ದಯವಿಟ್ಟು ಹೇಳಬೇಡಿರಿ."

"ಜೋಕೆಯಿಂದ ವರ್ತಿಸು."

"ನಿಮ್ಮ ಅಂಜಿಕೆ ನನಗೆ ನಗೆಯನ್ನೇ ತರುತ್ತದೆ."

"ಈ ನಗೆ ಹೊಗೆಯಾಗಬಾರದು ತಾರಾ" ವಿಶ್ವಾಸನ ಈ ಮಾತು ಗಳನ್ನು ಕೇಳಿ ತಾರಾನಿಗೆ ಏನು ಹೇಳಬೇಕೊ ತಿಳಿಯದಾಯಿತು. ಮಾತುಗಳು ಸಪ್ಪಗಾಗಿ ಅವನು ಜೀವನದ ಕೆಚ್ಚನ್ನು ಕಳೆದುಕೊಂಡಿರುವ ಅರಿವಾಗಿ ಅವಳಿಗೆ ತುಂಬಾ ವೇದನೆಯಾಯಿತು. ಈಗ ಸುಖ ಜೀವ ನದಲ್ಲಿ ಬಾಳು ನೆಮ್ಮದಿಯಿಂದ ಸಾಗಿದ್ದರೂ ಮೊದಲಿನ ಕಾವನ್ನು ಕಳೆದುಕೊಂಡಂತೆನ್ನಿಸಿತು ಅವಳಿಗೆ. ಇದಕ್ಕೆ ಕಾರಣವೇನೆಂದು ಅವಳು

ವಿಚಾರಿಸಿದಳು. 'ಗೆಳೆಯನ ಸಹವಾಸದಲ್ಲಿ ಕೂಡಾ....ಛೇ ಛೇ....ಅವರು ಕವಿ. ಈ ಮಟ್ಟಕ್ಕಿಳಿಯಲಾರರು....' ವಿಶ್ವಾಸ ಕವಿಯಾಗಿರುವನೆಂಬ ಮಾತು ಅವಳಿಗೆ ಬಹಳ ದಿನಗಳ ಮೇಲೆ ಹೊಳೆಯಿತು. ಅವಳಿಗೆ ಒಮ್ಮೆಲೇ ಏನೋ ಕಳೆದುಕೊಂಡ ಅರಿವಾಗಿ ಅಂತರಂಗ ಭಣಭಣವೆನ್ನಿಸಿತು. 'ಅವರ ಕವಿತ್ವ....ಅದು ಜೀವನದಲ್ಲಿ ಹಾಸು ಹೊಕ್ಕಾಗಿದೆ. ಆದರೆ ಈಗ ಕವನಗಳ ಮಾತೇ ಇಲ್ಲ....ಏತಕ್ಕಾಗಿ....'

ಆ ರಾತ್ರಿ ತಾರಾ ತುಂಬಾ ಯೋಚಿಸಿದಳು. ತನಗೆ ಸುಖ ಜೀವನ ಪೂರೈಸಲು ವಿಶ್ವಾಸ ತನ್ನ ಆತ್ಮ ಶಕ್ತಿಯನ್ನು ಬೇಕೆಂದೇ ದಬ್ಬಿಬಿಡುತ್ತಿರುವನೆಂದು ಭಾಸವಾಯಿತು. 'ಮೊದಲು ಹಾಯಾಗಿ ಬದುಕೋಣ. ಆ ಮೇಲೆ ಕಾವ್ಯ ಸ್ಫುರಣವು ತನ್ನ ತಾನೇ ಆಗುತ್ತದೆ' ಎಂದು ಹೇಳಿದ ಮಾತುಗಳ ನೆನಪಾಗಿ ಅವಳಿಗೆ ಸಂಕಟವಾಯಿತು. ಹಾಯಾಗಿ ಬದುಕುವದು ಸಾಧ್ಯವಾಯಿತು. ಆದರೆ ಇದಕ್ಕೆ ತೆತ್ತ ಬೆಲೆ ಬಹಳ ದೊಡ್ಡದೆಂದುಕೊಂಡಳು. ಬಹಳ ದೊಡ್ಡದೊಡ್ಡ ಮಾತಾಡಿ ಈಗ ಅದರ ವಿರುದ್ಧ ದೆಸೆಯಲ್ಲಿ ತಾನು ಸಾಗುತ್ತಿರುವಂತೆ ತೋರಿತು. 'ಜೀವನವೂ ಸಾಗಬೇಕು. ಅದು ಪತಿಯ ಸಾಹಿತ್ಯ ಶಕ್ತಿಗೆ ಪೋಷಕವೂ ಆಗಿರಬೇಕೆಂಬ ತತ್ವ ತಲೆಕೆಳಗಾದಂತೆ ತೋರಿತು. ಅವನ ಜೀವನ ಮಾರ್ಗ ಇಂದು ಸಾಹಿತ್ಯ ನಿರ್ಮಾಣಕ್ಕೆ ಪೋಷಕವಾಗಿ ಸಾಗುತ್ತಿಲ್ಲ. ಕೇವಲ ಹಣ. ಹಣಕ್ಕಾಗಿ ಹೆಣದಂತೆ ದುಡಿದು ಹೆಂಡಿರು ಮಕ್ಕಳನ್ನು ಲೋಲಾಡಿಸುವ ಈ ಮಾರ್ಗ ಅವನಿಗೆ ಯೋಗ್ಯವಲ್ಲವೆಂದು ಭಾವಿಸಿದಳು. ಇಷ್ಟು ದಿನ ಈ ಮಾತನ್ನರಿಯದೆ ಉನ್ಮತ್ತಳಂತೆ ಸಾಗಿದ ತಾನು ಅಪರಾಧಿಯೆಂದೇ ತೀರ್ಮಾನಿಸಿದಳು. ಅಂತರಂಗದಲ್ಲಿ ಬಿರುಗಾಳಿ ಎದ್ದು ಪಶ್ಚಾತ್ತಾಪ ಮೂಡಿತು.- 'ನನಗೆ ಹುಚ್ಚು ಹಿಡಿದಿದೆ. ಸುಖದ ಬೊಂಬೆಯಾಗಿ ಬಾಳುತ್ತಿದ್ದೇನೆ. ಅವರ ಕಾವ್ಯ ರಸವನ್ನು ಕಲಕಿನಿಂತ ಕೇಡಾಳಿಯಾಗಿದ್ದೇನೆ. ನನಗ ಬೇಕಾದದ್ದು ಸುಖ ಜೀವನವಲ್ಲ; ಅವರ ಕಾವ್ಯ ಜೀವನ ಅವರ ಕಾವ್ಯ ಶಕ್ತಿಯನ್ನೆಚ್ಚರಿಸಬೇಕು. ನನ್ನಿಂದ ನಾಡಿಗೊಂದು ಅನ್ಯಾಯವಾಗಬಾರದು....' ಅವಳ ವಿಚಾರ ನಿಂತಾಗ ಕರ್ತವ್ಯ ಜಾಗ್ರತವಾ

ಗಿತ್ತು. ಮನೋರಮೆಯನ್ನು ತಿದ್ದುವ ಕಾರ್ಯದ ಜತೆ ತಾನು ಮಾಡ ಬೇಕಾದ ಇನ್ನೊಂದು ಕಾರ್ಯವೂ ಇದೆಯೆಂದು ಅವಳಿಗೆ ಸ್ಪಷ್ಟ ವಾಯಿತು.

ಅವಳು ದಿಗ್ಗನೆ ಎದ್ದು ಬಿರಬಿರನೆ ಒಳಗಿನ ಕೋಣೆಗೆ ಹೋಗಿ ಟ್ರಂಕು ತೆರೆದಳು. ಅಲ್ಲಿ ಅವಳ ಪತಿ ಬರೆದ ಅನೇಕ ಕಾಗದಗಳ ಕಟ್ಟುಗಳನ್ನು ಹೊರದೆಗೆದು ಧೂಳು ಜಾಡಿಸಿ ಸ್ವಚ್ಛವಾದ ಅರಿವೆಯಲ್ಲಿ ಅವನ್ನೆಲ್ಲ ಕಟ್ಟಿದಳು. ಆ ಗಂಟನ್ನೊಮ್ಮೆ ವಂದಿಸಿದಾಗ ಅವಳ ಕಂಠ ತುಂಬಿ ಬಂದಿತು. ಅವಳದನ್ನು ಮತ್ತೆ ಟ್ರಂಕಿನಲ್ಲಿರಿಸಿ ದೇವರ ಮನೆ ಯಿಂದ ಅರಿಷಣ-ಕುಂಕುಮ ತಂದು ಏರಿಸಿ ಒಂದು ಬೊಟ್ಟು ಕುಂಕುಮ ತಾನೂ ಹಚ್ಚಿಕೊಂಡಳು. ಅವಳ ಎದೆ ಹಗುರಾಯಿತು. ಪಶ್ಚಾತ್ತಾಪ ದಗ್ಧ ಮನಸ್ಸು ತಿಳಿಯಾಯಿತು. ಆಕ್ಷಣ ಆವಳಲ್ಲಿ ಒಂದು ಅಪೂರ್ವ ಜಾಗ್ರತಿ ತಲೆದೋರಿತು.

ಇಡೀ ರಾತ್ರಿಯನ್ನು ಅವಳು ಜಾಗರಣೆಯಲ್ಲಿ ಕಳೆದರೂ ದಣಿ ವಾಗಲಿಲ್ಲ. ಕಳೆದುಕೊಂಡ ಅಮೂಲ್ಯ ವಸ್ತುವನ್ನು ಮರಳಿಪಡೆದಂತೆ ಅವಳಿಗೆ ಆನಂದವಾಯಿತು. ಈ ವಿಚಾರಗಳನ್ನೆಲ್ಲ ಪತಿಯೆದುರು ಹೇಳ ಬೇಕೆಂದು ಪಡಸಾಲೆಗೆ ಧಾವಿಸಿದಾಗ ವಿಶ್ವಾಸ ಎದ್ದು ಎಲ್ಲಿಗೋ ಹೋಗಿದ್ದ. ಅವಳು ನಿರಾಸೆಯಿಂದ ಒಳಗೆ ಸರಿಯುತ್ತಿರುವಾಗ ಬಾಗಿ ಲಲ್ಲಿ ಜೀವಣ್ಣ ಕಾಣಿಸಿದ- "ಅವರು ಹೊರಗೆ ಹೋಗಿರುವರು ಜೀವಣ್ಣ."

"ಇಷ್ಟು ಬೇಗ ಹೋಗಿರುವರೆ?" ಎಂದು ಜೀವಣ್ಣ ತಿರುಗಿ ಹೋಗುವಂತೆ ನಟಿಸಿ ಮತ್ತೆ ಒಳಗೆ ಬಂದು– "ತಾಯಿ, ಒಂದು ಮಾತನ್ನು ಹೇಳಿದರೆ ನೀವು ಕೋಪಿಸುವದಿಲ್ಲವಷ್ಟೆ. ನೀವು ನನ್ನ ಮಗಳಂತೆ ಇದ್ದೀರಿ" ಎಂದ.

"ಹೇಳು ಜೀವಣ್ಣ ನೀನು ನನ್ನ ತಂದೆಯ ಸಮಾನ."

ಹೇಳಬಾರದೆಂದು ಮಾಡಿದ್ದೆ. ಆದರೆ ಹೇಳಲೇಬೇಕೆಂದು ಬಂದೆ.

ದಯವಿಟ್ಟು ವಿಶ್ವಾಸರಾಯರನ್ನು ಅಂಕಿತದಲ್ಲಿಟ್ಟುಕೊಳ್ಳಿರಿ. ನಮ್ಮ ಯಜಮಾನರ ಸಹವಾಸ....ನಾನೀಮಾತನ್ನು ಹೇಳಬಾರದು. ಆದರೂ ಜೀವನಿಲ್ಲದೆ ಹೇಳುತ್ತೀನೆ. ವಿಶ್ವಾಸರಾಯರು ಬುದ್ಧಿವಂತರು ತಾಯಿ. ಅವರು ಕವಿಗಳೆಂಬ ಕೀರ್ತಿ ಇನ್ನೂ ಬಾಡಿಲ್ಲ. ಆದರೆ...."

"ಆದರೆ?....ಆದರೆ ಏನು ಜೀವಣ್ಣ.?"

"ಅವರ ಜೀವನ ಅಂಕು ಡೊಂಕಾಗಿ ಹರಿಯುವ ಮೊದಲು....ನೀವು ನನ್ನ ಮಗಳ ಸಮಾನ....ಅವರಿನ್ನೂ ದಾರಿ ತಪ್ಪಿಲ್ಲ. ಆದರೆ ಸಹವಾಸ ಫಲ ಅವರಿಗೆ ತೊಂದರೆ ಬಂದರೆ ನಾನಿದ್ದೀನೆ. ಈಗಾಗಲೇ ಜನರು ಏನೇನೋ ಆಡಿಕೊಳ್ಳುತ್ತಿದ್ದಾರೆ. ಜನರ ಮಾತನ್ನು ಯಾರು ಹಿಡಿಯುವರು ಮಗಳೆ? ಆದರೂ ಒಂದು ಮಾತು ನೆನಪಿರಲಿ. ಈ ಜೀವಣ್ಣನನ್ನು ಮರೆಯಬೇಡಿರಿ. ಈ ಮಾತನ್ನು ವಿಶ್ವಾಸರಾಯರಿಗೂ ಹೇಳಿರಿ."

"ಜನರು ಮಾತಾಡುವದಾದರೂ ಏನು ಜೀವಣ್ಣ?"

"ಅದರಲ್ಲಿ ಅರ್ಥವಿಲ್ಲ. ಪ್ರಸಂಗ ಬಂದಾಗ ಎಲ್ಲವನ್ನೂ ಹೇಳುತ್ತೀನೆ. ಯಜಮಾನರು ನನ್ನನ್ನು ಬಗೆದು ಮಾತಾಡುತ್ತಿದ್ದಾರೆ. ಇದರಿಂದ ಅವರಿಗೂ ಸುಖವಿಲ್ಲ. ನನಗೂ ಸುಖವಿಲ್ಲ. ವಿಶ್ವಾಸರಾಯರು ನನ್ನನ್ನು ಕಡೆಗಣಿಸಬಾರದು ಅಷ್ಟೆ" ಜೀವಣ್ಣ ಇಷ್ಟು ಹೇಳಿ ಬಿರಬಿರನೆ ನಡೆದು ಬಿಟ್ಟ. ತಾರಾನಿಗೆ ಅವನ ಮಾತುಗಳು ಸಮಸ್ಯೆಯನ್ನೇ ತಂದೊಡ್ಡಿದವು. ಆದರೂ ಅವನ ಸ್ವಭಾವವನ್ನು ಕೇಳಿ ತಿಳಿದ ಅವಳು ಈ ಮಾತಿಗೆ ಬೆಲೆಕೊಡಲಿಲ್ಲ.

೧೦

ಜೀವಣ್ಣನ ಕಪಟ ಚಾರಿತ್ರ್ಯವನ್ನು ಕೇಳಿ ತಿಳಿದ ತಾರಾ ಅವನ ಮಾತುಗಳಿಗೆ ಯಾವ ಬೆಲೆಯನ್ನೂ ಕೊಡಬಾರದೆಂದು ನಿಶ್ಚಯಿಸಿದರೂ ಆ ಮಾತುಗಳು ಅವಳನ್ನು ಕಾಡತೊಡಗಿದ್ದವು. ಅವಳ ಹೃದಯದಲ್ಲಿ

ಕಿಡಿಯೆಬ್ಬಿಸಿದ್ದವು.- "ಜನರು ಯಾವ ಮಾತನ್ನು ಕುರಿತು ಆಡಿಕೊಳ್ಳು ತ್ತಿದ್ದಾರೆ? ಯಾವ ವಿಷಯವನ್ನಾರೋಪಿಸಿ ಅವರನ್ನು ಅಂಕಿತದಲ್ಲಿಟ್ಟು ಕೊಳ್ಳಬೇಕು? ಯಾರ ಸಹವಾಸದಿಂದ ಅವರ ಬಾಳು ಅಂಕು-ಡೊಂಕಾಗಿ ಹರಿಯುತ್ತಿದೆ? ಅವರ ಚಾರಿತ್ರ್ಯಕ್ಕೆ ಕಲಂಕ ಬರುವ ಯಾವ ಘಟನೆ ನಡೆದಿದೆ? ಸುಮ್ಮನೆ ಜೀವಣ್ಣನೇಕೆ ಈ ಬಿರುಗಾಳಿಯನ್ನೆಬ್ಬಿಸಿದ?...." ಯೋಚಿಸುತ್ತಿರುವಂತೆ ತಾರಾನ ಮನಸ್ಸು ಕದಡಿ ಹೋಯಿತು. ಅವಳು ನಿಂತಲ್ಲಿಯೇ ನಿಂತು ಮತ್ತೆ ಮತ್ತೆ ಯೋಚಿಸಿದಳು.

"ಜೀವಣ್ಣನ ಮಾತುಗಳಲ್ಲಿ ಯಾವ ಅರ್ಥವೂ ಇಲ್ಲವೆ?"

"ಇಲ್ಲ. ಅವನ ಮಾತುಗಳೆಲ್ಲ ಸುಳ್ಳಿನ ಕಂತೆಗಳಾಗಿವೆ."

"ಜೀವಣ್ಣನ ಮಾತುಗಳು ಸುಳ್ಳಿನ ಕಂತೆಗಳೆಂದು ಒಪ್ಪಿದರೂ ವಿಶ್ವಾಸನ ಜೀವನ ಮೊದಲಿನಂತೆ ಸಾಗಿದೆಯೆಂದು ಒಪ್ಪುತ್ತೀಯಾ?"

"ಜೀವನ ಒಂದೇ ರೀತಿಯಾಗಿ ಸಾಗುವದಿಲ್ಲ. ವ್ಯವಹಾರ ಜೀವ ನದಲ್ಲಿ ಅವರು ಸಾಗಿಸುವ ಜೀವನದ ರೀತಿ ಬೇರೆಯಾದರೂ ಅವರ ಶುದ್ಧ ಚಾರಿತ್ರ್ಯಕ್ಕೆ ಕಳಂಕ ತರುವ ಜೀವನವನ್ನೆಂದೂ ಅವರು ಸಾಗಿ ಸಲಾರರು."

"ಇದು ನಿನ್ನ ಭ್ರಮೆ. ಈಗಾರು ತಿಂಗಳಿನಿಂದಲೂ ಅವರು ಮನೆ ಗೇಕೆ ಸರಿಯಾಗಿ ಬರುವದಿಲ್ಲ?"

"ಗಂಡಸರ ವ್ಯವಹಾರದಲ್ಲಿ ಹೆಂಗಸಿಗೇನು ತಿಳಿಯುತ್ತದೆ?"

"ನೀನು ಆತ್ಮವಂಚನೆ ಮಾಡಿಕೊಳ್ಳುತ್ತಿರುವಿ. ನಿನಗೆ ಸುಖ ಜೀವನದ ನಂಜೇರಿದೆ. ಪತಿಯನ್ನು ಕೆಣಕಿದರೆ ನಿನ್ನ ಸುಖ ಜೀವನದಲ್ಲಿ ಮಣ್ಣುಗೂಡುತ್ತದೊ ಎಂದು ಸುಮ್ಮನಿರುವಿ."

"ಉಹ್ಞೂಂ-ನನಗೆ ಸುಖ ಜೀವನದಲ್ಲಿ ಮೋಹವಿಲ್ಲ. ಅವರ ಹಿರಿಯ ಜೀವನದಲ್ಲಿ ಆಸ್ಥೆಯಿದೆ?"

"ಹಾಗಿದ್ದರೆ ನೀನು ಹೀಗೆ ಶೂನ್ಯಳಾಗಿ ಬಾಳುತ್ತಿರಲಿಲ್ಲ. ಜೀವಣ್ಣ ನಿನಗೆ ಎಚ್ಚರಿಕೆ ಕೊಟ್ಟಿದ್ದಾನೆ. ಇನ್ನಾದರೂ ನೋಡಿಕೊ."

"ನನಗೆ ಅವರಲ್ಲಿ ವಿಶ್ವಾಸವಿದೆ."

"ಎಂತಲೇ ಅವನು ನಿನ್ನನ್ನು ವಂಚಿಸುತ್ತಿರುವನು."

"ಅವರು ವಂಚಕರಲ್ಲ."

"ನಿನ್ನ ಬಾಳಿನ ಆದರ್ಶವನ್ನು ಕೇಳಿಕೊ. ಆ ಬಾಳನ್ನು ನಿನ್ನ ಸಲುವಾಗಿಯೇ ತೂರಿಬಿಡುತ್ತಿರುವ ವಿಶ್ವಾಸ ವಂಚಕನಲ್ಲವೆ?"

"ಹಾಗಿದ್ದರೆ ನಾನೇ ವಂಚಕಳು."

"ಹತ್ತುಸಾರೆ ಅನ್ನು. ಸಾವಿರ ಸಾರೆ ಅನ್ನು. ಆದರ್ಶವನ್ನು ಮರೆತು ನೀನು ಸಂಪತ್ತನ್ನು ಮೋಹಿಸಿದ್ದೀ. ನಿನ್ನ ಪತಿಯು ಕಾವ್ಯ ಸಂಪತ್ತು ನಿನ್ನಿಂದಾಗಿಯೇ ಕಮರುತ್ತಲಿದೆ. ಈ ಆರು ತಿಂಗಳಿನಲ್ಲಿ ನಿನ್ನ ಸ್ವಾಮಿ ಒಂದಾದರೂ ಕವನ ಬರೆದಿದ್ದಾನೆಯೆ? ಅವನ ಸೆಲೆ ಏಕೆ ಬತ್ತಿತು ವಿಚಾರಿಸಿದ್ದೀಯಾ?"

"ಅವರ ಜೀವನದಲ್ಲಿ ಕಾವ್ಯ ಹಾಸು-ಹೊಕ್ಕಾಗಿದೆ."

"ಕಾವ್ಯ ಕನ್ನಿಕೆ ಅಷ್ಟು ಅಗ್ಗವಾಗಿದ್ದಾಳೆಂದು ತಿಳಿದೆಯಾ? ಅವಳು ತಪಸ್ವಿನಿ. ಅವಳಿಗಾಗಿ ಧ್ಯಾನ ಮಾಡಬೇಕಾಗುತ್ತದೆ. ಆ ಧ್ಯಾನಕ್ಕಾಗಿ ನಿನ್ನ ಪತಿಯನ್ನು ಪ್ರೇರಿಸುತ್ತಿರುವೆಯಾ? ಅವಳೊಮ್ಮೆ ಸಿಡಿದು ಹೋದ ಳೆಂದರೆ ತಿರುಗಿ ಬರುವಷ್ಟು ಚಂಚಲೆಯಲ್ಲ. ನಿನಗೆ ಯಾವುದು ಬೇಕು ಹೇಳು ಸುಖ ಜೀವನವೆ....ಪತಿಯ ಕಾವ್ಯ ಜೀವನವೆ?"

"ನನಗೆ ಕಾವ್ಯ ಜೀವನ ಬೇಕು."

"ಹಾಗಾದರೆ ತ್ಯಾಗಕ್ಕೆ ಸಿದ್ಧಳಾಗು."

"ಯಾವ ತ್ಯಾಗ?" ಯಾರೊ ಗಟ್ಟಿಯಾಗಿ ನಗುತ್ತಿರುವಂತೆ ಭಾಸ ವಾಯಿತು. ಆ ನಗುವಿನ ಅಬ್ಬರ ತಡೆಯಲಾರದೆ ತಾರಾ ಹಿಂತಿರುಗಿ ನೋಡಿದಾಗ ಮನೋರಮೆ ಉಸೆಯು ಕೈಹಿಡಿದು ನಗುತ್ತಿದ್ದಳು.

"ಯಾರು ಈ ಮನೋರಮೆ?"

"ನಮ್ಮ ಜೀವನದ ಮಾರ್ಗದರ್ಶಕಳು"

"ನಿಮ್ಮ ಜೀವನದ ಮೇಲೆ ಅವಳಿಗೇಕೆ ಅಷ್ಟು ಆಸೆ?"

"ಅವಳು ಸದಯಾಂತಃಕರುಣಿ."

"ಮೂರ್ಖಳಂತೆ ಮಾತಾಡಬೇಡ. ಅವಳ ಜೀವನದಲ್ಲಿ ಇರುವ ಕೊರತೆಯನ್ನು ಬಲ್ಲೆಯಾ? ಅವಳು ಪ್ರೀತಿ ವಿರಹಿತಳಾಗಿದ್ದಾಳೆ. ಅವಳ ಜೀವನದ ಆಸೆ ಬಕ್ಕ ಬರಿದಾಗಿದೆ. ಗಂಡನ ಅಪವಿತ್ರ ಜೀವನದಿಂದ ಅವಳಿಗೆ ಸಂತಾನ ಸುಖವೂ ಇಲ್ಲವಾಗಿದೆ. ಆ ಕೊರತೆಗಳನ್ನು ತುಂಬಲು ಅವಳಿಗೆ...."

"ಎಂತಹ ಹೀನ ವಿಚಾರವಿದು? ಅವಳು ಮಹಾಸಾಧ್ವಿ."

"ಎಂತಲೇ ಇಷ್ಟು ಸ್ವಾರ್ಥಿಯಾಗಿದ್ದಾಳೆ."

"ಅವಳ ಸ್ವಾರ್ಥದ ಘನತೆಯನ್ನು ನಾನು ಕಂಡುಕೊಂಡಿದ್ದೇನೆ. ಬಾಳು ಅವಳಿಗೆ ಮುಳ್ಳು ಮೊನೆಯಾಗಿದ್ದು ಅವಳ ತಪ್ಪಲ್ಲ. ಅದನ್ನವಳು ಪಡೆಯುವಂತೆ ನಾನು ಪ್ರಯತ್ನಿಸುತ್ತೇನೆ."

"ಮೊದಲು ನಿನ್ನ ಬಾಳನ್ನು ನೋಡಿಕೋ."

"ಆ ನಿರ್ಧಾರವನ್ನು ಈಗಲೇ ಮಾಡಿದ್ದೇನೆ" ತಾರಾ ಈ ಮಾತನ್ನು ಗಟ್ಟಿಯಾಗಿಯೇ ನುಡಿದಳು. ಆ ಮಾತನ್ನು ಕೇಳಿ ಮನೋರಮೆ ಗಹ ಗಹಿಸಿ ನಗುತ್ತ— "ಯಾವ ನಿರ್ಧಾರವನ್ನು ಮಾಡಿದ್ದೀಯೆ ತಾರಕ್ಕ? ನಿನಗೆ ನಿಂತಲ್ಲಿಯೇ ಕನಸು ಬೀಳುವದೇನು? ನಾನು ಬಂದು ಮುಂದೆ ನಿಂತರೂ ಕಣ್ಣೆತ್ತಿ ನೋಡದೆ ಕಲ್ಲುಗೊಂಬೆಯಂತೆ ನಿಂತು ಯೋಚಿಸು ತ್ತೀಯಾದರೂ ಏನು?"

ತಾರಾ ಕನಸೊಡೆದಂತೆ ಎಚ್ಚತ್ತಳು.— "ಯಾವಾಗ ಬಂದೆಯೋ ಮನ್ನಕ್ಕ. ನೋಡಲೇ ಇಲ್ಲ. ಒಳಗೆ ನಡಿ ತಾಯಿ ಎಂದು ತಾರಾ ಮುಗುಳು ನಗೆ ಸೂಸಿದಳು.

"ವಿಶ್ವಾಸರಾಯರು ಮನೆಯಲ್ಲಿಲ್ಲವೆ?"

"ನಸುಕಿನಲ್ಲೇ ಎದ್ದು ಹೋದಂತೆ ಕಾಣುತ್ತದೆ."

"ಗಂಡಸರ ಜೀವಕ್ಕೆ ಸುಖವೇ ಇಲ್ಲ ನೋಡು."

"ಅವರು ಮಾಡುವದೆಲ್ಲ ನಮ್ಮ ಸುಖಕ್ಕೆ ಅಲ್ಲವೆ?" ಮನೋರಮೆ ದೀರ್ಘವಾದ ನಿಟ್ಟುಸಿರು ಬಿಟ್ಟಳು. ಚಹಾ ಮಾಡುತ್ತೇನೆ ಬಾ ಮನ್ನಕ್ಕ.

ಗೆಳತಿಯರಿಬ್ಬರೂ ಒಳಗಿನ ಕೋಣೆಯಲ್ಲಿ ಚಹ ಕುಡಿಯುತ್ತ ಕುಳಿತರು. ಮನೋರಮೆಗೆ ಏನನ್ನೋ ಕೇಳಬೇಕೆಂಬಾಸೆ ಬಲವಾಗಿ ಮೂಡಿದಂತೆ ಕಂಡು ಬಂದಿತು.– "ವಿಶ್ವಾಸರಾಯರು ಮುಂಜಾನೆ ಹೋದರೆಂದು ಹೇಳಿದೆಯಲ್ಲವೆ ತಾರಾ?"

"ತೀರ ನಸುಕಿನಲ್ಲೇ ಎಂದು ಕಾಣುತ್ತದೆ."

"ರಾತ್ರಿ ಮನೆಯಲ್ಲೇ ಇದ್ದರು ಹಾಗಾದರೆ...."

"ನಸುಕಿನಲ್ಲೇ ಹೋದರೆಂದ ಮೇಲೆ ರಾತ್ರಿ ಮನೆಯಲ್ಲೇ ಇದ್ದ ಹಾಗಾಯಿತಲ್ಲ." ತಾರಾ ನಕ್ಕಳು. "ಹಾಗಾದರೆ ಅವರು ರಾತ್ರಿ ಮನೆಯಲ್ಲೇ ಇದ್ದರೆನ್ನು...." ಎಂದು ಮನೋರಮೆ ಮತ್ತೊಮ್ಮೆ ಉಸಿರಿದಾಗ ತಾರಾನಿಗೆ ಅಚ್ಚರಿ ಎನ್ನಿಸಿತು. ಮನೋರಮೆಯ ಮನಸ್ಸನ್ನು ಏನೊ ಕಾಡುತ್ತಿರಬೇಕೆಂದು ಅವಳಿಗೆ ಸ್ಪಷ್ಟವಾಯಿತು. ಆ ರಾತ್ರಿ ನಡೆದ ಘಟನೆಯನ್ನು ತಾನಾಗಿಯೇ ಹೇಳಬಾರದೆಂಬ ವಿಚಾರದಿಂದ ತಾರಾ ಅವಳ ಮಾತಿಗೆ– "ಖಂಡಿತವಾಗಿಯೂ ಇದ್ದರು ಮನ್ನಕ್ಕ"

ತಲೆಯ ಮೇಲಿನ ದೊಡ್ಡ ಭಾರ ಇಳಿದಂತೆ ಮನೋರಮೆ ಸಮಾಧಾನದ ಉಸಿರನ್ನು ಬಿಡುತ್ತ– "ಸುಳ್ಳು ಹೇಳುವದು ಜೀವಣ್ಣನಿಗೊಂದು ಚಟವೇ ಆಗಿದೆ" ಎಂದಳು.

"ಏನು ಹೇಳಿದ ಅವನು?" ತಾರಾ ಗೊಂದಲದಲ್ಲಿ ಬಿದ್ದಂತೆ ಕೇಳಿದಳು.

"ಆ ಮುಠ್ಠಾಳ ಏನು ಬೇಕಾದರೂ ಹೇಳಲಿ ಬಿಡು. ಅದನ್ನು ತೆಗೆದುಕೊಂಡು ನಮಗೇನು ಮಾಡುವದದೆ? ನಿನ್ನೆ ರಾತ್ರಿ ನಮ್ಮವರು ಇಲ್ಲಿ ಬಂದದ್ದು ನಿಜವಲ್ಲವಷ್ಟೆ" ಮನೋರಮೆ ಕಾತರದಿಂದ ಕೇಳಿದಳು.

"ಅದೇಕೆ ನಿಜವಲ್ಲ? ನಿಜವಾಗಿಯೂ ಬಂದಿದ್ದರು. ನಾನೇ ಇಬ್ಬರಿಗೂ ಚಹ ಮಾಡಿಕೊಟ್ಟಿದ್ದೇನೆ."

"ಮನೆಯಲ್ಲಿ ಅಡಿಗೆಯಾಳಿರುಳಾಗ ಸರಿ ರಾತ್ರಿಯಲ್ಲಿ ಬಂದು ನಿನಗೇಕೆ ತ್ರಾಸು ಕೊಟ್ಟರೋ ತಿಳಿಯದು."

"ಅವರು ಚಹ ಕುಡಿಯಲಿಕ್ಕೆ ಮಾತ್ರ ಬಂದಿರಲಿಲ್ಲ ಮನ್ನಕ್ಕ. ಏನೋ ವ್ಯವಹಾರದ ಮಾತನಾಡಲು ಬಂದಿರಬೇಕು. ನಮ್ಮವರೇ ನನಗೆ ಚಹ ಮಾಡಲು ಹೇಳಿರಬೇಕು."

"ಅವರು ರಾತ್ರಿ ಮನೆಗೆ ಬರುವದೇ ವಿರಳ ತಾರಕ್ಕ. ಬಂದಾಗಲೂ ಕೋಣೆಯೇ ಅವರ ಸರ್ವಸ್ವ. ರಾತ್ರಿ ಹೊರಗೆ ಹೋಗಕೂಡದೆಂದು ನಾನು ಹೇಳಿದ್ದು ಇದು ಸಾವಿರನೇ ಸಲ. ಅವರು ನನ್ನ ಮಾತನ್ನು ಕೇಳುವದಿಲ್ಲ. ಮರ್ಯಾದೆಯನ್ನೂ ಉಳಿಸಿಕೊಳ್ಳುವದಿಲ್ಲ." ಮನೋರಮೆಯ ಕಣ್ಣು ಹನಿಗೂಡಿದವು. ತಾರಾನಿಗೆ ಈ ವ್ಯಾಕುಲದ ಅರಿವಾಯಿತು. ಅವಳು ಇದೇ ಸಂಧಿಯೆಂದು ಒಂದೆರಡು ಮಾತು ಹೇಳಲು ಸನ್ನದ್ಧಳಾದಳು– "ಅವರೇನು ಬೇರೆ ಮನೆಗೆ ಹೋಗಲಿಲ್ಲ ಬಿಡು ಮರ್ಯಾದೆ ಹೋಗಲಿಕ್ಕೆ ಆದರೂ ನಿನ್ನೆ ತುಂಬಾ ಕುಡಿದಿದ್ದರು."

"ಬಹಳ ರಂಬಾಟ ಮಾಡಿದರೆ?"

"ಕುಡುಕರ ನಾಲಿಗೆ ಸ್ವಾಧೀನದಲ್ಲಿರುವದಿಲ್ಲ ಮನ್ನಕ್ಕ. ಅವರ ಮಾತನ್ನು ಕೇಳಿ ನನಗೆ ಬಹಳ ನೋವಾಯಿತು."

"ನನ್ನ ಹಣೇಬರಕ್ಕೆ ಯಾರೇನು ಮಾಡುವದು?"

"ದೈವದ ಮೇಲೆ ಬಾರ ಹಾಕಿ ಹೀಗೆ ಸುಮ್ಮನೆ ಕುಳಿತುಕೊಳ್ಳುವದು ಸರಿಯಾಗಬಹುದೆ? ನನಗೆ ನಿಮ್ಮವರಿಗಿಂತ ನಿನ್ನ ಮೇಲೆ ಸಿಟ್ಟು ಬಂದಿದೆ."

"ಒಳ್ಳೆಯ ಪತಿಯನ್ನು ಪಡೆದ ನೀನು ಹೀಗನ್ನುವದು ಸಹಜವೇ."

"ನಿನ್ನ ಪತಿ ಬಂಗಾರವಾಗಿದ್ದಾರೆ."

"ಅವರ ಸಂಪತ್ತು ವಿಶಾಲವಾಗಿದೆ!"

"ನಾನವರ ಸಿರಿತನ ಕುರಿತು ಹೇಳಲಿಲ್ಲ. ಅವರ ಹೃದಯವನ್ನು ಹೇಳುತ್ತಿದ್ದೇನೆ. ಅವರ ಮನಸ್ಸನ್ನರಿಯಲು ನೀನು ಪ್ರಯತ್ನಿಸುತ್ತಿಲ್ಲ."

"ಅವರಲ್ಲಿ ಹೃದಯವಿದ್ದರೆ ನಿನ್ನ ಮಾತು ಸರಿಯಾಗುತ್ತಿತ್ತು."

"ನೀನು ಬಹಳ ನೊಂದಿರುವಿ. ಇದರಿಂದ ನಿನ್ನ ಬಾಳಿಗೆ ಯಾವ ಸುಖವಿದೆ? ಗಂಡುಸನ್ನು ಅಂಕಿತದಲ್ಲಿಟ್ಟುಕೊಳ್ಳದ ದುರಭಿಮಾನ ಯಾವ ಕೆಲಸಕ್ಕೂ ಬರುವದಿಲ್ಲ ಮನ್ನಕ್ಕ. ನೀನವರನ್ನು ಅವರ ಪಾಡಿಗೆ ಬಿಟ್ಟದ್ದರಿಂದ ಈ ಅನರ್ಥವಾಗಿದೆ."

"ನಿನಗವರ ಪರಿಚಯು ತೀರ ಹೊಸದು ತಾರಕ್ಕ. ನಾನು ಮಾಡಿದ ಪ್ರಯತ್ನಗಳೆಲ್ಲ ಮಣ್ಣುಗೂಡಿವೆ. ಅವರು ನನ್ನನ್ನು ಕಾಲಕಸದಂತೆ ನೋಡುತ್ತಾರೆ. ದುಡ್ಡಿನ ಹುಚ್ಚು ಹಿಡಿದ ಅವರಿಗೆ ಬಾಳಬೇಕೆಂಬ ಇಷ್ಟವೂ ಇಲ್ಲ. ಅವರ ಬಾಳು ನರಕದ ಮಡುವಾಗಿದೆ. ಅದರಲ್ಲಿ ಮುಳುಮುಳುಗಿ ಏಳುತ್ತಿದ್ದೇನೆ. ನನ್ನ ಬದುಕು ನರಕವಾದಿದೆ."

ನೀನು ಬೇಕಾದ್ದು ಹೇಳು. ಹೆಂಡತಿಯ ಸಹಾನುಭೂತಿಯನ್ನು ಕಡೆಗೆಣಿಸುವಷ್ಟು ಗಂಡು ಕಟುಕನಾಗಿರುವದಿಲ್ಲ."

"ನಿರ್ದಯರಾಗಿದ್ದಾರೆ ಅವರು. ನಾನು ತೋರಿದ ಸಹಾನುಭೂತಿಗೆ ನನ್ನೆಲಬುಗಳು ಪುಡಿಯಾದವು. ಏಕಾಂಗಿ ಬಾಳು ಅನಿವಾರ್ಯವಾಯಿತು. ಈ ಯಾತನೆಯನ್ನು ನಾನಾವಾಗಲೂ ಅನುಭವಿಸುತ್ತಿದ್ದೇನೆ. ನನಗೆ ಬಾಳಬೇಕೆಂಬ ಇಷ್ಟವಿಲ್ಲವೆ?"

"ಹಳೆಯದೆಲ್ಲ ಮರೆತುಬಿಡು. ಇನ್ನುಮೇಲಾದರೂ...."

“ನಾಯಿಯ ಬಾಲದ ಡೊಂಕನ್ನು ತಿದ್ದಲು ಬ್ರಹ್ಮದೇವರಿಗೂ ಅಸಾಧ್ಯ.”

“ನಿನಗೆ ಜೀವನದಲ್ಲಿ ಬೇಸರವೆ ಮನ್ನಕ್ಕ?”

“ನನ್ನಷ್ಟು ಜೀವನವನ್ನು ಯಾರೂ ಪ್ರೀತಿಸುವದಿಲ್ಲ ತಾರಕ್ಕ. ನಿನ್ನ ಪತಿಯನ್ನು ಇಲ್ಲಿಗೆ ಬರಮಾಡಿಕೊಂಡಿರುವದೂ ಅದಕ್ಕಾಗಿಯೇ. ಅವರ ಅಪೂರ್ವ ವ್ಯಕ್ತಿತ್ವದ ಪರಿಣಾಮವಾಗಿಯಾದರೂ ನನ್ನ ಸ್ವಾಮಿ ದಾರಿಗೆ ಬರಲಿ ಎಂದಲ್ಲವೆ?”

“ಅವರು ನಿರ್ಧರಿಸಿದ್ದಾರೆ ಮನ್ನಕ್ಕ. ಆದರೆ ಇದಕ್ಕೆ ನಿನ್ನ ನೆರವೂ ಬೇಕು. ನಿನ್ನ ಸಹಾನುಭೂತಿಯೇ ನಿನ್ನವರನ್ನು ಕಾಯಬೇಕಾಗಿದೆ.”

“ಅವರ ಸಲುವಾಗಿ ನನ್ನ ಜೀವವನ್ನೇ ಕೊಡುತ್ತೇನೆ. ನನಗೇ ಸಂಪತ್ತು ಬೇಡ, ಸಿರಿತನ ಬೇಡ;– ಅವರ ನಿಷ್ಕಲ್ಮಷ ಹೃದಯ ದೊರೆತರೆ ಸಾಕು.”

“ಅದನ್ನು ಪಡೆದುಕೊಳ್ಳುವಿ ತಾಯಿ. ಸುಮ್ಮನೆ ಕೊರಗಬೇಡ. ನಿನ್ನ ಕರ್ತವ್ಯ ನಿನ್ನನ್ನು ಒಳ್ಳೇದಾರಿಗೆ ಹಚ್ಚುವದು.”

“ಈ ಜನ್ಮದಲ್ಲಿ ಅದು ಸಾಧ್ಯವೆಂದು ನಾನು ತಿಳಿದಿಲ್ಲ.”

“ನಿರಾಸೆಯಿಂದ ಯಾವದೂ ಸಾಧ್ಯವಾಗುವದಿಲ್ಲ. ಹೆಣ್ಣಿನ ಬಾಳು ಸಹನೆಯಲ್ಲಿದೆ.”

“ಈ ಸಹನೆಯ ಸುಖವನ್ನು ನಾನು ಗೋರಿಯಲ್ಲಿ ಅನುಭವಿಸಬಹುದು.”

“ನೀನು ಕಡದಿ ಕಂಗೆಟ್ಟಿರುವಿ. ನೋಡೋಣ. ದೇವರು ಕಣ್ಣು ತೆರೆಯುವ ದಿನ ಬಂದರೆ ಯಾವದು ಅಸಾಧ್ಯ.”

“ದೇವರ ಕಣ್ಣು ಮುಚ್ಚಿಹೋಗಿದೆ. ಅವನಿಗೆ ಹೆಣ್ಣಿನ ಕಣ್ಣೀರು ಕಾಣುವದೇ ಇಲ್ಲ. ನನ್ನ ದೇವರು ಭಗ್ನಹೊಂದಿದ್ದಾನೆ;– ನನ್ನ ಪ್ರೀತಿಯನ್ನು ಹೋಮ ಮಾಡಿದ್ದಾನೆ. ನನಗೆ ಪ್ರೀತಿ ಬೇಕಿತ್ತು; ಸಂಪತಲ್ಲ.

ಹಣ ಸಿಕ್ಕಿತು; ಗುಣ ಸಿಗಲಿಲ್ಲ ತಾರಕ್ಕಾ, ನೀನೆಂತಹ ಭಾಗ್ಯವಂತೆ. ನಿನ್ನ ಪತಿಯಂತಹ ಪತಿ ಸಿಗಲೂ ಒಂದು ಪುಣ್ಯಬೇಕು. ನಿನ್ನ ಭಾಗ್ಯವೇ ನನ್ನದಾಗುವ ದಿನ ನಾನೆಂತಹ ಗಾಳಿಗೋಪುರ ಕಟ್ಟಿದ್ದೆ; ಎಂತಹ ಸುಂದರ ಕನಸು ಕಟ್ಟಿದ್ದೆ! ಆದರೆ ತಾರಕ್ಕ, ನಾನು ಹೀಗೆನ್ನುವೆನೆಂದು ನೊಂದು ಕೊಳ್ಳಬೇಡ. ಈಗ ನಿನ್ನ ಸ್ವಾಮಿ ನನ್ನ ಬಂಧು. ನನ್ನ ಬಾಳಿನ ಆಸೆ ಯನ್ನು ಅವರೇ ನನ್ನ ಸ್ವಾಮಿಯಿಂದ ಪೂರೈಸಿಕೊಡಬೇಕಾಗಿದೆ. ನಿನ್ನ ಜೀವನಕ್ಕಾಗಿ ನನಗೆ ಮತ್ಸರವಿಲ್ಲ. ಆದರೆ ನಿನ್ನಂತಹ ಜೀವನವನ್ನು ಬಾಳುವದು ಅಸಾಧ್ಯವಾದಾಗ ಸಂಕಟವಾಗುತ್ತದೆ. “ಮನೋರಮೆಯ ಕಣ್ಣೊಳಗಿಂದ ನೀರು ಧಾರೆಧಾರೆಯಾಗಿ ಹರಿಯುತ್ತಿದ್ದವು. ಅಂತಹಗದ ಕುದಿಗೆ ಉಕ್ಕುಬಂದು ಹೊರಚೆಲ್ಲಿದಂತೆ ಹನಿಗಳೇ ಅವು.– ನಿನಗೆ ಹುಚ್ಚು ಹಿಡಿಯತೆ ಮನ್ನಕ್ಕ?” ಎಂದು ತಾರಾ ಅವಳನ್ನು ಸಂತೈಸಿದಳು. ಅವಳ ಮಾತಿನಿಂದ ತಾರಾನ ಹೃದಯದಲ್ಲೂ ಭೀತಿ ಮೂಡಿತ್ತು. ಅವಳ ನಿರಾಸೆ ಯಾವ ಗಂಡಾಂತರ ತಂದೊಡ್ಡುವದೋ ಎಂದು ಹೆದರಿಕೆಯಾ ಯಿತು ತಾರಾನಿಗೆ. ಪ್ರೀತಿ ವಿರಹಿತ ಜೀವನದ ಉರಿ ಉನ್ಮಾದವಾಗಿ ಹುಚ್ಚು ಹೊಳೆಯಾಗಿ ಜೀವನವನ್ನು ಕೊಚ್ಚಿಕೊಂಡು ಹೋದ ಚರಿತ್ರೆ ಗಳನ್ನು ಅವಳು ಕೇಳಿ ತಿಳಿದಿದ್ದಳು. ಮನೋರಮೆ ಈಗ ತಾರಾನಿಗೆ ಉನ್ಮಾದಿನಿಯಂತೇ ಕಂಡಳು. ಆ ಹೊತ್ತಿಗೆ ಕಿರಣ ಒಳಗೆ ಬರಲು ಮನೋರಮೆ ಅವನನ್ನು ಕಣ್ಣರಳಿಸಿ ನೋಡಿದಳು. ಅವನು ಅವಳ ಬಳಿ ಸಾರಿ- “ಮನೂ ಮಾಮಿ” ಎಂದು ಅಚ್ಚೆಯಿಂದ ನುಡಿದ.

“ನೋಡು ತಾರಕ್ಕ, ನೀನು ಪುಣ್ಯವಂತೆಯೆಂದು ಹೇಳಿದೆನಲ್ಲ- ಸುಳ್ಳಲ್ಲ. ನಿನ್ನ ಬಾಳು ಸಾರ್ಥಕವಾಗಿದೆ. ಅದಕ್ಕೆ ಈ ನಿನ್ನ ಕುಡಿಗಳೇ ಸಾಕ್ಷಿ. ನನಗೀ ಪುಣ್ಯ ಭಾಗ್ಯವಿಲ್ಲ.” ಎಂದು ಅವನನ್ನು ಸೆಳೆದುಕೊಂಡು ಲಟಲಟ ಮುದ್ದು ಕೊಟ್ಟಳು. ಭರದಿಂದ ಅಪ್ಪಿಕೊಂಡ ಅವಳ ಅಪ್ಪುಗೆ ಯಲ್ಲಿ ಜಿಬ್ಬೆಯಾದವನಂತೆ ಕಿರಣ “ಹೋಗತೀನಿ ಬಿಡು ಮನೂ ಮಾಮಿ” ಎಂದು ಕಿರಚಿದ. ಅವಳು ಅವನನ್ನು ಸಡಿಲು ಬಿಟ್ಟು ಮತ್ತೆ ಮುದ್ದಿನ ಮಳೆಗರೆದಳು.

ಒಂದು ಅಸಂಪೂರ್ಣ ಬಾಳಿನ ಅವ್ಯಕ್ತ ಆಸೆಯ ಘೋರ ನಿರಾಸೆಯಿಂದೊದಗುವ ಭಾವ ತೀಕ್ಷ್ಣತೆಯನ್ನು ತಾರಾ ಮೊದಲ ಸಲ ಕಂಡಾಗ ಅವಳಿಗೆ ಮನೋರಮೆಯ ಬಗ್ಗೆ ಕನಿಕರ ಮೂಡಿತು. ಅದರ ಜೊತೆಗೇ ಭೀತಿಯೂ ಆವರಿಸಿತು. ತಾನೊಂದು ಚಕ್ರವ್ಯೂಹದಲ್ಲಿ ಒದ್ದಾಡುತ್ತಿರುವಂತೆನ್ನಿಸಿತು ಅವಳಿಗೆ. ವಿಷಮ ಭಾವಗಳೆಷ್ಟೊ ಅವಳ ಹೃದಯವನ್ನು ಲುಗಾಡಿಸಿದವು. ಪತಿಯ ಭಾವ ಜೀವನವೆಲ್ಲಿ ಕರಗಿ ನೀರಾಗುವದೋ ಎಂದು ಗಡಗಡ ನಡುಗಿದಳು. ಆವಳಿಗೆ ಮೊದಲ ಸಲ ಅಚ್ಯುತರಾಯರ ತುಂಗಮ್ಮನ ನೆನಪಾಯಿತು. ಈ ಬಾಳನ್ನೊಮ್ಮೆ ನೀಗಿಕೊಂಡು ಹಳ್ಳಿಗೆ ಓಡಬೇಕೆನ್ನಿಸಿತು. ಆದರೆ ಈ ಭಾವ ಮನೋರಮೆಯ ಕಣ್ಣೀರನ್ನು ಕಂಡ ಕೂಡಲೆ ಮಾಯವಾಯಿತು. ಅವಳಿಗೆ ಬೇಕಾದ ಸಹಾನುಭೂತಿ, ಕನಿಕರಗಳನ್ನು ನೀಡುವದು ತನ್ನ ಕರ್ತವ್ಯವೆಂದು ಬಗೆದಳು. ಎಂತಲೇ— "ಈ ಮಕ್ಕಳು ನಿನ್ನವೇ ಅಲ್ಲವೆ. ಮನ್ನಕ್ಕ?" ಎಂದು ಸಂತೈಸಿದಳು. ಆ ವೇಳೆಗೆ ಮನೋರಮೆಗೆ ತನ್ನ ಭಾವ ಪ್ರದರ್ಶನದಿಂದ ಪಶ್ಚಾತ್ತಾಪ ಮೂಡಿತ್ತು. ಆ ತೀಕ್ಷ್ಣ ಉದ್ರೇಕ ಸರಿದು ಹೋದ ಮೇಲೆ ಅವಳಿಗೆ ದಣಿವೂ ಬಂದಿತ್ತು.— "ಹಾಗಾದರೆ ಕಿರಣ ನಮ್ಮ ಮನೆಯಲ್ಲೇ ಇರಲಿ ತಾರಕ್ಕ."

"ಯಾರು ಬೇಡವೆನ್ನುತ್ತಾರೆ ಮಾರಾಯಳೆ. ಅವನನ್ನು ಹಿಡಿಯುವದು ನನಗೂ ಅಸಾಧ್ಯವಾಗಿದೆ. ಖುಶಾಲ ಕರಕೊಂಡು ಹೋಗು. ಮಾಮೀ ಮಾತು ಕೇಳಿಸಿತಿಲ್ಲೊ ಕಳ್ಳಾ. ನೀ
ನೋಡು."

"ಒಲ್ಲೆ. ನಾ ಮರೊ ಒಲ್ಲೆ."

"ಯಾಕೋ ತುಂಟಾ?"

"ಮಾಮಿ ನನಗ ಹಗಲೆಲ್ಲ ಮುದ್ದೇ

"ದಿನಾ ಪೇಡೆ ಕೊಡೂದನ್ನ ಮರೆತೇನೊ ಲುಚ್ಚಾ?"

"ಪೇಡೆ ಕೊಡತೀದಿ. ಆದರ ಮುದ್ದೂ ಕೊಡತೀಯಲಾ." ಅವನ ಮಾತಿಗೆ ಇಬ್ಬರೂ ಬಿದ್ದು ಬಿದ್ದು ನಕ್ಕರು.

ಮನೋರಮೆಯನ್ನು ಮನೆಗೆ ಕಳಿಸಿದಾಗ ಮಧ್ಯಾಹ್ನವಾಗಿತ್ತು. ಅವಳು ಹೋಗುವಮುಂದೆ ಅಡಿಗೆ ಎಲ್ಲವನ್ನೂ ತಾನೇ ಕಳಿಸುವದಾಗಿ ಹೇಳಿ ಹೋಗಿದ್ದರಿಂದ ಆ ಕೆಲಸವೂ ತಪ್ಪಿತು. ಪತಿ ಬರುವ ದಾರಿ ಕಾಯುತ್ತ ಸ್ವಸ್ಥಳಾಗಿ ಕುಳಿತಳು. ಒಂದು ಗಂಟೆಯಾದರೂ ಅವನು ಬರಲಿಲ್ಲ. ತಾರಾ ಸ್ನಾನ ತೀರಿಸಿ ತಾಟು ಹಾಕಿ ಮತ್ತೆ ಹೊರಬಂದಳು. ಅವನು ಬರಲೇಯಿಲ್ಲ. ಅಡಿಗೆಯಾಳು ಊಟ ತಂದಿರಿಸಿ, ವಿಶ್ವಾಸ ಈಗಲೇ ಬರುವ ಸಂಬಂಧವಿಲ್ಲವೆಂದೂ, ಊಟ ತೀರಿಸಬೇಕೆಂದು ಹೇಳಿ ಹೋದ. ಈ ಮಾತು ದಿನದ ಮಾತಾಗಿದ್ದರಿಂದ ತಾರಾನಿಗೆ ಅಷ್ಟು ಅಚ್ಚರಿ ಎನ್ನಿಸಲಿಲ್ಲ. ಊಟ ಬೇಸರವಾಗಿ ಅವಳು ಸುಮ್ಮನೆ ಎಂಜಲು ಮಾಡಿ ಕೈತೊಳೆದುಕೊಂಡಳು. ಮನಸ್ಸು ವ್ಯಾಕುಲದಿಂದ ತುಂಬಿತ್ತು.

ಅವಳ ಸಮಸ್ಯೆಗಳೀಗ ದ್ವಿಗುಣಿತವಾಗಿದ್ದವು. ವಿಶ್ವಾಸನ ಕಾವ್ಯ ಜೀವನ ಎಚ್ಚರಿಸುವದು;- ಮನೋರಮೆಯ ಬಾಳಿಗೊಂದು ನೆಲೆಯನ್ನು ತಂದು ಕೊಡುವದು. ಮೊದಲಿನದು ಸಮಸ್ಯೆಯೇ ಅಲ್ಲವೆಂದು ಅವಳ ಬಗೆದಳು. ಎರಡನೆಯದು ಮಾತ್ರ ಅವಳಿಗೆ ಬಹಳ ಜಟಿಲವಾ ತೋರಿತು. ಮನೋರಮೆಯ ಉದ್ರೇಕಕ್ಕೂ, ವಿಶ್ವಾಸನ ಕಾವ್ಯ ಜೀವನಕ್ಕೂ ತುಂಬಾ ಅಂತರ ಕಂಡಳು. ಮನೋರಮೆಯ ಉದ್ರೇಕದಲ್ಲಿ ಬಾಳಿನ ಕಹಿ ತುಂಬಿದ್ದರೆ, ವಿಶ್ವಾಸನ ಜೀವನದಲ್ಲಿ ಬಾಳನ್ನು ಸವಿ ಮಾಡುವ ಸುಮಧುರ ಭಾವ ತುಂಬಿತ್ತು. ಈ ಸವಿಯ ಸಾರ್ಥಕತೆಯನ್ನು ಬಿಂಬಿಸಿ ಅವನನ್ನು ಮೊದಲಿನ ಸ್ಥಿತಿಗೆ ತರುವದು ಅವಳಿಗೆ ಅಸಾಧ್ಯವಾಗಿ ತೋರ ಲಿಲ್ಲ. ಆದರೆ ಜೀವನ ಕಹಿಯನ್ನೇ ಬೇರು ಸಹಿತ ಕೀಳಲು ದಾರಿಯ ವುದೆಂದು ಅವಳು ಯೋಚಿಸುವಂತಾಯಿತು. ಅವನು ಬಂದ ಕೂಡಲೆ ಎಲ್ಲವನ್ನೂ ಚರ್ಚಿಸಿ ಬಿಡಬೇಕೆಂದು ಅವಳು ಸಧ್ಯ ಎಲ್ಲವನ್ನೂ ಹತ್ತಿಕ್ಕಿಕೊಂಡಳು.

ರಾತ್ರಿ ಹತ್ತುಗಂಟೆಯಾದರೂ ವಿಶ್ವಾಸ ಬರಲಿಲ್ಲ. ಮುಂದೆ ಹೆನ್ನೈದು ದಿನಗಳಾದರೂ ಅವನ ಸುಳಿವಿಲ್ಲ. ಕೆಲಸದ ಒತ್ತಡದ ಮೂಲ ಕೂಡಲೇ ಬರುವದು ಸಾಧ್ಯವಿಲ್ಲೆಂಬ ಸಂದೇಶ ಮಾತ್ರ ಬಂದಿತ

ತಾರಾ ಕಳವಳಕ್ಕೀಡಾದಳು. "ಒಂದು ದಿನವಾದರೂ ಬಂದು ಹೋಗಲು ಸಾಧ್ಯವಿಲ್ಲವೇಕೆ? ಅವರಿರುವದಾದರೂ ಎಲ್ಲಿ?...." ಎಂದು ವಿಚಾರಿಸುತ್ತ ಅವಳು ಬೆಂದು ಹೋದಳು.

ವಿಸ್ವಾಸ, ವೆಂಕಟೇಶ ಆ ಕ್ಲಬ್ಬಿನಲ್ಲಿದ್ದರು. ಹೂವಿನ ಹಳ್ಳಿಯ ನಿಲ್ದಾಣದಿಂದ ಪೂರ್ವಾಭಿಮುಖವಾಗಿ ಹೊರಡುವ ವಿಶಾಲ ಬೀದಿಗುಂಟ ಸಾಗಿದರೆ ಅಷ್ಟ ಮಗ್ಗಲು ಒಂದು ಪುಟ್ಟ ಬೀದಿ ಸಿಗುತ್ತದೆ. ಆ ಬೀದಿಯಿಂದ ಒಳಗೆ ಸಾಗಿ ಬಲಕ್ಕೆ ಹೊರಳಿದರೆ ಅಲ್ಲಿ ತೀರ ಚಿಕ್ಕದಾದ ಒಂದು ಕಾಡು ಹಾದಿ ಒಂದು ಕಟ್ಟಡಕ್ಕೆ ಒಯ್ಯುತ್ತದೆ. ಹಗಲು ಅಲ್ಲಿ ಯಾರ ಸುಳಿವೂ ಇರುವದಿಲ್ಲ. ರಾತ್ರಿಯಾದಂತೆ ಅಲ್ಲಿ ಜೀವಕಳೆ ತುಂಬುತ್ತದೆ. ಅನೇಕ ಸಿರಿವಂತರ ವಿಶ್ರಾಂತಿ ಸದನವೇ ಅದು. ಅಲ್ಲಿ ಕುಡಿತಕ್ಕೆ ಸಾಕಷ್ಟು ಅನುಕೂಲವಿದೆ. ಆಗಾಗ ಕೈಬಳೆಗಳ ಸದ್ದೂ ಕೇಳ ಬರುತ್ತದೆ. ಹಣದ ಜಣ ಝಣತ್ಕಾರದಲ್ಲಿ ಅಲ್ಲಿಯ ಜನ ಅಮಲು ಬರುವಂತೆ ಆಟವಾಡುತ್ತಾರೆ. ಒಂದು ರಾತ್ರಿಯಲ್ಲೇ ಬಂದವರಲ್ಲಿಯ ಹಲವರ ಕಿಸೆ ಬರಿದು; ಇನ್ನೊಬ್ಬರ ಜೇಬು ಹಿರಿದು. ಆ ವಿಲಾಸ, ಅಮದ ಸಾಮಾನ್ಯ ಜನಕ್ಕೆ ನಡುಕವನ್ನೇ ತರುವಂತಹದು. ವೆಂಕಟೇಶನೇ ಆ ಕ್ಲಬ್ಬಿನ ಆಧಾರ ಸ್ತಂಭ. ಅವನ ಬಲವಂತದಿಂದ ಅಲ್ಲಿಗೆ ಬಂದ ವಿಶ್ವಾಸನಿಗೆ ಅಲ್ಲಿಯ ವಾತಾವರಣ ಅಸಹ್ಯವನ್ನೇ ಹುಟ್ಟಿಸಿತು. ಅಲ್ಲಿ ನೆರೆದವರೆಲ್ಲ ಸಮಾಜದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನ ಪಡೆದವರು, ಹಣವಂತರು, ವ್ಯಾಪಾರಿಗಳು, ಅಧಿಕಾರಿಗಳು– ಎಲ್ಲರೂ ಅಲ್ಲಿ ತೇಲುಗಣ್ಣು ಹಾಕುತ್ತ ಮದೋನ್ಮತ್ತರಂತೆ ಕುಣಿದಾಡುತ್ತಿದ್ದರು. ಅವರ ಹಿಡಿತದಲ್ಲಿ ಸಿಕ್ಕ ಸಮಾಜಕ್ಕೆ ಯಾವ ಉಳಿಗಾಲವೂ ಇಲ್ಲವೆನ್ನಿಸಿತು ಅವನಿಗೆ. "ಆದರೂ ಸಮಾಜ ಅವರನ್ನು ಸಹಿಸುತ್ತದೆ. ಇಂತಹ ನೀತಿ ಭ್ರಷ್ಟರನ್ನು ಕಾಪಾಡುತ್ತದೆ ...."

ಆ ಹೊತ್ತಿಗೆ ವೆಂಕಟೇಶ ಮನಸೋಕ್ತವಾಗಿ ಕುಡಿದು ಕೇಕೆ ಹಾಕುತ್ತಿದ್ದ. ಉಳಿದವರ ಪಾಡಂತೂ ಹೇಳತೀರದು. ಆ ದೃಶ್ಯ ಅಸಹನೀಯವಾಗಿತ್ತು. ಅರ್ಧ ಜಾರಿದು ಬಿದ್ದ ಸೆರಗಿನ ಪರಿವೆಯಿಲ್ಲದೆ, ಮುಖ

ದಲ್ಲಿ ಸೌಂದರ್ಯದ ಲವಲೇಶವಿಲ್ಲದಿದ್ದರೂ ವೈಯಾರ ತೋರುತ್ತ ಬಂದ ಮದಿರಾಕ್ಷಿಯೋರ್ವಳು ಬುರುಗು ನಿಂತ ಗ್ಲಾಸು ತೆಗೆದುಕೊಂಡು ಅವನ ಹತ್ತರ ಬಂದಳು. ಅವಳನ್ನು ನೋಡಿ ಅವನಿಗೆ ಹೇಸಿಕೆಯಾಯಿತು. ಅಲ್ಲಿಂದೆದ್ದು ಓಡಿ ಹೋಗಬೇಕೆನ್ನಿಸಿತು. ಅಷ್ಟರಲ್ಲಿ ಅವಳು ಮುಂದೆ ಬಂದು ಲಜ್ಜೆಗೆಟ್ಟವಳಂತೆ ಅವನ ಕೈವೈ ತಾಕುವಂತೆ ನಿಂತು ಆ ಗ್ಲಾಸನ್ನು ನೀಡಿ ಹಲ್ಲು ಕಿರಿದಳು. ಅವಳನ್ನು ದುರುಗುಟ್ಟಿ ನೋಡುತ್ತ ಕೈಹಿಂದೆ ತೆಗೆದುಕೊಂಡು ಅವನು- "ಕುಡಿಯುವದಿಲ್ಲ"ವೆಂದು ಹೇಳಿದ. ಅವಳು ಖೊಳ್ಳನೆ ನಕ್ಕು "ಇದು ಹುಳಿ ಹೆಂಡವಲ್ಲ ರಾಯರೆ. ವೆಂಕಟೇಶರಾಯರು ಗೋವೆಯಿಂದ ತರಿಸಿದ...."

"ನಾನು ಏನೂ ಕುಡಿಯುವದಿಲ್ಲ...."

"ಅವರಿಗೆ ಸೋಡಾ ಕೊಡು...." ವೆಂಕಟೇಶ ತೊದಲುತ್ತ ಹೇಳಿದ. ಅವನ ಆಗ್ರಹಕ್ಕೆ ವಿಶ್ವಾಸ ಸೋಡಾ ಮಾತ್ರ ಕುಡಿದ. ಅದೇನೊ ಖಾಟು ಬಡಿದವರಂತೆ ಅದನ್ನು ಕುಡಿಯುವಾಗ ಅನೇಕ ಸಲ ಕೆಮ್ಮಿದ. ಅವನಿಗೆ ಓಕರಿಕೆ ಬರುವಂತಾಯಿತು. ಕ್ಲಬ್ಬಿನ ವಿಚಾರವಾಗಿ ಅವನಿಗೆ ಜಿಗುಪ್ಸೆ ಮೂಡಿತು. ಗೆಳೆಯನ ಅವಸ್ಥೆ ಅವನನ್ನು ಕಂಗೆಡಿಸಿತು. ಮನೆಯಲ್ಲಿ ತುಂಬು ಮುಖದ ಮನೋರಮೆಯನ್ನು ಕಣ್ಣೆತ್ತಿ ಸಹ ನೋಡದ ಈ ಮನುಷ್ಯ ಇಲ್ಲಿ ಗುಳಿಬಿದ್ದ ಕಣ್ಣುಗಳ, ಬತ್ತಿ ಹೋದ ಗಲ್ಲಗಳ ಅಸಹ್ಯ ತುಂಬಿದ ಹೆಣ್ಣುಗಳೊಡನೆ ಚಕ್ಕಂದವಾಡುತ್ತಿರುವದು ಅವನಿಗೆ ವಿಚಿತ್ರವಾಗಿ ತೋರಿತು. ಅವನಲ್ಲಿ ನಿಲ್ಲಲಾರದೆ ನೇರವಾಗಿ ತಾನಿಳಿದುಕೊಂಡ ಹಾಟೇಲಕ್ಕೆ ಬಂದ. ಅನನಂತರಂಗದಲ್ಲಿ ಕಲಮಲ ಎದ್ದಿತ್ತು.- "ಈ ಬಾಳು ಕ್ಷುದ್ರವಾಗಿದೆ; ಅಸಹ್ಯವಾಗಿದೆ. ಇದರಿಂದ ಅಧೋಗತಿ ತಪ್ಪಿದ್ದಲ್ಲ. ಈ ನರಕದ ಹುಳಗಳೊಡನೆ ಜೀವನ ಸಾಗಿಸುವದು ಮಹಾ ಪಾಪವಾಗಿದೆ. ಇಲ್ಲಿಂದ ನಾನು ಬಿಡುಗಡೆ ಹೊಂದಬೇಕು. ಬಿಡುಗಡೆ ಹೊಂದಿ ಮಾಡಬೇಕೇನು? ಮತ್ತೆ ಬೀದಿಯ ಭಿಕಾರಿಯಾಗಿ ಹೆಂಡಿರು ಮಕ್ಕಳನ್ನು ಗೋಳಿಗೀಡು ಮಾಡಬೇಕೆ? ಈಗ ಅವರೆಲ್ಲ ಎಷ್ಟು ಸುಖನಾಗಿದ್ದಾರೆ. ಅವರಿಗೆ ಸುಖವಾದ ಬಾಳೂ ನನಗೂ ಸುಖವೇ.

ಆದರೆ ಈ ಜೀವನದಲ್ಲಿ ಪಾವಿತ್ರ್ಯತೆ ಸಾಧ್ಯವಿಲ್ಲವೆ?....ಏಕೆ ಸಾಧ್ಯವಿಲ್ಲ? ತಾರಾ ಹೇಳಿಲ್ಲವೆ ಗೆಳೆಯನನ್ನು ಎಚ್ಚರಿಸುವದು ನನ್ನ ಕರ್ತವ್ಯವೆಂದು. ಹೌದು, ಪ್ರಯತ್ನಮಾಡಬೇಕು. ಗೆಳೆಯನ, ಮನೋರಮೆಯ ಬಾಳನ್ನು ಉದ್ಧರಿಸಬೇಕು. ಅವನನ್ನು ಒಳ್ಳೆಯ ಮಾರ್ಗಕ್ಕೆ ಹಚ್ಚುವದು ನನ್ನ ಧರ್ಮ. ಅವನು ನನ್ನ ಮಾತನ್ನು ಕೇಳುತ್ತಾನೆ. ಅವನಿಗೆ ನನ್ನ ಮೇಲೆ ವಿಶ್ವಾಸವಿದೆ. ಆ ವಿಶ್ವಾಸದ ಸಾರ್ಥಕತೆಯನ್ನು ನಾನು ಮಾಡಿಕೊಳ್ಳಬೇಕು." ಅವನೊಂದು ನಿರ್ಧಾರಕ್ಕೆ ಬಂದು ಸಮಾಧಾನ ತಂದುಕೊಳ್ಳುವ ಹೊತ್ತಿಗೆ, ಹಾಲಹಳ್ಳಿಯ ಬಾಬಾಸಾಹೇಬ ಕೋಣೆಯಲ್ಲಿ ಕಾಲಿಟ್ಟ. ಅವನ ಮೊಗದಲ್ಲಿ ಉಗ್ರಕಳೆ ತಾಂಡವವಾಡುತ್ತಿತ್ತು; ಹುಬ್ಬು ಗಂಟಿಕ್ಕಿದ್ದವು. ಅವನ ಈ ಉಗ್ರರೂಪದ ಕಾರಣ ತಿಳಿಯದೆ ವಿಶ್ವಾಸ- "ಬರ್ರಿ, ಬಾಬಾಸಾಹೇಬ. ನಿಮ್ಮ ಚೀಲಗಳನ್ನೆಲ್ಲ ರವಾನಿಸಿ ಆಯಿತೆ?" ಎಂದು ವ್ಯವಹಾರದ ಮಾತೆತ್ತಿದ.

"ಎಲ್ಲಿಯ ಚೀಲ ಏನು ಕಥಿ—ನಿಮ್ಮ ಗುಮಾಸ್ತ ಜೀವಣ್ಣ ಎಲ್ಲವನ್ನೂ ತಲೆಕೆಳಗೆ ಮಾಡಿದ. ನಿಮ್ಮ ರಾಯರಿಗೆ ಕೆಲ ದಿವಸದಲ್ಲಿಯೇ ತಂಬೂರಿ ಹಿಡಿಸದಿದ್ದರೆ ನನ್ನ ಹೆಸರು ಬಾಬಾಸಾಹೇಬನಲ್ಲ!"

"ಆದದ್ದಾದರೂ ಏನು ಬಾಬಾಸಾಹೇಬ?"

"ನನ್ನ ಭಾಗದ ಚೀಲಗಳಲ್ಲಿ ಅರ್ಧ ಚೀಲಗಳನ್ನು ಚೀಲಕ್ಕೆ ಐದು ರೂಪಾಯಿ ಹೆಚ್ಚು ಮಾಡಿ ನನ್ನ ವೈರಿ ಶಮುಸ್ಸುದ್ದೀನನಿಗೆ ಮಾರಿದ್ದಾನೆ. ಹೀಗೇಕೆ ಎಂದು ಕೇಳಿದರೆ ಈ ವ್ಯವಹಾರವೇ ಹೀಗೆ ಅನ್ನುತ್ತಾನೆ. ಹೀಗಾದರೆ ನಮ್ಮ ವ್ಯವಹಾರ ಹೇಗೆ ಸಾಗಬೇಕು ಹೇಳಿರಿ?"

ವಿಶ್ವಾಸ ಜೀವಣ್ಣನ ಮೇಲೆ ಕಿಡಿಕಿಡಿಯಾದ. ಮಾತು ಮಿಂಚಿ ಹೋಗಿದ್ದರಿಂದ ಆಗ ಏನೂ ಹೇಳದೆ ಬಾಬಾಸಾಹೇಬನಿಗೆ ಸಮಾಧಾನ ಹೇಳಿ ಇನ್ನು ಮೇಲೆ ಆ ವ್ಯವಹಾರ ತಾನೇ ನೋಡಿಕೊಳ್ಳುವ ಮಾತು ಕೊಟ್ಟ.— "ಅವನಿಂದ ರಾಯರಿಗೆ ಉಳಿಗಾಲವಿಲ್ಲ ಬಾಬಾಸಾಹೇಬ.

ಮಕ್ಕಳೊಂದಿಗೆ ಎಂದು ನಾನು ಸಡಿಲು ಬಿಟ್ಟರೆ ಆ ಸಲಿಗೆ ನಾಯಿ ತಲೆಗೇ ಏರಹತ್ತಿದೆ."

"ರಾಯರನ್ನು ಮುಳುಗಿಸಲು ಅವನು ಪಣ ತೊಟ್ಟಹಾಗಿದೆ."

"ಉಂಡ ಮನೆಗಳ ಎಣಿಸುವ ನೀಚ."

"ಮೊದಮೊದಲು ರಾಯರೆಂದರೆ ಜೀವಣ್ಣನಿಗೆ ಎಷ್ಟು ಪ್ರೀತಿ! ಅವರು ಹಾಗೆ ಮಾಡದಿದ್ದರೆ ಅವನೂ ಚೆನ್ನಾಗಿಯೇ ಇರುತ್ತಿದ್ದ. ಅಂದಿನಿಂದ ಅವರೂ ಅಸಡ್ಡೆಯಿಂದ ಅವನನ್ನು ಕಾಣುತ್ತಾರೆ. ಅವನೂ ಉರಿದು ಬೀಳುತ್ತಾನೆ."

ಜೀವಣ್ಣನ ನಡುವಳಿಕೆಗೊಂದು ಇತಿಹಾಸವಿರುವದೆಂದು ಬಗೆದ ವಿಶ್ವಾಸ ಅದನ್ನು ಕೇಳಲು ಆತುರನಾಗಿ- "ರಾಯರು ಮಾಡಿದ್ದಾದರೂ ಏನು?"

"ಬಹಳ ಅನ್ಯಾಯ ಮಾಡಿದರು ರಾಯರೆ. ಜೀವಣ್ಣನ ಮಗಳು ಚಿನ್ನದಂಥ ಹುಡುಗಿ. ಪಾಪ! ಮದುವೆಯಾದ ಹೊಸದರಲ್ಲಿಯೇ ಅವಳ ಗಂಡ ತೀರಿದ. ಅವನು ಅವಳನ್ನು ತನ್ನ ಪ್ರಾಣಪದಕದಂತೆ ನೋಡಿಕೊಳ್ಳುತ್ತಿದ್ದ. ಮೊದಲಿನಿಂದಲೂ ರಾಯರು ಅವನಿಗೆ ಆಶ್ರಯದಾತರು. ಅವರ ಸಲಿಗೆಯಲ್ಲಿ ಅವನಿಗೆ ಅಭಿಮಾನವಿತ್ತು. ಅವರು ಮನೆಗೆ ಬಂದು ಹೋಗುವದನ್ನು ಅವನೆಂದೂ ಪ್ರತಿಭಟಿಸಲಿಲ್ಲ. ಆದರೆ ರಾಯರು ಹಾಲಿನಲ್ಲಿ ಹುಳಿ ಹಿಂಡಿದರು. ಕುಡಿದ ದುಂದಿನಲ್ಲಿ ಅವಳ ಮೇಲೆ ಕೈಮಾಡಿದರು. ಜೀವಣ್ಣನಿಗೆ ಸಿಡಿಲೆರಗಿದಂತಾಗಿ ಈ ಸೇಡಿನ ಕೆಲಸ ಆರಂಭಿಸಿದ. ನಿಮ್ಮ ರಾಯರು ಹಾಗೆ ಮಾಡಬಾರದಿತ್ತು...."

ವಿಶ್ವಾಸನ ಮೈ ಜೋರೆಂದು ಬೆವೆತಿತು; ನಾಲಿಗೆ ಒಣಗಿತು. ಆದಿನ ಜೀವಣ್ಣ ನಕ್ಕು ಗೋಣುಹಾಕಿದ ಚಿತ್ರ ಹೇಳಿ ಕಳಿಸಿದಂತೆ ಬಂದು ಧುತ್ತೆಂದು ನಿಂತಿತು. ಇಷ್ಟುದಿನಗಳವರೆಗೆ ನೀಚನೆಂದು ತಿಳಿದ ಜೀವಣ್ಣ ಈಗ ವಿಶ್ವಾಸನಿಗೆ ಒಳ್ಳೆಯವನಾಗಿ ತೋರಿದ. "ನೀಚರಾರು? ಜೀವಣ್ಣನೊ

ವೆಂಕಟೇಶನೊ?" ವಿಶ್ವಾಸನ ಅಂತರಂಗವನ್ನು ಚೇಳು ಕಟುಕಿತು. ಬಾಬಾ ಸಾಹೇಬನೆದುರು ತನ್ನ ಮನದ ಹೊಯ್ದಾಟ ತೋರಗೊಡದೆ ಅವನು– ರಾಯರು ಅಂಥವರಲ್ಲ ಸಾಹೇಬ. ನಿಶೆಯಲ್ಲಿ ಹೀಗೆ ಮಾಡಿದ್ದರೂ ತಪ್ಪು. ಆದರೆ ವ್ಯವಹಾರದಲ್ಲಿ ಜೀವಣ್ಣ ಪ್ರಾಮಾಣಿಕನಾಗಿರಬೇಡವೆ?"

"ಪೆಟ್ಟು ತಿಂದ ಹಾವು ನೋವಿಗಾಗಿ ಸೇಡನ್ನಪೇಕ್ಷಿಸುತ್ತದೆ." ಎಂದು ಬಾಬಾಸಾಹೇಬ ನಕ್ಕ. ಅವನಿಗೆ ವಿಶ್ವಾಸನ ಬಗ್ಗೆ ಕನಿಕರ ಮೂಡಿತೇನೊ ಅವನನ್ನೊಮ್ಮೆ ಕರುಣಾಪೂರ್ಣನಾಗಿ ನೋಡಿದ. ಆ ನೋಟವನ್ನು ಸಹಿಸುವದು ವಿಶ್ವಾಸನಿಗೆ ಅಸಾಧ್ಯವಾಗಿತ್ತು.– "ರಜಾಕನ ಮೇಲೆ ನಿಮ್ಮ ರಾಯರು ತೋರಿಸುವ ಪ್ರೀತಿಯು ಒಂದಿಲ್ಲೊಂದುದಿನ ಹೀಗೆ ಆಗುವದು ನೋಡಿರಿ." ಬಾಬಾಸಾಹೇಬ ಮತ್ತೊಂದು ಎಳೆ ಹಿಡಿದು ಜಗ್ಗಿದ. ಈ ಹುತ್ತದಲ್ಲಿ ಮತ್ತಾವ ಹಾವು ಹೊರಬೀಳುವದೊ ಎಂದು ವಿಶ್ವಾಸ ಹೆದರಿದ.– "ರಜಾಕ್ ಪ್ರಾಮಾಣಿಕ ಎಜಂಟ ನಾಗಿದ್ದಾನೆ."

"ಅವನು ರಾಯರಿಗೆ ಬಾಟ್ಲಿಗಳನ್ನು ಪೂರೈಸುವ ಎಜಂಟನಾಗಿ ಮಾತ್ರ ಇರುವದಿಲ್ಲ. ಅವರ ಕಾಮ ತೃಪ್ತಿಗೆ ಹೆಣ್ಣನ್ನು ಪೂರೈಸುವ ಎಜಂಟನೂ ಆಗಿದ್ದಾನೆ" ಬಾಬಾಸಾಹೇಬ ವ್ಯಂಗ್ಯವಾಗಿ ನಕ್ಕ. ಅವನ ನಗೆ ವಿಶ್ವಾಸನ ಅಂತರಾಳವನ್ನೇ ತಿವಿಯಿತು. ವೆಂಕಟೇಶನೀಗ ಅವನಿಗೆ ತಿರಸ್ಕರಣೀಯನಾಗಿ ತೋರಿದ. ತಾನೊಂದು ಬಲೆಯಲ್ಲಿ ಸಿಕ್ಕ ಜೇಡರ ಹುಳವೆನ್ನಿಸಿತು. ಆಕ್ಷಣ ಅವನಿಗೆ ಆ ದಿನ ವೆಂಕಟೇಶ ಬಣ್ಣಿಸಿದ ತಾರಾನ ವರ್ಣನೆ ನೆನಪಾಯಿತು. ಜೀವಣ್ಣನ ವಿಧವೆ ಮಗಳೂ ಕಾಣಿಸಿಕೊಂಡು ದುರ್ಮಾರ್ಗಿಯಾದ ಗೆಳೆಯನ ಜೀವನ ಅವನಿಗೊಂದು ಭೂತವಾಗಿ ಕಂಡಿತು. ಅನೇಕ ವಿಚಾರಗಳು, ಸಮಸ್ಯೆಗಳು ತಾಕಲಾಡಿದವು. ಯಾವದೂ ನಿರ್ಧಾರವಾಗದೆ ಅವನ ತಲೆ ಭಾರವಾಯಿತು. ಆ ವೇಳೆಯಲ್ಲಿ ಹೋಟಲ್ಲು ಮಾಣಿ ಚಹ ತಂದಿತ್ತು ಹೋದ. ವಿಶ್ವಾಸ ಒಂದು ಕಪ್ಪನ್ನು ಬಾಬಾ ಸಾಹೇಬನಿಗೆ ನೀಡಿ ಅವನಿಗೆ ಕೆಲವು ಸ್ವಾಂತನ ಪರ ಮಾತು ಹೇಳಿ ಬೀಳ್ಕೊಟ್ಟ. ಅವನು ಹೋದೊಡನೆ ವಿಶ್ವಾಸನ ಯೋಚನೆ ಮತ್ತೆ

ಮರುಕೊಳಿಸಿತು.- "ವೆಂಕಟೇಶನನ್ನು ಅಡ್ಡಹಾದಿಗೆ ಹಚ್ಚಲು ಕಾರಣನಾದ ರಜಾಕನನ್ನು ಒದ್ದು ಹೊರಗೆ ಹಾಕಬೇಕು. ಧನಿಯ ವ್ಯವಹಾರ ಹಾಳು ಮಾಡುತ್ತಿರುವ ಜೀವಣ್ಣನನ್ನೂ ಅವನು ಅಪ್ರಾಮಾಣಿಕನಾಗಿದ್ದಾನೆ...."

"ಜೀವಣ್ಣನೆಂದಿಗೂ ಅಪ್ರಾಮಾಣಿಕನಲ್ಲ. ಅವನು ಸೇಡದುಂಬಿದ್ದಾನೆ. ಅವನಲ್ಲಿ ಪ್ರತಿಕಾರ ಭಾವ ತುಂಬಿದೆ."

"ಈ ಸೇಡಿನ ಭಾವದಿಂದ ಹೋದ ಮರ್ಯಾದೆ ಬಂದೀತೆ?"

"ಅದನ್ನನುಭವಿಸಿದವರೇ ಬಲ್ಲರು. ಇಂದು ಆ ವಿಧವೆಯ ಮೇಲೆ ಕೈಮಾಡಿದ ಹಾಗೆ ನಾಳೆ ನಿನ್ನ ಮಡದಿಯ ಮೇಲೆ ಕೈ ಎತ್ತಿದರೆ ನೀನೂ ಜೀವಣ್ಣನಾಗುವಿ."

"ಇದು ಶಕ್ಯವಿಲ್ಲ. ನನ್ನವಳನ್ನು ಅವನು ಪವಿತ್ರವಾಗಿ ಕಾಣುತ್ತಾನೆ."

"ಕಾಮುಕರ ದೃಷ್ಟಿ ಪ್ರಾರಂಭದಲ್ಲಿ ಪವಿತ್ರವಾಗಿಯೇ ಇರುತ್ತದೆ. ರಜಾಕನನ್ನು ವೆಂಕಟೇಶ ಪ್ರೀತಿಸುವದು ಏತಕ್ಕಾಗಿ?.... ನಿನ್ನನ್ನು ಪ್ರೀತಿಸುವದು, ಸಂಪತ್ತು ದಯಪಾಲಿಸಿರುವದು ಏತಕ್ಕಾಗಿ?....ಮಧ್ಯರಾತ್ರಿಯಲ್ಲಿ ನಿನ್ನ ಮಡದಿಯು ಕೈಯಿಂದ ಚಹ ಮಾಡಿಸಿಕೊಂಡು ಕುಡಿದದ್ದು ಏತಕ್ಕಾಗಿ?....ಹೇಳು ಏತಕ್ಕಾಗಿ??...." ವಿಶ್ವಾಸನ ಹೃದಯ 'ಡಗ್-ಡಗ್' ಎಂದು ಸಪ್ಪಳ ಮಾಡಿತು. ಊರಿಗೆ ಹೋಗಿ ತಾರಾನಿಗೆ ಎಲ್ಲವನ್ನೂ ಹೇಳಿ ಮುಂದಿನ ವಿಚಾರ ಮಾಡಬೇಕೆನ್ನಿಸಿತು. ಈ ಕೆಲಸದಲ್ಲೂ ಮರ್ಯಾದೆಯಿಲ್ಲವೆಂದು ಖಚಿತವಾಯಿತು. ಅವನಿಗೆ ತಾನೊಂದು ಮಹಾಪರಾಧ ಮಾಡಿದಂತೆ ತೋರಿ- "ನಾನಿಲ್ಲಿ ಬರಬಾರದಿತ್ತು...." ಎಂದು ನಿಟ್ಟುಸಿರು ಬಿಟ್ಟ. "ಇದೆಲ್ಲವನ್ನೂ ನಾನು ವೆಂಕಟೇಶನಿಂದಲೇ ತಿಳಿಯಬೇಕು. ಆವನ ಸುತ್ತಲು ವೈರಿಗಳು ಬಹಳ. ಇದೂ ಹಾಗೆಯೇ ಇರಬಹುದೆ?" ಈ ಹೊಸ ವಿಚಾರದಿಂದ ಅವನಿಗೆ ಸಮಾಧಾನವಾಗದಿದ್ದರೂ ಗೆಳೆಯನ ಬರುವನ್ನು ಆತುರದಿಂದ ನಿರೀಕ್ಷಿಸುತ್ತ ಕುಳಿತ.

ಊಟದ ವೇಳೆಗೆ ವೆಂಕಟೇಶ ಸ್ವಲ್ಪ ಗಡಿಬಿಡಿಯಿಂದಲೇ ಬಂದು ನೇರವಾಗಿ ವಿಶ್ವಾಸನನ್ನುದ್ದೇಶಿಸಿ– "ಬಾಬಾಸಾಹೇಬನಿಂದಾದರೂ ಜೀವಣ್ಣನ ನೀಚತನ ಗೊತ್ತಾಯಿತಿಲ್ಲೋ? ನೀನು ನಡುವೆ ಬರದಿದ್ದರೆ ಅವನನ್ನೆಂದೋ ಹೊರಗೆ ಹಾಕುತ್ತಿದ್ದೆ. ಇನ್ನೂ ಊರಲ್ಲಿ ಏನೇನು ಅನರ್ಥ ಮಾಡಿದ್ದಾನೊ. ನಾನೀಗಲೇ ಊರಿಗೆ ಹೊರಡುತ್ತೇನೆ. ನೀನು ಎಲ್ಲ ಕೆಲಸ ತೀರಿಸಿಕೊಂಡು ಒಂದೆರಡು ದಿನಗಳಲ್ಲೇ ಬಂದು ಬಿಡು."

"ನಾನು ಬರುವವರೆಗೆ ಜೀವಣ್ಣನಿಗೆ ಕೈ ಹಚ್ಚಬೇಡ. ನಾನೇ ಅವನ ಸಮಾಚಾರ ತೆಗೆದುಕೊಳ್ಳುತ್ತೇನೆ. ನನಗೆ ಜೀವಣ್ಣನಿಗಿಂತ ರಜಾಕನದೇ ಭೀತಿ. ಅವನನ್ನೇ ಮೊದಲು ಮನೆಗೆ ಕಳಿಸಬೇಕು."

"ನಿನಗೆ ಹುಚ್ಚು ಹಿಡಿದಿಲ್ಲವಷ್ಟೇ ವಿಶ್ವಾಸ. ಅವನನ್ನು ಮನೆಗೆ ಕಳಿಸಿದರೆ ಪ್ರಾಪ್ತಿಗೆ ಸೊನ್ನೆ. ಅವನು ಮಾಡುತ್ತಿರುವ ಕೆಲಸವನ್ನು ಯಾರಿಂದಲೂ ಮಾಡಲು ಸಾಧ್ಯವಿಲ್ಲ."

"ಅವನ ಕೆಲಸ ಪಾಪಪೂರಿತವಾಗಿದೆ."

"ಹಾಗೆ ಕೇಳಿದರೆ ಅವನದು ನಿಸ್ವಾರ್ಥ ಸೇವೆಯೇ. ಜನರಿಗೆ ಕುಡಿಯಲು ಪೂರೈಸುವದು ನಮ್ಮ ಧರ್ಮ. ಇದರಿಂದ ನಮಗೆ ಕೈ ತುಂಬಾ ಹಣ ಸಿಕ್ಕರೂ ಅವನಿಗೆ ಕೊಡುವದು ಅಲ್ಪವೇ. ಅವನ ಈ ಜನತಾಜನಾರ್ಧನ ಸೇವೆಯನ್ನು ನೀನು ಮೆಚ್ಚಬೇಕು ವಿಶ್ವಾಸ."

"ಅವನಿಂದ ನಮಗೆ ಅಧೋಗತಿ ತಪ್ಪಿದ್ದಲ್ಲ. ಅವನಿಂದ ಯಾರ ಉದ್ಧಾರವೂ ಆಗಲಾರದು. ನನ್ನ ಮಾತನ್ನು ನೀನು ತಿಳಿದುಕೋ ವೆಂಕಟೇಶ."

"ನಮ್ಮ ವ್ಯವಹಾರದಲ್ಲಿ ಉದ್ಧಾರದ ಪ್ರಶ್ನೆಯೇ ಇಲ್ಲ. ನಾವು ಧಾರ್ಮಿಕ ಕಾರ್ಯಗಳನ್ನು ಜರುಗಿಸುವ ಧರ್ಮಾಧಿಕಾರಿಗಳೂ ಅಲ್ಲ. ನಮ್ಮ ವ್ಯವಹಾರ ಹಣಕ್ಕೆ ಸಂಬಂಧಿಸಿದ್ದು; ಬದುಕಿಗೆ ಸಂಬಂಧಿಸಿದ್ದು.

ಈ ಜಗತ್ತಿನಲ್ಲಿ ಯಾರೂ ಯಾರ ಉದ್ಧಾರವನ್ನೂ ಮಾಡುತ್ತಿಲ್ಲ. ನಿನ್ನ ಜೀವನವನ್ನೇ ನೋಡು. ನಿನ್ನ ಕಾವ್ಯ ಶಕ್ತಿಗೆ, ಪ್ರತಿಭೆಗೆ ಜನ, ಸಮಾಜ ಯಾವ ಆಧಾರ ಕೊಟ್ಟಿತು? ಜನಕ್ಕೆ ಅನ್ನಬೇಕು. ಅದನ್ನು ನಾವು ಎಂತಹ ಗಂಡಾಂತರಗಳನ್ನೆದುರಿಸಿ ಪೂರೈಸುತ್ತೇವೆ ಎಂದು ನಿನಗೆ ಗೊತ್ತು. ಅನ್ನ ಕೇಳಿದವರಿಗೆ ಅನ್ನ ಕೊಡುವದು ಪುಣ್ಯ ಕೆಲಸವಲ್ಲವೆ? ಹಾಗೆಯೇ ರಜಾಕನ ಕೆಲಸವೂ ವಿಶ್ವಾಸ....”

“ಈ ವ್ಯವಹಾರದ ವಿಚಾರವಲ್ಲ ವೆಂಕಟೇಶ-ಅವನ ಹೇಯವಾದ ಕೆಲಸಬೇರೆ ಇದೆ. ಯಜಮಾನನ ಹೆಂಡತಿಗೆ ಅನ್ಯಾಯ ಮಾಡಿ ಅವನನ್ನು ಕಾಮಪಿಪಾಸೆಗೆ ಗುರಿ ಮಾಡುವದು ಪುಣ್ಯದ ಕೆಲಸವೆ?....” ಗೆಳೆಯನ ಈ ಮಾತುಗಳಿಂದ ವೆಂಕಟೇಶ ಅಧೀರನಾಗಲಿಲ್ಲ. ಅವನ ಕಣ್ಣು ಪಿಳುಕಿಸಿದವು ಮಾತ್ರ. ಅವನು ಆವೇಗದಿಂದ- “ನಿನ್ನ ತಲೆಯನ್ನು ಯಾರೋ ಚನ್ನಾಗಿ ಊದಿದಂತೆ ಕಾಣುತ್ತದೆ. ನಿನ್ನ ಒಳ್ಳೆಯ ಜೀವನ ಕಂಡು ಮತ್ಸರ ಪಡುವ ಜನ ಇದೇ ಮಾತನ್ನು ಅನೇಕ ಸಾರೆ ಹೇಳಿದ್ದಾರೆ; ನನ್ನ ಮರ್ಯಾದೆ ಕಳೆಯಲು ಹೊಂಚು ಹಾಕಿದ್ದಾರೆ. ಕೇವಲ ರಜಾಕನ ಬಗ್ಗೆಯೇ ಅಲ್ಲ.-ಜೀವಣ್ಣಾನ ಮಗಳಿಗೂ ನನಗೂ ಗಂಟು ಹಾಕಿ ಈ ಜನ ಕೆಲವಿನ ಮೋಜು ಮಾಡಿತು. ಆದರೆ ನಾನೇ ಶುದ್ಧವಾಗಿರುವಾಗ ಯಾರಿಗೂ ಅಂಜುವದಾಗಿಲ್ಲ.”

ಗೆಳೆಯನ ಮಾತುಗಳನ್ನು ಕೇಳಿ ವಿಶ್ವಾಸ ಮೂಕನಾದ. ಯಾವ ಆತಂಕ ವಿಲ್ಲದೆ ತನ್ನ ಹೃದಯವನ್ನೇ ತೆರೆದು ತೋರಿದ ವೆಂಕಟೇಶನ ಬಗ್ಗೆ ಅವನಿಗೆ ಅಭಿಮಾನವೇ ಮೂಡಿತು. ಬಾಬಾಸಾಹೇಬನನ್ನು ಅವನು ಶಪಿಸಿದ.- “ನಾನು ಕೇಳಿದ ಮಾತುಗಳೆಲ್ಲ ಅಸತ್ಯವಾಗಿವೆಯೇ ವೆಂಕಟೇಶ?”

“ಮುಳ್ಳಿನ ಕಂತೆಗಳು, ಆಗದವರು ಹುಟ್ಟಿಸಿದ ಅಸಂಬದ್ಧ ಪ್ರಲಾಪಗಳು ವಿಶ್ವಾಸ. ನನ್ನ ಸ್ವಭಾವವನ್ನು ತಿಳಿದೂ ನೀನು ಸಂಶಯ ತಾಳಬೇಕೆ? ಮೂರ್ಖರ ಮಾತಿಗೆ ಬೆಲೆ ಕೊಡಬೇಕೆ? ಆಮಾತಿರಲಿ. ಮೊದಲು

ನಾವು ನಮ್ಮ ಸ್ಥಿತಿ ಭದ್ರಪಡಿಸಿಕೊಳ್ಳಬೇಕಾಗಿದೆ. ನಿನ್ನ ಸಲುವಾಗಿ ಆರಂಭಿಸಿದ ನೂಲಿನ ವ್ಯವಹಾರವನ್ನು ಚನ್ನಾಗಿ ಪೂರೈಸಿದರೆ ನಿನಗೂ ತುಂಬಾ ಲಾಭ. ನಿನ್ನಲ್ಲಿ ಆ ಯೋಗ್ಯತೆ ಇದೆ. ಆ ಜನರಿಗೆ ಮತ್ತೆ ನಾಲ್ಕು ಡಜನ್ ಬಾಟಲಿ ಪೂರೈಸಬೇಕಾಗಿದೆ. ಜಾತ್ರೆಯ ಮಿಠಾಯಿಗೆ ಸಕ್ಕರೆ ಪಡೆಯಬೇಡವೆ? ವೀರಭದ್ರ ಸಾಹುಕಾರರಿಗೆ ನೂರು ಜೋಡು ನಯವಾದ ಧೋತರ ಜೋಡು ಒದಗಿಸಬೇಕಾಗಿದೆ....ಎಲ್ಲವನ್ನೂ ನಾನೊಬ್ಬನೇ ಹೇಗೆ ಮಾಡಲಿ? ಇಲ್ಲಿಯ ಕೆಲಸ ಮುಗಿಸಿ ಬೇಗ ಬಾ. ಅಲ್ಲೇ ಈ ಕಾರ್ಯಗಳ ಯೋಚನೆ ಹಾಕೋಣ...." ವೆಂಕಟೇಶನ ವಾಕ್ಚತುರಿಯ ಪರಿಣಾಮ ವಿಶ್ವಾಸನ ಮೇಲೆ ಚನ್ನಾಗಿಯೇ ಆಯಿತು. ಅವನ ಸರಳ ಹೃದಯವನ್ನು ವೆಂಕಟೇಶ ಸುಲಭವಾಗಿಯೇ ಆಕ್ರಮಿಸಿದ. ವಿಶ್ವಾಸ ತೀರಾ ಸರಳತನದಿಂದ– "ಆದರೆ ವೆಂಕಟೇಶ, ನೀನು ಈ ಕ್ಲಬ್ಬಿನ ಜೀವನ ಬಿಟ್ಟುಬಿಡಬೇಕು. ಇದರಿಂದ ನನಗೆ ಬಹಳ ಹೇಸಿಕೆಯಾಗಿದೆ."

"ಇದರಿಂದ ನನಗೂ ಸುಖವಿಲ್ಲ ವಿಶ್ವಾಸ. ಆದರೆ ಅನಿವಾರ್ಯವಾಗಿದೆ. ನಮ್ಮ ವ್ಯವಹಾರಕ್ಕೆ ಸಂಬಂಧಿಸಿದವರೆಲ್ಲ ಇಲ್ಲಿ ಬರುತ್ತಾರೆ. ಅವರ ಸಂಬಂಧ ನನಗೆ ವ್ಯವಹಾರ ಕುದುರಿಸುತ್ತದೆ. ನಾನು ಹುಟ್ಟಾ ಕುಡಕನೂ ಅಲ್ಲ. ಕುಡಿದ ಮೇಲೆ ನನಗೆ ಬಹಳ ಪಶ್ಚಾತ್ತಾಪವಾಗುತ್ತದೆ. ಆದರಿದು ಕೊನೆಯುವರೆಗೂ ನಿಲ್ಲುವ ಮಾತಲ್ಲ. ಇಂದಿಲ್ಲ ನಾಳೆ ಈ ಕಳ್ಳಪೇಟೆ ಕೊನೆಗಾಣುತ್ತದೆ. ಆ ಮೇಲೆ ನಾನು ಹೊಸ ಮನುಷ್ಯನಾಗಿಯೇ ಆಗುತ್ತೇನೆ...."

"ಮನೋರಮೆಗಾಗುವ ವ್ಯಥೆಯನ್ನು ನೀನು ತಿಳಿದುಕೊಂಡಿದ್ದೀಯಾ?"

"ನನ್ನನ್ನು ಅವಳು ತಪ್ಪು ತಿಳಿದುಕೊಂಡರೆ ನಾನಾದರೂ ಏನು ಮಾಡಲಿ? ನನ್ನನ್ನು ಕಂಡರೆ ಈದ ಹುಲಿಯಾಗುತ್ತಾಳೆ. ನನ್ನ ಮಾತುಗಳನ್ನೂ ನಂಬುವದಿಲ್ಲ. ಅವಳ ಭ್ರಮನಿರಸನವಾಗುವ ಸಮಯವೂ ಬರಬಹುದು. ನಿನಗೆ ಎಲ್ಲವನ್ನೂ ಹೇಳಿದ್ದೇನೆ. ಮನೋರಮೆಗೆ ನಿನ್ನಲ್ಲಿ ವಿಶ್ವಾಸವಿದೆ. ನಿನ್ನನ್ನವಳು ನಂಬುತ್ತಾಳೆ. ಅವಳಿಗೆ ತಿಳಿ ಹೇಳುವ

ಭಾರವೆಲ್ಲ ನಿನ್ನದೇ. ಈ ಸಾವಿರ ರೂಪಾಯಿ ನಿನ್ನ ಹತ್ತರ ಇರಲಿ. ಮುಚ್ಚುಮರೆಯಾಗಿ ಕೊಡಬೇಕಾಗಿ ಬಂದರೆ ಕೈ ಬಿಗಿ ಹಿಡಿಯಬೇಡ. ಈ ಸಾವಿರಕ್ಕೆ ಹತ್ತು ಸಾವಿರ ಗಳಿಸುವದೇನೂ ಕಠಿಣವಲ್ಲ...." ಗೆಳೆಯನ ಕೈಯಲ್ಲಿ ಹತ್ತು ನೋಟುಗಳನ್ನು ಹಾಕಿ ವೆಂಕಟೇಶ ಹೊರಡಲು ಸಿದ್ಧನಾದ.

"ನಾನು ಬರುವವರೆಗೂ ಜೀವಣ್ಣನಿಗೆ ಕೈ ಹಚ್ಚಬೇಡ. ಅವನಿಗೆ ವ್ಯವಹಾರದ ಗುಟ್ಟಿಲ್ಲ. ಗೊತ್ತು. ಒಮ್ಮೆಲೇ ದುಡುಕಿ ವೈರ ಕಟ್ಟಿ ಕೊಳ್ಳುವದು ಬೇಡ....ನಾನೇ ಅವನ ಕತ್ತು ಹಿಡಿದು ದಬ್ಬುತ್ತೇನೆ...." ಎಂದು ವಿಶ್ವಾಸ ಹೇಳುತ್ತಿರುವಂತೇ ವೆಂಕಟೇಶ ಬಿರಬಿರನೆ ಹೊರಟು ಬಿಟ್ಟ. ಅವನು ಹೋದೊಡನೆಯೇ ವಿಶ್ವಾಸನಲ್ಲಿ ಮತ್ತೆ ಎರಡು ಧ್ವನಿ ಗಳೆದ್ದು ಕೂಗಿದವು.– "ಬಾಬಾಸಾಹೇಬನನ್ನು ನಂಬಬೇಕೆ?....ವೆಂಕಟೇಶ ನನ್ನು ನಂಬಬೇಕೆ?.... ಬಾಬಾಸಾಹೇಬನಲ್ಲಿ ಮತ್ಸರವಿದೆ. ಅದಕ್ಕಾಗಿಯೇ ಅವನು ವೆಂಕಟೇಶನ ಮರ್ಯಾದೆ ಕಳೆಯಲು ಹೊಂಚು ಹಾಕಿದ್ದಾನೆ. ಆದರೂ ಜೀವಣ್ಣನನ್ನು ವೆಂಕಟೇಶ ಆ ರೀತಿ ನಡೆಯಿಸಿಕೊಳ್ಳಬಾರದಿತ್ತು. ಆದರಿದು ಸುಳ್ಳು. ಜೀವಣ್ಣ ಸ್ವಾರ್ಥಿಯಾಗಿದ್ದಾನೆ. ಅವನಿಂದ ನಮಗೆ ಉಳಿಗಾಲವಿಲ್ಲ....ವೆಂಕಟೇಶನ ವ್ಯವಹಾರದಲ್ಲಿ ಜೀವಣ್ಣನೊಂದು ಅಡ್ಡ ಮುಳ್ಳು. ಅವನನ್ನು ಸಾಧ್ಯವಾದಷ್ಟು ಬೇಗನೆ....ಆದರೆ ಅವನ ಸಂಸಾರ ಬಹಳ ದೊಡ್ಡದು....ಸಂಸಾರ ದೊಡ್ಡದೆಂದು ಉಂಡಮನೆಗೆ ಎರಡು ಬಗೆಯಬೇಕೆ?...." ಅವನಿಗೆ ಮತ್ತೆ ಬಾಬಾಸಾಹೇಬನ ಮಾತುಗಳು ಕೇಳಬಂದವು. ತಾರಾನ ನೆನಪಾಯಿತು. "ವೆಂಕಟೇಶ ಬೇಕೆಂದೇ ನನ್ನ ನ್ನಿಲ್ಲಿ ಉಳಿಸಿ ಹೋಗಿರಬಹುದೆ?... ಛೀ ಎಂತಹ ದರಿದ್ರ ವಿಚಾರ ನಾನ್ನು ಮಾಡುತ್ತಿದ್ದೇನೆ...."

ಸಾಯಂಕಾಲ ಹೊರಬಿದ್ದು ವಾಯುಸೇವನೆಗಾಗಿ ಹೊರಟ. ಇಡೀ ದಿನ ವಿಚಾರ ಮಾಡಿ ಅವನ ತಲೆ ಕಾದು ಕೆಂಡವಾಗಿತ್ತು.

## ೧೧

"ವಿಶ್ವಾಸ ಮಾಸ್ತರ್" ತನ್ನ ಗುಂಗಿನಲ್ಲಿಯೇ ನಡೆದ ಅವನು ಈ

ದನಿಯನ್ನು ಕೇಳಿ ಗಕ್ಕನೆ ನಿಂತಾಗ ಎದುರಿಗೆ ಗೋವಿನಪುರ ಶಾಲೆಯ ಹೆಡ್‌ಮಾಸ್ತರರು ನಿಂತಿದ್ದರು. "ಏನು ಅಲಭ್ಯ ಲಾಭ ಮಾಸ್ತರರೆ! ಏನು ಕಾರಣ ಬಂದಿರಿ, ಏನು ಸುದ್ದಿ? ನಿಮ್ಮನ್ನು ಹೀಗೆ ಆಕಸ್ಮಾತ್ತಾಗಿ ಕಾಣುವೆನೆನ್ನಿಸಿರಲಿಲ್ಲ ನೋಡಿರಿ. ಎಲ್ಲವೂ ಚನ್ನಾಗಿದೆಯಷ್ಟೆ? ಹೆಡ್ ಮಾಸ್ತರರನ್ನು ಕಂಡು ವಿಶ್ವಾಸನಿಗೆ ನಿಜವಾಗಿಯೂ ಆನಂದವಾಯಿತು; ಗೋವಿನಪುರದ ನೆನಪೂ ಮರುಕಳಿಸಿತು.

"ಹೀಗೆ ಬಂದೆ ವಿಶ್ವಾಸರಾವ್. ಇಲ್ಲಿ ಒಂದು ಕಾನಫರನ್ಸು ಒಳಗೆ ಕೂತು ತಲೆ ಎಬ್ಬಿಸಿಕೊಳ್ಳುವದಕ್ಕಿಂತ ಊರನ್ನಾದರೂ ಸುತ್ತಾಡೋಣ ವೆಂದು ಬಂದೆ. ನಿಮ್ಮನ್ನು ಕಂಡು ನನಗೆ ಎಷ್ಟು ಸಂತೋಷವಾಯಿತು...."

"ಬನ್ನಿರಿ. ಹೀಗೆ ರಸ್ತೆಯ ಮೇಲೆ ನಿಂತರೆ ಮುಗಿಯುವ ಮಾತಲ್ಲ ನಮ್ಮವು" ಎಂದು ವಿಶ್ವಾಸ ಮಾಸ್ತರರನ್ನು 'ಮಿತ್ರ ಸಮಾಜ'ಕ್ಕೆ ಕರೆದು ಕೊಂಡು ಹೋಗಿ ಯಥೇಚ್ಛವಾಗಿ ತಿನ್ನಿಸಿ, ಕಾಫಿ ಕುಡಿಸಿ ಹತ್ತಿರವೇ ಇದ್ದ ಮುನಸೀಪಾಲ್ಟಿಯ ತೋಟದೆಡೆಗೆ ಕರೆದುಕೊಂಡು ಹೋದ. ಅಲ್ಲಿ ಏಕಾಂತ ಸ್ಥಳದಲ್ಲಿಯ ಒಂದು ಸೋಫಾದ ಮೇಲೆ ಇಬ್ಬರೂ ಕುಳಿತರು.– "ಅಂತೂ ಶಿಕ್ಷಕ ವೃತ್ತಿಯನ್ನು ಬಿಟ್ಟವರು ಶ್ರೀಮಂತರೇ ಆಗುತ್ತಾರೆ. ಇದಕ್ಕೆ ನಿಮ್ಮದೇ ಉದಾಹರಣೆ." ನಗುತ್ತ ಮಾತು ತೆಗೆದರು ಮಾಸ್ತರರು.

"ನಾನು ಶ್ರೀಮಂತನಾಗಿರುವೆನೆಂದು ನಿಮಗಾರು ಹೇಳಿದರು ಮಾಸ್ತ ರರೆ? ಹೊಟ್ಟೆಗೆ ಮಾತ್ರ ತಾಪತ್ರಯವಿಲ್ಲ ಅಷ್ಟೆ."

"ನಿಮ್ಮ ಅದೃಷ್ಟ ಖುಲಾಯಿಸಿದೆ ಎಂದು ನಾನು ಕೇಳಿದ್ದು ಸುಳ್ಳಲ್ಲ ಬಿಡಿರಿ. ವೆಂಕಟೇಶರಾಯರ ಆಶ್ರಯದಲ್ಲಿ ನೀವು ಶ್ರೀಮಂತರೇ ಆಗಿದ್ದೀರಿ."

"ಎಲ್ಲವೂ ಅವನ ಕೃಪೆ ಮಾಸ್ತರರೆ. ಅವನ ಋಣವನ್ನು ಏಳು ಜನ್ಮದಲ್ಲೂ ತೀರಿಸುವದು ಸಾಧ್ಯವಿಲ್ಲ."

"ನಿಮ್ಮನ್ನು ಬರಮಾಡಿಕೊಳ್ಳಲು ಅವರ ಹೆಂಡತಿಯೇ ಕಾರಣವೆ?"

"ಅವರು ನನ್ನ ಪರವಾಗಿ ಮಾತಾಡಿರಬಹುದು. ಆದರೆ ಮೊದಲಿನಿಂದಲೂ ವೇಂಕಟೇಶ ನನ್ನ ಗೆಳೆಯನಾಗಿದ್ದಾನೆ."

"ಅವರನ್ನೇ ಮೊದಲು ತಮಗೆ ಕೊಡಬೇಕೆಂದಿದ್ದರಂತೆ ನಿಜವೆ?"

"ಮದುವೆಯಾಗುವ ಮೊದಲು ಏನೆಲ್ಲ ನಡೆದು ಹೋಗುತ್ತವೆ. ಅತ್ತಿಗೆ, ಅಣ್ಣಂದಿರು ಈ ಸಂಬಂಧವನ್ನು ಹಂಬಲಿಸಿದ್ದರು. ಆದರೆ ವಿಧಿಸಂಕಲ್ಪ ಬೇರೆಯೇ ಇತ್ತು."

"ಈವಿಧಿ ಸಂಕಲ್ಪದಲ್ಲಿ ಅವರು ಬಹಳ ದುಃಖಿಗಳಾಗಿರುವರಂತೆ. ಪಾಪ! ಅವರ ಮನಸ್ಸು ಮುರಿದಿದೆಯಂತೆ...."

"ಇದನ್ನೆಲ್ಲಾ ನಿಮಗಾರು ಹೇಳಿದರು ಮಾಸ್ತರರೆ? ಅವಳ ಜೀವನ ಸುಖವಾಗಿದೆ; ಆದರ್ಶವಾಗಿದೆ. ಪತಿಯನ್ನು ದೇವರೆಂದು ಪೂಜಿಸುತ್ತಾಳೆ. ಅವಳ ಔದಾರ್ಯ ಎಷ್ಟೋ ಬಡ ಸಂಸಾರಗಳನ್ನು ಕಾಪಾಡಿದೆ."

"ಅವರ ಔದಾರ್ಯವನ್ನು ಕೇಳಿದ್ದೇನೆ. ನಾವು ನಿಮ್ಮನ್ನು ಕಳೆದುಕೊಂಡದ್ದೂ ಅವರ ಔದಾರ್ಯದಿಂದಲೇ. ಅವರು ಒಬ್ಬ ಸುಪ್ರಸಿದ್ಧ ಕವಿಯ ಕೊಲೆ ಮಾಡಿದ್ದಲ್ಲದೆ ತಮ್ಮ ಮುಖಕ್ಕೂ ಮಸಿ ಹಚ್ಚಿಕೊಂಡರು." ಮಾಸ್ತರರ ಧ್ವನಿ ವೇದನೆಯಿಂದ ತುಂಬಿತು. ವಿಶ್ವಾಸನಿಗೆ ಈಟಿಯಿಂದ ಇರಿದ ಹಾಗಾಯಿತು. ಅವನು ತತ್ತರಿಸಿದ. ಅವನು ಯಾವದೂ ಅರ್ಥವಾಗದೆ ದಿಗ್ಭ್ರಮೆಗೊಂಡಿದ್ದ. ಭಾರವಾದ ಧನಿಯಲ್ಲಿ ಮಾಸ್ತರರು ತಮ್ಮ ಮಾತನ್ನು ಮುಂದುವರಿಸಿದರು.- "ನನ್ನ ಜವಾಬುದಾರಿಯನ್ನರಿತುಕೊಂಡೇ ಈ ಮಾತನ್ನಾಡಿದ್ದೇನೆ ವಿಶ್ವಾಸರಾವ್. ನಿಮ್ಮ ಜೀವನದಲ್ಲಿ ನನಗಿರುವ ಆಸ್ಥೆಯೇ ಈ ಮಾತನ್ನಾಡಲು ಹಚ್ಚಿದೆ."

"ನಿಮ್ಮ ಮನಸ್ಸನ್ನು ನಾನು ಅರಿತಿದ್ದೇನೆ ಮಾಸ್ತರರೆ. ಆದರೆ ನಿಮ್ಮ ಮಾತುಗಳ ಅರ್ಥವೇ ನನಗಾಗದಾಗಿದೆ."

"ಹಾಗಾದರೆ ಹೇಳಿರಿ-ನೀವೀಗ ಇಲ್ಲಿಗೆ ಬಂದ ಮೇಲೆ ಎಷ್ಟು ಕವಿತೆ ಬರೆದಿದ್ದೀರಿ? ನಿಮ್ಮ ಸಾಹಿತ್ಯ ಸೇವೆ ಯಾವ ಪ್ರಗತಿಯ ದಾರಿ

ಹಿಡಿದಿದೆ? ನಿಮ್ಮ ಜೀವನದ ಧ್ಯೇಯವೇನಿತ್ತು? ಈಗದರ ಅವಸ್ಥೆ ಹೀಗೇ ಕಾಯಿತು? ಮನೋರಮಾಬಾಯಿಯ ಔದಾರ್ಯ ನಿಮಗೆ ಸುಖ ಜೀವನ ಕೊಟ್ಟಿರಬಹುದು. ಆದರೆ ಅದರಿಂದ ನಾಡು, ನುಡಿ ಬಡವಾದವು. ನಿಮ್ಮ ಕೊಲೆ ನಾಡಿನ ಕಾವ್ಯದ ಕೊಲೆ. ಈ ಪಾಪ ಕಟ್ಟಿಕೊಂಡವರಾರು? ನಿಮ್ಮ ಕಾವ್ಯ ಜೀವನ ನಾಡಿಗೊಂದು ಭಾಗ್ಯವಾಗಿತ್ತು; ಸಮಾಜದ ಅಮೂಲ್ಯ ಸೊತ್ತಾಗಿತ್ತು."

"ಸಮಾಜಕ್ಕೆ ನನ್ನ ಕವನಗಳಲ್ಲಿ ಆಸ್ಥೆ ಇರಲಿಲ್ಲ ಮಾಸ್ತರರೆ."

"ನಿಮ್ಮ ಕವನಗಳ ಕೀರ್ತಿ ನಾಡಿನ ತುಂಬ ಪಸರಿಸಿದ್ದು ಯಾರ ಪುಣ್ಯದಿಂದ?"

"ಹೊಗಳಿಕೆಯಿಂದ ಹೊಟ್ಟೆ ತುಂಬಲಾರದು ಮಾಸ್ತರರೆ? ನನ್ನ ಕವನಗಳನ್ನು ಬಾಯಿತುಂಬಾ ಹೊಗಳಿದ ಸಮಾಜ ನನ್ನ ಹೊಟ್ಟೆಯ ಪಾಡು ನೋಡಲಿಲ್ಲ. ಹಸಿದು ಕಂಗೆಟ್ಟ ಹೊಟ್ಟೆಗೆ ಅನ್ನ ನೀಡಲಿಲ್ಲ. ಇಂತಹ ಸಮಾಜದಿಂದ ನನಗೇನಾಗಬೇಕು?"

"ಸಮಾಜ ಹಾಳಾಗಲಿ. ಅದು ಕೈಬಿಟ್ಟಿತೆಂದು ನೀವು ಆತ್ಮವಂಚನೆ ಮಾಡಿಕೊಳ್ಳಬೇಕೆ? ಈ ಧನ ನಿಮಗೆ ಆತ್ಮಾನಂದವನ್ನು ಕೊಡುತ್ತಿರು ವದೆ? ನೀವು ಸಮಾಜವನ್ನು ವಂಚಿಸಬಹುದು. ಆದರೆ ಆತ್ಮವನ್ನಲ್ಲ. ಇದರಿಂದ ಅಧೋಗತಿ ತಪ್ಪಿದ್ದಲ್ಲ."

"ನಾನು ಅಧೋಗತಿಗಿಳಿದಿಲ್ಲ ಮಾಸ್ತರರೆ."

"ಮತ್ತೆ ಆತ್ಮವಂಚನೆ ಮಾಡಿಕೊಳ್ಳುತ್ತಿರುವಿರಿ. ನಿಮ್ಮ ಜೀವನದ ಧ್ಯೇಯವನ್ನು ಬೇಕೆಂದೇ ಮರೆಮಾಚುತ್ತಿದ್ದೀರಿ; ಸುಖವಿಲ್ಲದಿದ್ದರೂ ಸುಖಿ ಯಂತೆ ನಟಿಸುತ್ತಿದ್ದೀರಿ. ನನಗೆ ಬಹಳ ಕನಿಕರವಾಗುತ್ತದೆ-ವಿಶ್ವಾಸರಾವ್, ಕಳ್ಳಪೇಟೆ, ಮೋಸದ ವ್ಯಾಪಾರಗಳಲ್ಲಿ ನಿಮ್ಮ ಆತ್ಮಶಕ್ತಿಯನ್ನೇ ಮಾರಿ ಕೊಂಡಿದ್ದೀರಿ. ನಿಮ್ಮ ಪ್ರತ್ಯಕ್ಷ ನಿಮ್ಮ ಯಜಮಾನ ಮಾಡುವ ಅನಾ ಚಾರ, ಅತ್ಯಾಚಾರ ಸಹಿಸುತ್ತೀರಿ. ಜನರ ಅಭಿಪ್ರಾಯವನ್ನು ದುಡ್ಡಿನ ಶಕ್ತಿಯಿಂದ ಅದುಮುತ್ತಲಿದ್ದೀರಿ...."

"ಜನರ ಅಭಿಪ್ರಾಯವಾದರೂ ಏನು ಮಾಸ್ತರರೆ?"

"ಅವರ ಅಭಿಪ್ರಾಯ ಹೇಗೋ ಇರಲಿ ಅದು ಸಂಪೂರ್ಣ ಸುಳ್ಳಾಗಲೆಂದೇ ಹಾರೈಸುತ್ತೇನೆ...."

"ಜನರು ಅನ್ನುವದಾದರೂ ಏನು?"

"ಅವರು ಬೇಕಾದದ್ದು ಅನ್ನುತ್ತಾರೆ. ಮನೋರಮಾಬಾಯಿಗೂ ನಿಮಗೂ ಇಲ್ಲದ ಸಂಬಂಧ ಹಚ್ಚುತ್ತಾರೆ. ಜನರ ಬಾಯನ್ನು ಯಾರೂ ಮುಚ್ಚಲಾರರು. ನಾನು ಸ್ಪಷ್ಟವಾಗಿ ಮಾತನಾಡಿದೆನೆಂದು ಕೋಪಿಸಬೇಡಿ ವಿಶ್ವಾಸರಾವ್. ನಿಮ್ಮಲ್ಲಿರುವ ವಿಶ್ವಾಸ ಇಷ್ಟೆಲ್ಲ ಮಾತನಾಡಲು ಹಚ್ಚಿತು. ನನ್ನನ್ನು ಕೇಳಿದರೆ ನೀವಿಲ್ಲಿಂದ ಸಾಧ್ಯವಾದಷ್ಟು ಬೇಗ ಹೊರಬೀಳಬೇಕು. ನನ್ನ ಮಾತಿನಿಂದ ನಿಮಗೆ ವ್ಯಥೆಯಾಗಿದ್ದರೆ ನನ್ನನ್ನು ಕ್ಷಮಿಸಿ."

ಅವರ ಮಾತುಗಳನ್ನು ಕೇಳುತ್ತಿರುವಂತೆ ಯಾರೋ ಅವನನ್ನು ಆಳವಾದ ಬಾವಿಯಲ್ಲಿ ನೂಕಿದಷ್ಟು ಹೆದರಿಕೆಯಾಯಿತು. ಅವನು ಜೋರೆಂದು ಬೆವೆತ. ಅವರ ಅಪಾದನೆಗೆ ಅವನಿಂದ ಸುಮ್ಮನಿರುವದಾಗಲಿಲ್ಲ. ಅವನು ಪ್ರತಿಭಟಿಸುತ್ತ– "ಮಾಸ್ತರರೆ, ನಿಮ್ಮದು ತಪ್ಪು ಗ್ರಹಿಕೆ. ನಿಮ್ಮ ತಲೆಯಲ್ಲಿ ಈ ವಿಚಾರ ತುಂಬಿದವನು ಒಳ್ಳೆಯ ಕೆಲಸ ಮಾಡಿಲ್ಲ. ನನ್ನ ಕಾವ್ಯ ಜೀವನಕ್ಕಾಗಿ ಎಚ್ಚರಿಸಿದ್ದಕ್ಕೆ ನಾನು ಕೃತಜ್ಞ. ಆದರೆ ಆಮೇಲೆ ನುಡಿದ ಮಾತು ಭಯಂಕರವಾಗಿದೆ. ಪೂರಾ ಸುಳ್ಳಾಗಿದೆ."

"ಅದನ್ನು ನಾನೂ ನಿಜವೆಂದು ನಂಬಿಲ್ಲ ವಿಶ್ವಾಸರಾಯರೆ. ನಮ್ಮ ಸೋದರತ್ತೆಯ ಮಗ ಜೀವಣ್ಣ ತಪ್ಪು ತಿಳಿದಿರಬಹುದು. ಆ ಮಾತು ಹೋಗಲಿ. ನೀವು ನಿಮ್ಮ ಸಾಹಿತ್ಯವನ್ನು ಕಡೆಗಾಣಿಸುವದಿಲ್ಲವೆಂದು ವಚನವಿತ್ತರೆ ಧನ್ಯನಾಗುವೆನು. ಶವರಾಜ ನಿಮ್ಮನ್ನು ಕಡೆಗಣಿಸಿರಬಹುದು. ಆದರೆ ಈ ಮುದುಕ ನಿಮ್ಮನೆಂದೂ ಮರೆಯುವದಿಲ್ಲ."

ವಿಶ್ವಾಸ ಈ ಮಾತುಗಳನ್ನು ಕೇಳಿದಂತೆ ತೋರಲಿಲ್ಲ. ಅವನ ಮನಸ್ಸು ಕುದಿಯುತ್ತಿತ್ತು. ಅವನು ಒಮ್ಮೆಲೇ– "ಆ ಜೀವಣ್ಣ ಬದ ಮಾಷನಾಗಿದ್ದಾನೆ ಮಾಸ್ತರರೆ."

"ಅವನು ಬದಮಾಷನೇ ಆಗಿರಬಹುದು. ಆದರೆ ಅವನ ಮೊಗಕ ಮೇಲೆ ಕೈಮಾಡಿದ ನಿಮ್ಮ ಗೆಳೆಯರೂ ಸಂಭಾವಿತರೆಂದು ಹೇಳಲಾರಿರಿ.'

"ಅದೂ ಪೂರಾ ಸುಳ್ಳು." ಮಾಸ್ತರರು ಜೋಳ್ಳನೆ ನಕ್ಕರು. ಆ ನಗೆ ವಿಶ್ವಾಸನ ಎದೆಯ ಮೇಲೆ ಗುಂಡು ಕಲ್ಲುಗಳ ಮಳೆಗರೆಯಿತು.

ಆ ವೇಳೆಗೆ ವಿಹಾರಕ್ಕಾಗಿ ಬಂದ ಜನ ಸಾಗತೊಡಗಿದ್ದರು. ವಿದ್ಯುದ್ದೀಪಗಳು ಒಂಭತ್ತು ಗಂಟೆಯಾದುದನ್ನು ಸೂಚಿಸಿ ಮಂದವಾಗಿ ಉರಿಯುತ್ತಿದ್ದವು.– "ಹೀಗೆ ಹೇಳಿದೆನೆಂದು ನನ್ನ ಮೇಲೆ ಕೋಪವಿಲ್ಲವಷ್ಟೆ?" ಮಾಸ್ತರರ ಈ ಪ್ರಶ್ನೆಗೆ ವಿಶ್ವಾಸ ವಿಷಣ್ಣನಾಗಿ ನಕ್ಕ. ಆ ನಗೆ ಅತ್ಯಂತ ಪ್ರಖರವಾಗಿತ್ತು; ಅಂತರಂಗದಲ್ಲಿ ಎದ್ದ ಹೊಗೆಯ ಪ್ರತೀಕವಾಗಿತ್ತು. ಅವರನ್ನು ಅರ್ಧ ಹಾದಿಯ ವರೆಗೆ ಕಳಿಸಿ ವಿಶ್ವಾಸ ಮರಳಿದ. ಅವನಿಗೆ ಅವರನ್ನು ಯಾವಾಗ ಬಿಟ್ಟೇನೊ ಅನ್ನಿಸಿತ್ತು. ಅನಿರೀಕ್ಷಿತವಾದ ಪೆಟ್ಟಿನಿಂದ ಅವನು ನಿರ್ವಿಣ್ಣನಾಗಿದ್ದ. ಅವನಿಗೆ ನಡೆಯುತ್ತಿರುವ ದಾರಿ ಸಾಗದಾಗಿತ್ತು. ಭಯಾನಕ ವಿಚಾರಗಳು ಅವನನ್ನು ಮುತ್ತಿ ಕಾಡುತ್ತಿದ್ದವು.– "ನಾನೇಕೆ ಇಲ್ಲಿಗ ಬಂದೆ?....ಏನನ್ನು ಸಾಧಿಸಲು?....ಅಯ್ಯೋ, ನಾನು ಮಾಡುತ್ತಿರುವ ಕೆಲಸವಾದರೂ ಎಂತಹದು! ಕಳ್ಳಪೇಟೆ, ಅನ್ಯಾಯ.. ಹೌದು ಮಾಸ್ತರರ ಮಾತೇ ನಿಜ....ನಾನು ನನ್ನ ಧ್ಯೇಯವನ್ನು ಮುರಿದಿದ್ದೇನೆ....ತಾರಾನಿಗೆ ಈ ಹೊಲಸು ಜೀವನದ ಪರಿಚಯ ಮಾಡಿಕೊಟ್ಟು ಮುಕ್ತನಾಗಬೇಕು....ಮಾಸ್ತರರು ಹೇಳಿದ ಇನ್ನೊಂದು ಮಾತಿನ ಪರಿಹಾರವನ್ನೂ ನಾನು ಮಾಡಿಕೊಳ್ಳಬೇಕು....ಈ ಮಾತು ಮನೋರಮೆಯ ಕಿವಿಗೆ ಬಿದ್ದರೆ ಗತಿ ಏನು?....ಈ ಸುಳ್ಳನ್ನು ವೆಂಕಟೇಶ ನಂಬಿ ನನ್ನನ್ನು ಒದ್ದು ಬಿಡುವದೇನೊ ಅಸಹಜವಲ್ಲ. ತಾರಾ ನನ್ನನ್ನು ಕ್ಷಮಿಸಲಾರಳು....ಆದರೆ ತಾರಾ ಈ ಮಾತನ್ನು ನಂಬಲಾರಳು. ನಾನು ತಪ್ಪು ಮಾಡಿದೆ....ದೇವರು ನನಗಿತ್ತ ಹಿರಿಯ ಶಕ್ತಿಯನ್ನು ದುರುಪಯೋಗಗೊಳಿಸಿದೆ....ಛೇ–ಛೇ...." ವಿಶ್ವಾಸನಿಗೆ ತಾನೊಂದು ಅಕ್ಷಮ್ಯ ಅಪರಾಧ ಮಾಡಿದಂತೆ ಪಶ್ಚಾತ್ತಾಪ ಮೂಡಿತು.– "ನಾನು ಮಹಾಪಾಪಿ....ಅದೃಷ್ಟಹೀನ....ನನ್ನಿಂದ ಜಗತ್ತಿನಲ್ಲಿ ಯಾರಿಗೂ ಸುಖವಿಲ್ಲ....ಮನೋರಮೆಗೆ

ಎಂತಹ ಅಪವಾದವಿದು?....ಇದನ್ನು ಸಹಿಸಿಕೊಂಡು ನಾನು ಸುಮ್ಮನೆ ಎದ್ದು ಹೋದರೆ ಯಾವ ಪುರುಷಾರ್ಥ ಸಾಧಿಸಿದ ಹಾಗಾಗುವದು?.... ಬದಲಾಗಿ ಈ ವ್ಯರ್ಥ ಅಪವಾದವನ್ನು ನಾನೇ ಒಪ್ಪಿದಂತಾಗುವದು.... ಈ ಅಪವಾದ ಹರಡುತ್ತಿರುವವನನ್ನು ಶಿಕ್ಷಿಸದೆ ನಾನು ಹಾಗೆಯೇ ಹೊರಡಲಾರೆ....ಆ ಔದಾರ್ಯದ ಹೃದಯಗಳನ್ನು ವಂಚಿಸಲಾರೆ...." ಆಗಲೆ ಅವನು ತನ್ನ ಕೋಣೆಯ ಸನಿಯಕ್ಕೆ ಬಂದಿದ್ದ. ಅವನೊಂದು ದೀರ್ಘವಾದ ನಿಟ್ಟುಸಿರು ಬಿಟ್ಟು ಲಗುಬಗೆಯಿಂದ ಅಟ್ಟದ ಪಾವಟಿಗೆಗಳನ್ನೇರಿದ. ಅವನಿಗೆ ಜಗತ್ತು ತನ್ನ ಮೇಲೆ ಅದಾವುದೋ ಜಟಿಲವಾದ ಬಲೆ ಬೀಸಿದಂತೆ ಭಾಸವಾಯಿತು.– "ಜೀವಣ್ಣಾ!..ಜೀವಣ್ಣ." ಎಂದು ಅವನು ಕರಕರನೆ ಹಲ್ಲು ತಿಂದ.– "ನೀನು ಮಾಡುತ್ತಿರುವ ಅನ್ಯಾಯಕ್ಕೆ ನಿನ್ನನ್ನು...."

ಕೋಣೆಯ ಬಾಗಿಲಲ್ಲಿ ಜೀವಣ್ಣನೇ ನಿಂತಿದ್ದ. ಅವನ ಮುಖ ಹೀರಿ ಹೋಗಿತ್ತು. ಕಣ್ಣಂಚಿನಲ್ಲಿ ನೀರು ತುಳುಕುತ್ತಿದ್ದವು. ಅದಾವುದೋ ಪೇಚಿನಲ್ಲಿ ಸಿಕ್ಕ ಸಂಕಟಗ್ರಸ್ತನಂತೆ ಅವನು ಬಾಗಿ ನಿಂತಿದ್ದ.– ವಿಶ್ವಾಸರಾಯರೇ!!

ಮುಖವನ್ನು ಮೇಲೆತ್ತಿ ವಿಶ್ವಾಸ ಜೀವಣ್ಣನನ್ನು ನೋಡಿದ ಅವನ ಹುಬ್ಬು ಗಂಟಿಕ್ಕಿದ್ದವು; ರೊಚ್ಚು ಕಳಕಳಿಸಿ ಭುಗಿಲ್ಲೆಂದಿತು ಜೀವಣ್ಣನನ್ನು ಆಕ್ಷಣ ಕತ್ತು ಹಿಡಿದು ಕೆಳಗೆ ದಬ್ಬಬೇಕೆಂಬ ಕ್ರೂರತನ ಆ ಗಂಟಿಕ್ಕಿದ ಹುಬ್ಬಿನಲ್ಲಿ ಅರ್ಥವಾಗುತ್ತಿತ್ತು. ಏರಿಕೆಯ ಧ್ವನಿಯಲ್ಲಿ ವಿಶ್ವಾಸ ಅರ್ಭಟಿಸಿದ– "ಜೀವಣ್ಣಾ!...."

"ಯಜಮಾನರು ನನ್ನ ಮೇಲೆ ಅನ್ಯಾಯ ಮಾಡಿದ್ದಾರೆ ರಾಯರೆ. ಯಾವ ತಪ್ಪೂ ಇಲ್ಲದೆ ನನ್ನನ್ನು ನೌಕರಿಯಿಂದ ಕಡಿಮೆಮಾಡಿದ್ದಾರೆ. ನನ್ನ ದೊಡ್ಡ ಕುಟುಂಬವನ್ನು ದಯೆಯಿಂದ ನೋಡಲಿಲ್ಲ...."

"ಅವರು ಸರಿಯಾದದ್ದನ್ನೇ ಮಾಡಿದ್ದಾರೆ. ಅದಕ್ಕೆ ನಾನೇನು ಮಾಡಲಿ?"

"ನೀವು ನನ್ನನ್ನುಳಿಸಿಕೊಳ್ಳಬಹುದು ರಾಯರೆ. ಅವರು ಎಲ್ಲ ಭಾರವನ್ನೂ ನಿಮ್ಮ ಮೇಲೆ ಹಾಕಿದ್ದಾರೆ. ನೀವೊಂದು ಮಾತು ಹೇಳಿ

ದರೆ ಈ ಬಡವ ನಿಮ್ಮ ಹೆಸರು ಹೇಳಿ ಊಟ ಮಾಡಬಹುದು."

ಇಷ್ಟುದಿನ ನಿನ್ನನ್ನು ಉಳಿಯಗೊಟ್ಟದ್ದೇ ನನ್ನ ಅಪರಾಧವಾಗಿದೆ. ನಿನ್ನನ್ನು ಕ್ಷಮಿಸುವದು ನನ್ನಿಂದ ಸಾಧ್ಯವಿಲ್ಲ. ನೀನು ಅಪ್ರಾಮಾಣಿಕ.. ಕೃತಘ್ನ....ನಿನ್ನಿಂದ ನಮಗೆ ಉಳಿಗಾಲವಿಲ್ಲ. ವೆಂಕಟೇಶನ ಮಾತು ಮೀರುವದು ನನ್ನಿಂದ ಸಾಧ್ಯವಿಲ್ಲ."

"ನೀವು ಹೇಳಿದರೆ ಯಜಮಾನರು ನನ್ನನ್ನು ಉಳಿಯಗೊಡು ತ್ತಾರೆ ದಯವಿಟ್ಟು ನನ್ನ ಅನ್ನವನ್ನು ಕಸಿದುಕೊಳ್ಳಬೇಡಿರಿ. ನೀವು ಕೈ ಬಿಟ್ಟರೆ ನಾನು ಉಪವಾಸ ಸಾಯಬೇಕಾಗುತ್ತದೆ. ನನ್ನ ಮಕ್ಕಳು.."

"ಹೆಚ್ಚು ಮಾತಾಡಬೇಡ. ಕೆಳಗಿಳಿದು ಬಿಡು."

"ಬಡವನ ಗೋಳು ಕಟ್ಟಿಕೊಳ್ಳಬೇಡಿರಿ. ಇದರಿಂದ ಹೆಚ್ಚು ಅನರ್ಥವಾಗುತ್ತದೆ-ರಾಯರೆ...."

"ಈಗೇನು ಕಡಿಮೆ ಅನರ್ಥ ಮಾಡಿರುವೆ?....ಸುಮ್ಮನೆ ಹೋಗು ವಿಯೋ ಇಲ್ಲ ಕತ್ತು ಹಿಡಿದು ದಬ್ಬಿಬಿಡಲೊ?" ವಿಶ್ವಾಸ ಥರಥರ ನಡುಗಿದ.

"ಕೊನೆಯ ನಿರ್ಣಯಕ್ಕೆ ಬರುವ ಮೊದಲು ಇನ್ನೊಮ್ಮೆ...."

"ಬದಮಾಷ್" ಎಂದು ವಿಶ್ವಾಸ ಜೀವಣ್ಣನ ಕೆನ್ನೆಗೆ ಛಳೇರೆಂದು ಏಟು ಕೊಡಲು ಅವನು ಗಿಮಿಗಿಮಿ ತಿರುಗಿ ಬಿದ್ದುಬಿಟ್ಟ. ಜೀವಣ್ಣ ಮೇಲೆದ್ದು ಕೆನ್ನೆಯಮೇಲೆ ಕೈಯಾಡಿಸುತ್ತ ವಿಶ್ವಾಸನನ್ನು ಕ್ರೂರವಾಗಿ ನೋಡುತ್ತ- "ಮರೆಯಲಾರದ ಪೆಟ್ಟು ಕೊಟ್ಟಿರಿ. ಈ ಪೆಟ್ಟನ್ನು ನಾನು ಮರೆಯುವದಿಲ್ಲ...." ಜೀವಣ್ಣ ತತ್ತರಿಸುತ್ತ ವಿಶ್ವಾಸನನ್ನು ಒಮ್ಮೆ ಕೆಂಗ ಣ್ಣಿನಿಂದ ನೋಡಿ ಬಿರಬಿರನೆ ಅಲ್ಲಿಂದ ನಡೆದ. ವಿಶ್ವಾಸ ರಭಸದಿಂದ ಕೋಣೆಯ ಬಾಗಿಲು ತೆಗೆದು ಕಾಟಿನ ಮೇಲೆ ಉಸ್ಸೆಂದು ಕುಳಿತ. ಜೀವಮಾನದಲ್ಲಿಯೇ ಅವನು ಹೀಗೆ ಯಾರ ಮೇಲೂ ಕೈಮಾಡಿರಲಿಲ್ಲ. ಅವನ ಅಂಗೈ ಬಹಳ ನೋಯುತ್ತಿತ್ತು. ಅವನ ಹೊಡೆತಕ್ಕೆ ಮುಗ್ಗರಿಸಿ ಬಿದ್ದ ಜೀವಣ್ಣನ ದೇಹ ಅವನ ಕಣ್ಣೆದುರು ಕುಣಿಯುತ್ತಿತ್ತು. ಅವನಿಗೆ

ಬಹಳ ಪಶ್ಚಾತ್ತಾಪವಾಗಿ ಕೂಡಲೇ ಜೀವಣ್ಣನನ್ನು ಕೂಗಿ ಕರೆದು ಕ್ಷಮೆ ಕೇಳಿಕೊಳ್ಳಬೇಕೆಂದು ಹೊರಗೆ ಬಂದು ನೋಡಿದಾಗ ಅವನೆಲ್ಲೂ ಕಾಣಲಿಲ್ಲ. ಮಾತು ಮಿಂಚಿಹೋಗಿತ್ತು. ಜೀವಣ್ಣ ಹೋಗುವಾಗ ನೋಡಿದ ಕೆಂಗಣ್ಣುಗಳು ವಿಶ್ವಾಸನನ್ನು ಗಾಸಿ ಮಾಡಿದವು. "ನಾನು ಹೊಡೆಯಬಾರದಿತ್ತು...."ಎಂದು ಉಸಿರಿಡುತ್ತ ವಿಶ್ವಾಸ ಹಾಸಿಗೆಯ ಮೇಲೆ ಕುಸಿದು ಕುಳಿತ. ಅವನ ಮನಸ್ಸು ಅಲ್ಲೋಲಕಲ್ಲೋಲವಾಗಿತ್ತು.

"ನೀನು ಏತಕ್ಕಾಗಿ ಜೀವಣ್ಣನನ್ನು ಹೊಡೆದೆ?....ಅವನನ್ನು ಹೊಡೆಯಲು ನಿನಗೇನು ಅಧಿಕಾರವಿತ್ತು?...."

"ಅವನು ನನ್ನ ಮೇಲೆ ಅನ್ಯಾಯ ಮಾಡಿದ್ದಾನೆ."

"ಈ ಅನ್ಯಾಯಕ್ಕೆ ನೀನವನ ಸ್ಪಷ್ಟೀಕರಣ ಕೇಳಿದ್ದೀಯಾ?"

"ಕಂಡ ಮಾತಿಗೆ ಸ್ಪಷ್ಟೀಕರಣದ ಆವಶ್ಯಕತೆ ಇಲ್ಲ. ಇದಕ್ಕೆ ಮಾಸ್ತರರೇ ಸಾಕ್ಷಿ."

"ಮತ್ತಾವ ಕಾರಣದಿಂದ ನೀನು ಹೀಗೆ ಮಾಡಿದೆ?"

"ಅವನು ಅಪ್ರಾಮಾಣಿಕನಾಗಿದ್ದಾನೆ...."

"ಅಪ್ರಾಮಾಣಿಕನಾಗಿದ್ದವರು ನೀನೊ-ಅವನೊ?...."

"ಜೀವಣ್ಣನೇ...."

"ನಿಮ್ಮ ವ್ಯವಹಾರದಲ್ಲಿ ಯಾವ ಪ್ರಾಮಾಣಿಕತನವಿದೆ?...."

"ಎಂದ ಮಾತ್ರಕ್ಕೆ ಕೈ ಕೆಳಗಿನ ನೌಕರರು ಕೃತಜ್ಞರಾಗಿರಬೇಕೆ?.."

"ಅದನ್ನು ನಾನು ನಂಬಲಾರೆ...."

"ಹಾಗಾದರೆ ಮಾಸ್ತರರ ಮಾತನ್ನೇಕೆ ನಂಬುತ್ತೀ?...." ವಿಶ್ವಾಸ ಥಿಗ್ಗನೆ ಎದ್ದು ತಲೆ ತಿಕ್ಕಿಕೊಂಡ.- "ಏನು ನಿನ್ನ ಬಾಳು ವಿಶ್ವಾಸ!...." ಯಾರೋ ಗಹಗಹಿಸಿ ನಕ್ಕಂತಾಯಿತು. "ನಿನ್ನ ಧ್ಯೇಯವೆಲ್ಲಿ ಹೋಯಿತು? ಕನ್ನಡ ನಾಡು ನಿನ್ನ ಯಾವ ಶಕ್ತಿಯನ್ನು ಮೆಚ್ಚಿಕೊಂಡು ಹೊಗಳಿದರೋ ಆ ಶಕ್ತಿಯನ್ನು ನೀನು ಉಳಿಸಿಕೊಂಡಿದ್ದೀಯಾ?...."

"ನನಗೆ ಜೀವನದಲ್ಲಿ ಹಾಯಾಗಿ ಬದುಕಬೇಕಿತ್ತು."

"ಈಗ ಹಾಯಾಗಿ ಬದುಕುತ್ತಿದ್ದೀಯಾ?"

"ನನ್ನ ತಾರಾ...."

"ಮೂರ್ಖಾ, ನಿನ್ನ ತಾರಾ ಈ ಬಾಳನ್ನು ಮೆಚ್ಚುವದಿಲ್ಲ....ಅದು ನಿನ್ನ ಭ್ರಮೆ...." ವಿಶ್ವಾಸ ಒಮ್ಮೆಲೇ ತಲೆ ಜಾಡಿಸುತ್ತ ಕೋಣೆಯಲ್ಲಿ ಎಡೆಯಾಡತೊಡಗಿದ.

"ಜೀವನದಲ್ಲಿ ಯಾವುದು ಮುಖ್ಯ ಒಮ್ಮೆ ಹೇಳಿಬಿಡು...."

"ಜೀವಿಸುವದೇ ಮುಖ್ಯ."

"ಕವಿಯಾಗಿಯೂ ನೀನು ಜೀವಿಸುತ್ತಿರಲಿಲ್ಲವೆ?"

"ಆ ದರಿದ್ರ ಬಾಳು ನನ್ನನ್ನು ಕಮರಿಸಬಹುದಿತ್ತು."

"ಹೀಗೆಂದು ನಿನ್ನ ಹೃದಯ ಸಂಪನ್ನತೆಗೆ ನೀನಾಗಿಯೇ ಕಿಚ್ಚು ಹಚ್ಚಬೇಕೆ?"

"ಅದನ್ನು ಸಮಾಜ ಮಾಡಿತು."

"ಸಮಾಜದ ಮೇಲೆ ದೋಷ ಹೊರಿಸುವದು ವ್ಯಕ್ತಿಯ ಹೇಡಿತನ."

"ನಾನೆಂದಿಗೂ ಹೇಡಿಯಲ್ಲ...."

"ಕೈಲಾಗದವನು. ಸಧ್ಯದ ಬಾಳಿಗೆ ಹೇಸಿದರೂ ಅದರಿಂದ ಪಾರಾಗಲು ಅಂಜುತ್ತಿರುವದು ಯಾವ ಧೈರ್ಯದ ಲಕ್ಷಣ?"

"ವೆಂಕಟೇಶನ ಹೊಣೆಯಿದೆ. ಅವನಿಗೆ ನಾನು ಕೃತಘ್ನನಾಗಲಾರೆ.."

"ಇದು ಜಾರಿಕೊಳ್ಳುವ ಮಾತು. ನಿನಗೆ ಸುಖ ಜೀವನದ ಸವಿ ಹತ್ತಿದೆ. ಪಾಪದ ವ್ಯವಹಾರದಲ್ಲಿ ಪುಣ್ಯವನ್ನರಸುವ ವಂಚನೆಯನ್ನಪ್ಪಿ ಕೊಂಡು ಕೃತಾರ್ಥನಾಗಬೇಕೆನ್ನುವಿ...."

"ಹಾಗಾದರೆ...."

"ಹಾಗಾದರೆ ನಾನೇನು ಮಾಡಬೇಕೆಂದು" ವಿಶ್ವಾಸ ತನ್ನ ಅಂಗೈಯನ್ನು ಬಲವಾಗಿ ಗುದ್ದಿಕೊಂಡ. ಅವನಂತರಂಗ ಒಂದೇಸವನೆ ಚೀರಿತು.

ಮಾಸ್ತರರು, ತಾರಾ, ಅಚ್ಯುತರಾಯರು-ಅವರ ಕಣ್ಣೆದುರು ಸುಳಿದು ದಯಾರ್ದ್ರರಾಗಿ ಕರುಣೆಯಿಂದ ನೋಡಿದಂತೆ ಭಾಸವಾಯಿತು.- "ಹಾಗಾದರೆ ನಾನೇನು ಮಾಡಲಿ?....ಒಮ್ಮೆ ಎಲ್ಲ ವ್ಯವಹಾರವನ್ನು ವೆಂಕಟೇಶನಿಗೊಪ್ಪಿಸಿ ತಿಂಗಳೊಪ್ಪತ್ತಿನಲ್ಲೇ ಇಲ್ಲಿಂದ ಕಾಲು ಕೀಳಬೇಕು....ನಾನು ತಪ್ಪಿದೆ....ಜೀವನವನ್ನು ತಪ್ಪಾಗಿ ತಿಳಿದುಕೊಂಡೆ...." ವಿಶ್ವಾಸ ಬಾಗಿಲ ಚೌಕಟ್ಟನ್ನು ಹಿಡಿದುಕೊಂಡು ದಿಙ್ಮೂಢನಂತೆ ನಿಂತಿದ್ದ. ಅವನ ಕಣ್ಣೊಳಗಿಂದ ನೀರು ಧಾರಾಕಾರವಾಗಿ ಸುರಿಯುತ್ತಿದ್ದವು. ಅವನ ಹೃದಯ ಕರಗಿ ನೀರಾಗಿತ್ತು.

ಅವನೊಮ್ಮೆಲೇ ಕೆಳಗಿಳಿದು ನಿಲ್ದಾಣದ ಮಾರ್ಗವಾಗಿ ಸಾಗಿದ.- "ಹೌದು. ಆ ಬಾಳು ನನಗೆ ಹಿತವಾಗಿತ್ತು; ಅಪ್ರತಿಮವಾಗಿತ್ತು....ಮತ್ತೆ ನಾನದನ್ನು ಕಾಣಲಾರೆನೆ? ಗೋವಿನಪುರದ ದಿವ್ಯ ನಿಸರ್ಗ ಸೌಂದರ್ಯಾನುಭವವನ್ನು ಮತ್ತೆ ಪಡೆಯಲಾರೆನೆ?...." ನಿಲ್ದಾಣದಲ್ಲಿ ಗೋವಿನಪುರಕ್ಕೆ ಹೋಗುವ ಗಾಡಿ ಸಿದ್ಧವಾಗಿತ್ತು. ಆವೇಶ ಬಂದವನಂತೆ ಅವನು ಒಳಗೆ ಹೋಗಿ ಕುಳಿತ. ಅವನಿಗೆಷ್ಟೋ ಸಮಾಧಾನವಾಯಿತು.- "ನನ್ನ ತಾರಾ!....ಅವಳಿಗೆ ನಾನು ಯಾವ ಬಾಳನ್ನು ನೀಡಿದೆ?....ಹದಿನೈದು ದಿನಗಳಾದರೂ ನನಗಲ್ಲಿಗೆ ಹೋಗುವದಾಗಲಿಲ್ಲ....ನನ್ನ ಬಗ್ಗೆ ಅವಳು ಏನನ್ನು ತಿಳಿದುಕೊಳ್ಳಬಹುದು?....ನಾನವಳನ್ನು ತಪ್ಪಾಗಿ ತಿಳಿದುಕೊಂಡಿರುವೆ....ಎಲ್ಲವನ್ನೂ ಅವಳಿಗೆ ತಿಳಿಸಿ ಹೇಳುವೆ....ಆಗಲಾದರೂ ನನ್ನ ತಾರಾ....ತಾರಾ...."

೧೨

ತಾರಾ ಕಣ್ಣೀರು ಸುರಿಸುತ್ತ ವಿಶ್ವಾಸನ ಕೋಣೆಯಲ್ಲಿ ಕುಳಿತಿದ್ದಳು. ಜೀನಣ್ಣ ಸೂಕ್ಷ್ಮವಾಗಿಯಾದರೂ ಸ್ಪಷ್ಟವಾಗುವಂತೆ ಅವಳಿಗೆ ಹೇಳಿ ಹೋದ ಮಾತು ಶಲ್ಯದಂತೆ ಇರೆಯುತ್ತಲಿತ್ತು. ಅದನ್ನು ನಂಬುವದು ಕೂಡ ಅವಳಿಗೆ ಅಸಾಧ್ಯವಾಗಿ ತೋರಿದರೂ ಮನೋರಮೆ ವಿಶ್ವಾಸನಿಗೆ ತೋರುವ ಹೆಚ್ಚಿನ ಅಂತಃಕರುಣ ಇಲ್ಲದ ಅರ್ಥವನ್ನೇ ಕಲ್ಪಿಸುವಂತೆ

ಮಾಡಿತ್ತು. ಮನೋರಮೆ ಅವಳ ಪತಿಯ ವಿಚಾರವಾಗಿ ಆಡಿದ ಎಲ್ಲ ಆದರ, ಅಭಿಮಾನದ ನುಡಿಗಳೂ ಈಗ ನೆನಪಾಗಿ ಅವಳಿಗೆ ವಿಪರೀತ ವಾದ ಅರ್ಥವನ್ನು ಬೋಧಿಸಿದವು. ಮನೋರಮೆಯಲ್ಲಿ ಏನೋ ಮೋಸ ವಿದೆಯೆಂದು ಗ್ರಹಿಸಿದ ಅವಳಿಗೆ ತನ್ನ ಬಾಳು ಯಾವುದೋ ಗಂಡಾಂತರ ದಲ್ಲಿ ಸಿಕ್ಕಂತೆ ಭಾಸವಾಯಿತು. ಇಲ್ಲದ ಯೋಚನೆಗೆ ಮೊದಲಾಯಿತು– "ನಾನಿಲ್ಲಿಗೆ ಬರಲು ಒಪ್ಪಲೇಬಾರದಾಗಿತ್ತು. ಈ ಶ್ರೀಮಂತರ ಜೀವನ ದಲ್ಲಿ ಸರಳತನವೆಂದಿಗೂ ಇರುವದಿಲ್ಲ. ಗಂಡ ತುಂಬ ಕುಡುಕ. ಹೆಂಡತಿ ಅತೃಪ್ತಳು. ಇವರ ಜೊಂಜಾಟದಲ್ಲಿ ಸಿಕ್ಕು ನಾವು ಜಬ್ಬೆಯಾಗುವದು ನಮ್ಮ ಹಣೆಯಬರಹವಾಗಿತ್ತೆ?....ಈಗ ಹದಿನೈದು ದಿನಗಳಾದರೂ ಅವ ರೇಕೆ ಮನೆಗೆ ಬಂದಿಲ್ಲ? ನಾನು ಅಷ್ಟು ಬೇಡವಾದೆನೆ?....ಮೊನ್ನೆ ಭಾವ ನವರು ಬಂದು– "ವೆಂಕಟೇಶನ ಸಹವಾಸ ಸರ್ಪದ ಸಹವಾಸ. ವಿಶ್ವಾ ಸನಿಗೆ ಎಚ್ಚರಿಕೆಯಿಂದಿರಲು ಹೇಳು. ಅವನ ಬಗ್ಗೆ ಏನೇನೊ ಮಾತು ಹುಟ್ಟಿಕೊಂಡಿವೆ" ಎಂದು ಹೇಳಿ ಹೋದರಲ್ಲ. ಆ ಮಾತುಗಳು ಯಾವ ವಾಗಿರಬಹುದು? ಭಾವನವರ ಮುಂದೆ ಮನೋರಮೆ– "ವಿಶ್ವಾಸರಾಯರು ಮನೆಯವರೇ ಆಗಿದ್ದಾರೆ" ಎಂದು ಹೇಳಿಬಿಟ್ಟಳಲ್ಲ. ಅವಳಂತರಂಗದ ಮಾತುಗಳೇ ಇವಾಗಿರಬಹುದೆ? ಮನೋರಮೆಯೊಡನೆ ಅವರು ತೋರು ತ್ತಿರುವ ಸಲಿಗೆಯಲ್ಲಿ ಯಾವ ಅರ್ಥವೂ ಇಲ್ಲವೆ? ಈ ಸಲಿಗೆಯನ್ನು ನಾನು ಬೆಳೆಯಗೊಡಬೇಕೆ?....ಅವರು ಇಲ್ಲಿ ಬಂದು ಏನನ್ನು ಸಾಧಿಸಿ ದಂತಾಯಿತು? ನಾನು ಯಾವ ಭಾಗ್ಯ ಪಡೆದಂತಾಯಿತು? ಅಯ್ಯೋ ಮನೋರಮೆ, ನಿನ್ನ ಅತೃಪ್ತ ಕಾಮದ ಅಗ್ನಿಕುಂಡದಲ್ಲಿ ನನ್ನ ಸಂಸಾ ರದ ಹೋಮವನ್ನು ನಾನೆಂದಿಗೂ ಮಾಡಗೊಡಲಾರೆ." ಈ ಭಾವ ಬರುತ್ತಲೆ ತಾರಾ ಸಿಡಿಮಿಡಿಗೊಂಡಳು. ಅವಳ ಮನಸ್ಸು ನಿರ್ಧಾರದ ಯೋಜನೆಯಲ್ಲಿ ಗಟ್ಟಿಯಾಗಿತ್ತು. ಹಾಲಹಳ್ಳಿಯಿಂದ ಸಿಡಿದು ಹೋಗ ಬೇಕೆಂಬುದೇ ಅವಳು ಯೋಚಿಸಿದ ಯೋಚನೆ.

ಈ ಯೋಚನೆಯನ್ನು ಅವಳು ಪ್ರತಿದಿನವೂ ವಿಚಾರಿಸುವಳು;– ವಿಶ್ವಾಸ ಬಂದೊಡನೆ ಎಲ್ಲವನ್ನೂ ಅವನಿಗೆ ನಿವೇದಿಸಬೇಕೆಂದು ದಿನದಿನವೂ

ದಾರಿ ಕಾಯುವಳು. ಆದರೆ ಅವನು ಬರುವ ಮಾತೇ ಇಲ್ಲ. ಅವಳ ಸಹನೆ, ತಾಳ್ಮೆ ತಪ್ಪಿ ತಾನೊಂದು ಇರುಕಿನಲ್ಲಿ ಸಿಕ್ಕಂತೆ ಅವಳಿಗೆ ಭಾಸ ವಾಯಿತು; ಈ ಬೇಗುದಿಯಲ್ಲಿ ಅವಳ ದೇಹವೂ ಬೆಂದಿತು. ಅನಿರೀಕ್ಷಿತವಾದ ಆಘಾತದಿಂದ ಎದೆಯೊಡೆದುಕೊಂಡಂತೆ ಅವಳು ತೀರಾ ಖಿನ್ನಳಾದಳು. ಅವಳೆದೆಯಲ್ಲಿ ತುಮುಲವೇ ಎದ್ದಿತು.

"ನಿನ್ನ ಸ್ವಾಮಿಯ ಮೇಲೆ ನಿನಗೆ ವಿಶ್ವಾಸವಿಲ್ಲವೆ?"

"ಸಂಪೂರ್ಣವಾಗಿ ಇದೆ. ಆದರೆ ಅವರು 'ಮಾಯಾವಿ'ಯ ಬಲೆಯಲ್ಲಿ ಸಿಕ್ಕಿಬಿದ್ದಿದ್ದಾರೆ."

"ನಿನ್ನದು ತಪ್ಪು ತಿಳುವಳಿಕೆ. ಮನೋರಮೆ ಮಾಯಾವಿಯಲ್ಲ. ಅವಳು ಉದಾರ ಚರಿತಳು."

"ಅವಳ ಔದಾರ್ಯ ಸ್ವಾರ್ಥಪೂರ್ಣವಾಗಿದೆ."

"ನಿಮ್ಮ ಜೀವನಕ್ಕೊಂದು ಊರುಗೋಲಾಗಿರುವ ಅವಳಲ್ಲಿ ಯಾವ ಸ್ವಾರ್ಥವೂ ಇಲ್ಲ. ಅವಳು ವಿಶ್ವಾಸನನ್ನು ಬಂಧುವೆಂದು ತಿಳಿಯುತ್ತಾಳೆ."

"ಇದೇ ಅವಳ ನೀಚತನದ ಪರಮಾವಧಿ."

"ಕಾಮಣಿಯಾದವರ ಕಣ್ಣುಗಳಿಗೆ ಪ್ರಪಂಚವೇ ಹಸಿರಾಗಿ ಕಾಣುತ್ತದೆ. ನೀನು ಜೀವಣ್ಣನ ಮಾತಿಗೆ ಮೋಸ ಹೋಗಿದ್ದೀ;- ಮನೋರಮೆಗೆ ಅನ್ಯಾಯ ಮಾಡುತ್ತೀ."

"ನಾನು ಯಾರ ಮಾತಿಗೂ ಮೋಸ ಹೋಗಿಲ್ಲ. ನನ್ನ ಜೀವನವೇ ನನ್ನನ್ನು ವಂಚಿಸುತ್ತಲಿದೆ."

"ಅದಕ್ಕಾಗಿ....?...."

ನನ್ನ ಬಾಳನ್ನೇ ನಾನು ತಿದ್ದಿಕೊಳ್ಳುತ್ತೇನೆ."

ಹೊರಗೆ ಯಾರೋ ಕೂಗಿದ ಸ್ವರ ಕೇಳಿ ತಾರಾ ಎಚ್ಚತ್ತಳು. ಇಂತಹ ಅಪರಾತ್ರಿಯಲ್ಲಿ ಕೂಗುವವರು ಮತ್ತಾರೂ ಆಗಿರದೆ ವಿಶ್ವಾಸನೇ ಆಗಿರಬಹುದೆಂದು ಭಾವಿಸಿ ಬಾಗಿಲು ಬಳಿ ಧಾವಿಸಿದಳು. ಆದರೆ ಬಂದವನು ವಿಶ್ವಾಸನಾಗಿರದೆ ವೆಂಕಟೇಶನಾಗಿದ್ದ.- "ತಾರಾಬಾಯಿ, ಸ್ವಲ್ಪ

ಬಾಗಿಲು ತೆರೆಯುವಿರಾ" ಅವನ ಧ್ವನಿ ಭಾರವಾಗಿತ್ತು. ತಾರಾ ತುಂಬಾ ಹೆದರಿದಳು. ನಡುಗುವ ಸ್ವರದಲ್ಲಿ- "ಅವರು ಇನ್ನೂ ಊರಿಗೆ ಬಂದಿಲ್ಲ."

"ಅವನು ಊರಿಗೆ ಬಂದಿಲ್ಲವೆಂದು ತಿಳಿದುಕೊಂಡೇ ನಾನಿಲ್ಲಿಗೆ ಬಂದಿದ್ದೇನೆ. ಬಾಗಿಲು ತೆರೆ ತಾರಾ...." ತಾರಾ ಹೌಹಾರಿದಳು. ವೆಂಕಟೇಶನೆಂದಿಗೂ 'ತಾರಾ' ಎಂದು ಅವಳನ್ನು ಕರೆದಿರಲಿಲ್ಲ. ಅವಳಿಗೆ ಗಂಡಾಂತರದ ಅರಿವಾಯಿತು. ಅವಳು ಸುಮ್ಮನೆ ನಿಂತಿದುದನ್ನು ನೋಡಿ ಉತ್ತೇಜಿತನಾದ ಅವನು- "ಒಳಗೆ ಕೆಲವು ಸಾಮಾನುಗಳಿವೆ ತಾರಾ. ನಾನೀಗಲೇ ಅವುಗಳನ್ನು ತೆಗೆದುಕೊಂಡು ಹೋಗಬೇಕಾಗಿದೆ. ಬಾಗಿಲು ತೆರೆಯಬಾರದೆ?"

"ಮುಂಜಾವು ತೆಗೆದುಕೊಂಡು ಹೋದರಾಗದೆ? ಇಂತಹ ಅಪರಾತ್ರಿಯಲ್ಲಿ ಸಾಮಾನುಗಳದೇನು ಕೆಲಸ?" ಎಂದು ದಿಟ್ಟತನದಿಂದ ಕೇಳಿದಳು.

"ಅವುಗಳನ್ನೀಗಲೇ ಕೊಡಬೇಕಾಗಿದೆ."

"ಅದಕ್ಕಾಗಿ ನೀವೇ ಬರಬೇಕೆ? ರಜಾಕನನ್ನು ಕಳಿಸಿದ್ದರೆ ಆಗಬಹುದಿತ್ತಲ್ಲ. ನೀವು ಹೋಗಿ ಅವನನ್ನು ಕಳುಹಿಸಿರಿ."

"ಅವುಗಳನ್ನು ನಾನೇ ಒಯ್ಯಬೇಕಾಗಿದೆ. ಬೇಗಬಾಗಿಲು ತೆರೆ ತಾರಾ."

"ನನ್ನಿಂದ ಈಗ ಬಾಗಿಲು ತೆರೆಯುವದು ಸಾಧ್ಯವೇ ಇಲ್ಲ. ದಯವಿಟ್ಟು ಕ್ಷಮಿಸಬೇಕು."

"ಇದು ಹೇಗೆ ನಡೆದೀತು. ನನ್ನ ಮನೆಯಲ್ಲಿ ನನಗೆ ಪ್ರವೇಶವಿಲ್ಲವೆ?"

"ಮನೆಯಲ್ಲಿ ಗಂಡಸರಿಲ್ಲದಿರುವಾಗ ನೀವು ಇಂತಹ ವೇಳೆಯಲ್ಲಿ ಬರುವದೇ ತಪ್ಪು."

"ಇದು ಉದ್ಧಟತನ. ಸುಮ್ಮನೆ ಬಾಗಿಲು ತೆರೆ."

"ಎಂದಿಗೂ ಸಾಧ್ಯವಿಲ್ಲ. ದಯವಿಟ್ಟು ಮನೆಗೆ ಹೋಗಿರಿ."

"ನನ್ನ ಅನ್ನದ ಸೊಕ್ಕು ಈ ಮಟ್ಟಕ್ಕೆ ಇಳಿಯಿತೆ? ನೀನು ಬಾಗಿಲ ತೆರೆಯದಿದ್ದರೆ ನಾನು ಬಾಗಿಲವನ್ನು ಮುರಿದು ಬರಬೇಕಾದೀತು" ಎನ್ನುತ್ತ ಅವನು ಧಡಧಡ ಬಾಗಿಲು ಬಡೆಯಹತ್ತಿದನು.

"ಹೀಗೆಲ್ಲಾ ಮಾಡಬೇಡಿರಿ ವೆಂಕಟೇಶರಾಯರೆ. ನೀವು ಕುಡಿದು ಮತ್ತರಾಗಿದ್ದೀರಿ. ನಿಮ್ಮ ಕಾಲು ಬೀಳುತ್ತೇನೆ–ದಯವಿಟ್ಟು...."

"ಬಾಗಿಲು ತೆರೆ........" 'ಧಡಧಡ' ಸಪ್ಪಳ ಜೋರಾಗತೊಡಗಿತು. ತಾರಾನ ಎದೆ ಹೆದರಿಕೆಯಿಂದ ಹೊಡೆದುಕೊಂಡಿತು. ಈ ಗಂಡಾಂತರ ದಿಂದ ಹೇಗೆ ಪಾರಾಗಬೇಕೆಂಬುದೂ ತಿಳಿಯದೆ, ವಿಶ್ವಾಸ ಎಂತಹ ಕ್ರೂರಿಯ ಸ್ನೇಹ ಮಾಡಿದನೆಂದು ಮನಸ್ಸಿನಲ್ಲಿ ಹಳಿದುಕೊಂಡಳು.- "ನೀನು ತೆರೆಯುವಿ ಇಲ್ಲವೊ?"

"ಆ ಮಾತೇ ಸುಳ್ಳು. ನಾನು ಖಂಡಿತ ಬಾಗಿಲು ತೆಗೆಯುವದಿಲ್ಲ."

"ಸೊಕ್ಕಿದ ಹೆಣ್ಣೇ........" ಆ ವೇಳೆಗೆ ವೆಂಕಟೇಶನ ಮೇಲೆ ಬಿದ್ದ 'ಟಾರ್ಚ' ಬೆಳಕು ಅವನ ಕಣ್ಣು ಕೋರೈಸಿತು. ಆ ಬೆಳಕಿನಲ್ಲಿ ಅವನ ಉಗ್ರವಾದ ಮೊಗದಲ್ಲಿಯ ಕೆಂಪಗಾದ ಕಣ್ಣುಗಳನ್ನು; ಅಸ್ತವ್ಯಸ್ತವಾಗಿ ಹರವಿದ ಕೂದಲುಗಳನ್ನು ನೋಡಿ ತಾರಾನ ಜೀವ ತಲ್ಲಣಿಸಿತು. ವೆಂಕಟೇಶ ಆ ಬೆಳಕಿನತ್ತ ತಿರುಗುತ್ತಿರುವಾಗಲೇ ಮನೋರಮೆ ಕೈಯಲ್ಲಿ 'ಟಾರ್ಚು' ಹಿಡಿದುಕೊಂಡು ಅವನತ್ತ ಧಾವಿಸಿದಳು. ಅವಳ ಸರ್ವಾಂಗ ನಡುಗುತ್ತಿತ್ತು. ತುಟಿಯನ್ನು ಕಚ್ಚಿ, ಪತಿಯ ಕೈಹಿಡಿದೆಳೆಯುತ್ತ– "ಈ ಟಾರ್ಚನ್ನು ತೆಗೆದುಕೊಂಡು ನೇರವಾಗಿ ಮನೆಗೆ ಹೋಗಿರಿ ನೋಡೋಣ. ಯಾರ ಮುಖಕ್ಕೆ ಮಸಿ ಹಚ್ಚಬೇಕೆಂದಿದ್ದೀರಿ?"

"ನನಗೆ ಒಳಗೆ ಸಾಮಾನು ಬೇಕಾಗಿದೆ ಮನು...."

"ಸುಮ್ಮನೆ ನಡೆಯಿರಿ. ಹುಂ–ಈ ಟಾರ್ಚು ತೆಗೆದುಕೊಳ್ಳಿರಿ" ಎಂದು ಅದನ್ನು ಗಂಡನ ಕೈಗಿತ್ತು ಅವನನ್ನು ಒತ್ತಾಯದಿಂದ ಮಾರ್ಗಕ್ಕೆ ಹಚ್ಚಿದಳು. ವೆಂಕಟೇಶ ಕಣ್ಮರೆಯಾಗುತ್ತಲೇ ಒಳಗೆ ಬಂದಳು ಮನೋ ರಮೆ. ಅವಳ ಕಣ್ಣಾಲಿ ತುಂಬಿದ್ದವು. ಅವಳನ್ನು ಕಂಡೊಡನೆಯೇ

ತಾರಾನ ಹೋದ ಜೀವ ಬಂದಂತಾಗಿ ಅವಳು ಬಿಕ್ಕಿಬಿಕ್ಕಿ ಅತ್ತಳು.–
"ಮನ್ನಕ್ಕ...."

"ಕುಡಿದಾಗ ಅವರು ಮನುಷ್ಯರಾಗಿರುವದಿಲ್ಲ ತಾರಕ್ಕ. ನನಗೆ ಬೇಗ ಟಾರ್ಚು ಸಿಗಲಿಲ್ಲ. ಸಿಕ್ಕಿದ್ದರೆ ಅವರನ್ನು ದಾರಿಯಲ್ಲೇ ತಡೆಯುತ್ತಿದ್ದೆ."

"ಉಡಿಯಲ್ಲಿ ಕೆಂಡವನ್ನು ಹಾಕಿಕೊಂಡು ನಾನಿಲ್ಲಿ ಬಾಳುವದು ಹೇಗೆ ಸಾಧ್ಯ ತಾಯಿ. ನಾನು ನಿಮ್ಮ ಆಸರೆಗೆ ಬಂದು ತಪ್ಪುಮಾಡಿದೆ.... ಅನ್ನದ ರಿಣದಲ್ಲಿ ನಾವೆಂತಹ ಬಲೆಯಲ್ಲಿ ಸಿಕ್ಕಂತಾಯಿತು ಮನ್ನಕ್ಕ...." ತಾರಾ ಒಂದೇ ಸಮನೆ ಕಣ್ಣೀರು ಸುರಿಸುತ್ತಿದ್ದಳು. ಮನೋರಮೆಗೆ ಅವಳ ವೇದನೆ ಅರ್ಥವಾಗಿತ್ತು;– ಅವಳೆದೆಯೂ ವೇದನೆಯಿಂದ ತುಂಬಿತ್ತು.

"ತಾರಾ, ನಿನ್ನ ಹೆದರಿಕೆಯನ್ನು ನಾನು ಗ್ರಹಿಸಬಲ್ಲೆ. ಅವರಿಗೆ ಒಳಿತಾಗಿ ಛೀ ಹಾಕಿ ಇಂತಹ ಕೆಟ್ಟ ಪ್ರಸಂಗ ನಿನಗೆ ಮತ್ತೆಂದಿಗೂ ಬಾರದಂತೆ ನೋಡಿಕೊಳ್ಳುವೆ. ಈ ದುಶ್ಚಟದಿಂದ ಅವರ ಬಾಳು ಹೀನಾಯವಾಗಿದೆ. ಈ ಅಗ್ನಿಯಲ್ಲಿ ನನ್ನ ಸತ್ವ ಪರೀಕ್ಷೆಯೂ ನಡೆ ದಿದೆ. ನಿನಗೆ ನಿನ್ನ ಪತಿಯ ನೆರವಾದರೂ ಇದೆ ನನಗೆ....ಯಾರ ನೆರವಿದೆ ಹೇಳು?....ನನ್ನ ಗೋಳು ನನಗಿರಲಿ ತಾರಾ, ನೀನು ಮಾತ್ರ ನಿನ್ನ ಪತಿಗೆ ಈ ಮಾತನ್ನು ಹೇಳಿ ಅವರ ಮನಸ್ಸನ್ನು ಕಲಕಬೇಡ. ನನ್ನ ಮಾತಿನಲ್ಲಿ ವಿಶ್ವಾಸವಿಡು–ನಿನ್ನ ಕೂದಲಿಗೂ ಧಕ್ಕೆಯಾಗದಂತೆ ನಾನು ನೋಡಿಕೊಳ್ಳುತ್ತೇನೆ. ವಿಶ್ವಾಸರಾಯರ ಮುಂದೆ ಮಾತ್ರ ಈ ಮಾತನ್ನು ಹೇಳಬೇಡ."

ಮನೋರಮೆ ತನ್ನ ಜಾಲದಿಂದ ವಿಶ್ವಾಸನ ಕುತ್ತಿಗೆಯನ್ನೇ ಬಿಗಿಯುತ್ತಿರುವಳೆಂಬ ಅನುಮಾನದಲ್ಲಿ ತಾರಾ ಇನ್ನಿಷ್ಟು ವ್ಯಾಕುಲಳಾ ದಳು. ಅವಳ ಹೃದಯ ಮಾರ್ದವತೆಯನ್ನು ಕಳೆದುಕೊಂಡಿತು. ಅವಳು ಕಟುವಾಗಿ– "ಯಾಕೆ ಈ ಮಾತನ್ನು ಅವರ ಮುಂದೆ ಹೇಳಿದರೆ ಅವರು ಎದ್ದು ಹೋಗಬಹುದೆಂದು ನಿನಗೆ ಭೀತಿಯೆ?"

"ನಿನ್ನ ಅನುಮಾನ ಸರಿಯಾಗಿದೆ ತಾರಕ್ಕ. ಅವರು ಈ ಮಾತನ್ನು ಕೇಳಿ ಇಲ್ಲಿ ನಿಲ್ಲಲಾರರು. ನನಗವರನ್ನು ಕಳೆದುಕೊಳ್ಳುವ ಇಷ್ಟವಿಲ್ಲ." ತಾರಾ ಮನೋರಮೆಯನ್ನು ಕೆಕ್ಕರಿಸಿ ನೋಡಿದಳು.– "ಅವರಿಂದ ನನ್ನ ಉದ್ಧಾರವಾಗಬೇಕಾಗಿದೆ. ಜೀವನಕ್ಕೊಂದು ಮಾರ್ಗ ತೋರಬೇಕಾಗಿದೆ. ಅವರಿಲ್ಲದೆ ನನ್ನ ಬಾಳಿಗೆ ಯಾವ ಅರ್ಥವೂ ಇಲ್ಲ. ಅವರ ಹೃದಯ ವೈಶಾಲ್ಯತೆಯಲ್ಲಿ ನನ್ನ ವಿಶ್ವಾಸವಿದೆ. ನನಗವರು ಬೇಕೇಬೇಕು. ನೀನು ಅನುಗ್ರಹಿಸಲಾರೆಯಾ?"

ಕಾಲ ಕಳೆಯುತ್ತಿರುವಂತೆ ಮನೋರಮೆ ತೀರ ಲಜ್ಜೆಗೆಡುತ್ತಿರುವ ಳೆಂದು ತಾರಾನಿಗೆ ಭಾಸವಾಯಿತು. ಅವಳ ಒಂದೊಂದು ನುಡಿಯೂ ತಾರಾನಿಗೆ ಕಾಯ್ದ ಬರೆಯನ್ನೇ ಎಳೆದವು. ಅವಳು ಪೂರಾ ಅಲಕ್ಷ್ಯ ದಿಂದ– "ನಿನ್ನ ಔದಾರ್ಯವಾಗಲಿ, ಬುದ್ಧಿಮತ್ತೆಯಾಗಲಿ ನನ್ನಲ್ಲಿಲ್ಲ ಮಾರಾಯಳೆ. ನನ್ನ ಪತಿಯ ಅವಶ್ಯಕತೆ ನನಗಿಂತಲೂ ನಿನಗೇ ಹೆಚ್ಚಾ ಗಿರುವದನ್ನು ಕೇಳಿ ಧನ್ಯಳಾದೆ. ನನಗೆ ಈ ಮನೆ, ಈ ಹಳ್ಳಿ, ಈ ಸಹವಾಸ ಎಲ್ಲವೂ ತುಚ್ಛವಾಗಿದೆ. ಅವರು ಬಂದೊಡನೆಯೇ ನಾವು ಹೊರಟು ಬಿಡುತ್ತೇವೆ. ನೀನು ಅವರನ್ನೆಂದಿಗೂ ತಡೆಯಲಾರಿ."

"ತಾರಕ್ಕ, ನಿನ್ನ ಮತಿ ಭ್ರಮಣವಾಗಿಲ್ಲವಷ್ಟೆ! ನನಗಾಗಿ ಕನಿಕರ ಪಟ್ಟು ಏನೇನೊ ಯೋಚನೆಗಳನ್ನು ಹಾಕಿದ್ದೆಯಲ್ಲ; ಅವು ಸಫಲವಾದವೆ? ನನ್ನ ಬಾಳಿಗೊಂದು ಉದ್ಧಾರವೀಯದಿದ್ದರೆ ನಾವು ಬಂದ ಸಾರ್ಥಕ ವೇನು ಎಂದಿದ್ದೆಯಲ್ಲ-ಆ ಮಾತು ಈಗಲ್ಲಿ ಹೋಯಿತು? ನನ್ನ ಪತಿ ಯನ್ನು ರೊಜ್ಜಿನಲ್ಲಿ ಬಿಟ್ಟು, ನನ್ನನ್ನು ನರಕಕುಂಡದಲ್ಲಿ ಹೊರಳಾಡು ವಂತೆ ನೀವು ಹೋಗಬಹುದೆ? ನಿಜವಾಗಿಯೂ ಅವರು ನೀಚರಲ್ಲ. ಅವರ ಜೀವನ ಅವರನ್ನೀಮಾರ್ಗಕ್ಕೆ ತಳ್ಳಿದೆ. ನಿನ್ನ ಪತಿ ಬಂದಂದಿನಿಂದ ಸ್ವಲ್ಪ ಸುಧಾರಣೆಯೂ ಕಾಣಬರುತ್ತಿದೆ. ಇಂತಹ ವೇಳೆಯಲ್ಲಿ ನೀನು ವಿಶ್ವಾಸರಾಯರ ಹೃದಯದಲ್ಲಿ ಬಿರುಗಾಳಿ ಎಬ್ಬಿಸಬೇಡ. ನನ್ನ ಉದ್ಧಾ ರಕ್ಕಾಗಿಯಾದರೂ ನೀನೀ ಮಾತನ್ನು ನಡೆಯಿಸಬೇಕು."

"ನಾನು ಬಹಳ ಸ್ವಾರ್ಥಿ ಮನ್ನಕ್ಕ. ನನಗೆ ಜಗತ್ತಿನ ಉದ್ಧಾರ
ದಲ್ಲಿ ಮನಸ್ಸಿಲ್ಲ. ನನ್ನ ಉದ್ಧಾರವನ್ನು ಮಾತ್ರ ನಾನು ಮಾಡಿಕೊಳ
ಬೇಕಾಗಿದೆ. ಆದಕ್ಕಾಗಿಯೇ ಈ ಸಿರಿವಂತರ ಸೆರಗಿನಿಂದ ಬಹುದೂರ
ಅವರನ್ನು ಕರೆದುಕೊಂಡು ಹೋಗಬೇಕಾಗಿದೆ. ದಯವಿಟ್ಟು ನನ್ನ ಮಾರ್ಗ
ದಲ್ಲಿ ಕಂಟಕಳಾಗಿ ಬರಬೇಡ ಮನ್ನಕ್ಕ."

"ತಾರಕ್ಕ, ವಿಶ್ವಾಸರಾಯರು ನಿನ್ನ ಪತಿಯೆಂಬ ಸ್ವಾರ್ಥದಿಂದ ನೀನು
ಮಾತನಾಡುತ್ತೀ. ಆದರೆ ಅವರು ನನ್ನ ಮಾರ್ಗದರ್ಶಕರಲ್ಲವೆ? ಯೋಚಿಸು
ತಾರಕ್ಕ."

"ನಾನೆಲ್ಲ ಯೋಚಿಸಿದ್ದೇನೆ. ಆ ಮಾರ್ಗದರ್ಶನದ ಅನರ್ಥವನ್ನು
ನಾನು ಸಹಿಸಲಾರೆ." ಎಂದು ತಾರಾ ತಲೆ ಹಿಡಿದುಕೊಂಡು ಸ್ವಸ್ಥಳಾಗಿ
ಕುಳಿತಳು. ಈ ಅವಸ್ಥೆಯಲ್ಲಿ ಹೆಚ್ಚು ಮಾತನಾಡುವದು ಸರಿಯಲ್ಲವೆಂದು
ತಿಳಿದು ಹೊರಡಲನುವಾದಳು.

"ಒಂದು ಮಾತು ಮನ್ನಕ್ಕ. ಅವರನ್ನು ಈ ಕೂಡಲೆ ಕರೆಯಿ
ಸುವ ವ್ಯವಸ್ಥೆ ಮಾಡಿ ಪುಣ್ಯ ಕಟ್ಟಿಕೋ."

"ಅದಕ್ಕೇನು? ಇಂದೇ ಯಾರನ್ನಾದರೂ ಕಳಿಸುತ್ತೇನೆ ಬಿಡು.
ಆದರೆ ತಾರಕ್ಕ ಯಾವುದನ್ನೂ ಈಗ ವಿಚಾರಿಸಬೇಡ. ನನ್ನಾಣೆಯಾಗಿದೆ."

ಮನೋರಮೆ ಭಾರವಾದ ಎದೆಯಿಂದ ಮನೆಯೆಡೆಗೆ ನಡೆದಳು.
ವಿಶ್ವಾಸನನ್ನು ಕರೆದು ತರಲು ಆಳಿನೊಂದಿಗೆ ವ್ಯವಸ್ಥೆ ಮಾಡಿದಳು.
ಎರಡು ದಿನ ತಿರುಗಾಡಿ ಬಂದ ಆಳು– "ವಿಶ್ವಾಸರಾಯರು ಎಲ್ಲಿರು
ವರೋ ತಿಳಿಯದು. ಅವರಿರುವ ಸ್ಥಳಗಳಲ್ಲಿ ಇಲ್ಲವೇ ಇಲ್ಲ." ಎಂದು
ಹೇಳಿದ ಮಾತುಗಳನ್ನು ಕೇಳಿ ತಾರಾ, ಮನೋರಮೆ ಕಂಗೆಟ್ಟರು.
"ಇವರು ಹೋಗಿರುವದಾದರೂ ಎಲ್ಲಿ ದೇವರೆ" ಎಂದು ತಾರಾ ಹತಾಶ
ಳಾಗಿ ಉಸಿರ್ಗರೆದಳು.

೧೩

ಸಂಜೆಯ ಸೂರ್ಯನ ಹೊಂಬಣ್ಣದ ಕಿರಣಗಳು ತಡಸಲಿನ ನೀರಿನೊಂದಿಗೆ ಓಕಳಿಯಾಡುತ್ತಿರುವಂತೆ ಕಾಣುವ ಅಪೂರ್ವ ದೃಶ್ಯವನ್ನು ನೋಡುತ್ತ ವಿಶ್ವಾಸ ತಡಸಲಿನೆದುರಿನ ಮಹಾಲಿಂಗೇಶ್ವರ ಗುಡಿಯ ಮಹಾದ್ವಾರದ ಹೊರಗೆ ನಿಂತಿದ್ದ. ಈ ದೃಶ್ಯ ವೈಭವದಿಂದ ಅವನ ಕದಡಿದ ಮನಸ್ಸಿಗೆ ನೆಮ್ಮದಿ ದೊರೆಯಹತ್ತಿತ್ತು. ಅಬ್ಬರದಿಂದ ಬೀಳುವ ನೀರು. ಅದರ ಸುತ್ತಲೂ ಸಂಭ್ರಮದಿಂದ ಹಾರಾಡುವ ಬಣ್ಣಬಣ್ಣದ ಹಕ್ಕಿಗಳು, ಆಕಾಶದಿಂದ ಇಳಿದು ಬಂದ ದೇವ ಕನ್ನಿಕೆಯ ನೃತ್ಯವನ್ನು ಮೆಚ್ಚಿ ಅವಳಿಗಾಗಿ ಆರತಿಯ ಹಾಡನ್ನು ಹೇಳುವಂತೆ ಒಂದೇ ಸವನೆ ಸಪ್ಪಳ ಮಾಡುತ್ತಿರುವ ಬಣ್ಣದ ಚಿಟ್ಟೆಗಳು-ವಿಶ್ವಾಸನ ಹೃದಯದ ಮಲಿನವನ್ನು ತೊಳೆದವು. ಅವನಿಗೆ ಆ ಸ್ಥಳ ಬಿಟ್ಟು ಕದಲುವ ಮನಸ್ಸೇ ಆಗಲಿಲ್ಲ. ನೆಟ್ಟ ದೃಷ್ಟಿಯಿಂದ ಅವನು ಜಲರಾಶಿಯನ್ನು ನೋಡುತ್ತಿದ್ದ. ಬಂಡೆಗಳನ್ನು ಭೇದಿಸಿ ಬರುತ್ತಿರುವ ಆ ಮಹಾಪ್ರವಾಹವನ್ನು ಅರ್ಥಪೂರ್ಣವಾಗಿ ದೃಷ್ಟಿಸುತ್ತಿದ್ದ.- "ನಾನು ಏನನ್ನು ಸಾಧಿಸಿದೆ? ಏನನ್ನೂ ಇಲ್ಲ. ಆದರೆ ಕಳೆದುಕೊಂಡುದು ಮಾತ್ರ ತಿರುಗಿ ಬಾರದಷ್ಟಾಗಿದೆ. ಈ ಜೀವನದಿಂದ ನಾನು ಹೇಗೆ ಮುಕ್ತನಾಗಬೇಕು? ಗೆಳೆಯ ಹೊರಿಸಿದ ಹೊಣೆಯನ್ನು ಹೇಗೆ ಬಿಡಿಸಿಕೊಳ್ಳಬೇಕು? ಅವನಿಂದ ಜಾರಿ ಬಂದ ಮೇಲೆ ನನ್ನ ಜೀವನದ ಮಾರ್ಗವೇನು? ನನ್ನನ್ನಾರು ಕೇಳುವರು? ಇನ್ನು ಅವನೊಂದಿಗಿರುವದು ನನ್ನಿಂದ ಸಾಧ್ಯವಿಲ್ಲ. ಅವನು ಸ್ಪಷ್ಟವಾಗಿ ಮಾತು ಕೊಟ್ಟು ಈ ಹೀನ ವ್ಯವಹಾರವನ್ನೆಲ್ಲ ಮರೆತರೆ ಅವನು ಬಂಗಾರವಾಗುವನು. ಹಾಗಾದರೆ ಅವನ ಒಳ್ಳೆಯ ಜೀವನದ ಜೊತೆಗೆ ನನ್ನ ಶಾಪ್ಯ ಜೀವನವೂ ಸಾಗೀತು. ಆದರೆ ನನ್ನ ಮಾತನ್ನವನು ಕೇಳುವನೆ? ಒಮ್ಮೆಲೆ ಎದ್ದು ಬಂದರೆ ಜೀವಣ್ಣನ ಹರಕು ಬಾಯಿ ಏನೇನನ್ನೊ ಹುಟ್ಟಿಸಬಹುದು. ಇದರಿಂದ ಮನೋರಮೆಗೆ ಅನ್ಯಾಯವಾಗುವದು. ಈ ತೊಡಕಿನಿಂದ ನಾನು ಹೇಗೆ ಪಾರಾಗಬೇಕು.? ನನಗೆ ನನ ಮೊದಲಿನ ಬಾಳು ಹೇಗೆ ಸಿಕ್ಕೀತು?"

ಸಾವಿರ ಚಂದಿರರು ತಡಸಲಿನಲ್ಲಿ ತೇಲಾಡತೊಡಗಿದರು. ಶುಭ್ರವಾದ ಬೆಳದಿಂಗಳು ತಡಸಲಿನಿಂದ ಹಾಲನ್ನೇ ಸುರಿಯಿತು. ವಿಶ್ವಾಸನಿನ್ನೂ ಆ ಸ್ಥಳ ಬಿಟ್ಟು ಕದಲಲಿಲ್ಲ. ಬಹಳ ದಿನಗಳ ಹಿಂದೆ ಅವನು ಇದೇ ಸ್ಥಳದಲ್ಲಿ ತಾರಾನೊಡನೆ ಕುಳಿತ ಸಂದರ್ಭ ನೆನಪಾಯಿತು. ಅಂದು ಅವಳು ತನ್ನ ಕಾವ್ಯ ಜೀವನವನ್ನು ಮೆಚ್ಚಿ ಮಾತಾಡಿದ್ದಳು. ಭವಿಷ್ಯ ಜೀವನದ ಅನೇಕ ಕನಸುಗಳನ್ನು ಕಟ್ಟಿದ್ದಳು. ಆದರೆ ಅವಳ ಕನಸು ಕನಸಾಗಿಯೇ ಉಳಿಯಿತು. "ಯಾಕೆ? ಅವಳಿಗಾಗಿ ನಾನು ನನ್ನ ಸ್ವಂತ ಜೀವನದ ಸಾರವನ್ನೂ ವಿೀಸಲಾಗಿಟ್ಟು ಬಿಡಲಿಲ್ಲವೆ? ಅವಳು ಇದನ್ನು ಅಪೇಕ್ಷಿಸಿರಲಿಲ್ಲ. ಅವಳ ಮೇಲೆ ನಾನು ಈ ಜೀವನವನ್ನು ಒತ್ತಾಯದಿಂದ ಹೇರಿದ್ದೇನೆ. ಇದೇ ನಿಜ........ಜೀವಣ್ಣ ಅವಳ ಮುಂದೆಯೂ ಈ ಸಂಗತಿಯನ್ನು ಅತಿರಂಜಿತ ಮಾಡಿ ಹೇಳಿದ್ದರೆ ಅವಳ ಗತಿಯೇನು?" ವಿಶ್ವಾಸನಿಗೆ ಕೂಡಲೇ ಹಾಲಹಳ್ಳಿಗೆ ಹೋಗಿ ಬಿಡಬೇಕೆನ್ನಿಸಿತು. ಆದರೆ ಅಲ್ಲಿ ಒಂದು ನಿರ್ಧಾರದಿಂದಲೇ ಹೋಗಬೇಕು. ಯಾವ ನಿರ್ಧಾರ?

'ಘಣ್' ಎಂದು ಭಕ್ತನೊಬ್ಬ ಗಂಟೆ ಬಾರಿಸಿದ ಸಪ್ಪಳಕ್ಕೆ ವಿಶ್ವಾಸನೆ ಎದ್ದು ದರ್ಶನ ತೆಗೆದುಕೊಂಡು ಹೊರಬಿದ್ದ. ಆ ಗುಡಿಯ ಅಚ್ಚುಕಟ್ಟುತನ ಅವನಿಗೆ ಬೆರಗನ್ನೇ ಉಂಟು ಮಾಡಿತು. ಇದರ ಮೇಲ್ವಿಚಾರಣೆಯನ್ನು ಅನ್ಯ ಜಾತಿಯ ಐರೋಪ್ಯನೊಬ್ಬನು ಮಾಡುತ್ತಿರುವ ಸಂಗತಿಯನ್ನು ನೆನೆದಾಗಲಂತೂ ಅವನಿಗೆ ತನ್ನ ಜನದ ಧಾರ್ಮಿಕ ಡಂಭಾಚಾರದ ಬಗ್ಗೆ ಪ್ರತಿಭಟನೆಯೇ ಮೂಡಿತು. "ನಮ್ಮ ಜನರಿಗೆ ದೇವರ ಗುಡಿಗಳೆಂದರೆ ಹರಟೆಯ ಚಾವಡಿಗಳಾಗಿವೆ. ಇಸ್ಪೇಟಿನ ಅಂಗಡಿಗಳಾಗಿವೆ. ನರಕದ ಬೀಡಾಗಿವೆ" ಎನ್ನುತ್ತ ಪಾವಟಿಗೆಗಳನ್ನು ಏರಿ ಮುಖ್ಯ ಬೀದಿಯಿಂದ ಚಿಕ್ಕ ಮಕ್ಕಳ ತೋಟದ ವರೆಗೆ ಹೋಗಿ ಅಲ್ಲಿ ಬಲಕ್ಕೆ ಹೊರಳಿ ಉಡಪೀ ಬ್ರಾಹ್ಮಣರ ಹಾಟೇಲಿನಲ್ಲಿ ಊಟಮಾಡಿ ಹೊರಬಿದ್ದ. ಅವನಿಗೆ ಗೋವಿನಪುರಕ್ಕೆ ಹೋಗಿ ಬರಬೇಕೆನ್ನಿಸಿತು. ಮುಖ್ಯಾಧ್ಯಾಪಕರನ್ನು ಕಂಡು ಬರಬೇಕೆನ್ನಿಸಿತು. ಬೆಳಗಾದ ಮೇಲೆ ವಿಚಾರಿಸುವಾ—ಎಂದು ನಿರ್ಣಯಿಸಿ ಅವನು ಮತ್ತೆ ಮಹಾಲಿಂಗೇಶ್ವರನ ಸನ್ನಿಧಾನಕ್ಕೆ ಬಂದು ಮಲಗಿಕೊಂಡ.

ಅವನಿಗೆ ಸುತ್ತಿ ತಡಸಲಿನ ಸಪ್ಪಳ ಕೇಳುತ್ತಿರುವಾಗ ಬೆಳ್ಳಗೆ ಬೆಳಗಾಗಿತ್ತು. ಏನನ್ನೂ ವಿಚಾರಿಸದೆ ಅವನು ಗೋವಿನಪುರಕ್ಕೆ ಅಭಿಮುಖವಾಗಿ ನಡೆಯತೊಡಗಿದ. ಅವನಿಗೆ ಬಹಳ ದಿನಗಳ ಹಿಂದೆ ಈ ಹಾದಿಯನ್ನು ಪ್ರತಿದಿನವೂ ತುಳಿಯುತ್ತಿರುವ ಅನುಭವವಾಯಿತು. ಬಹಳ ಹೊತ್ತು ಹೀಗೆ ಮಾರ್ಗಕ್ರಮಣ ಮಾಡಿ ಇಳುಕಲನ್ನೆಲ್ಲ ಇಳಿದು ಬಲಕ್ಕೆ ಹೊರಳಿ ಹೊಲದೊಳಗಿಂದ ಹಾಯ್ದು 'ಗೂಗೀಕೊಳ್ಳ'ದ ಹಾದಿಯನ್ನು ಹಿಡಿದು ಸಾಗಿದ. ಹಾದಿಯಲ್ಲಿ ಒಂದು ಗಿಡದ ಸುತ್ತಲೂ ಹರಿಯುವ ನೀರು, ಆ ನೀರನೊಡನೆ ಚಲ್ಲಾಟವಾಡುವ ಬಳ್ಳಿ, ಆ ಬಳ್ಳಿಯ ಮೇಲೆ ಚಿಲಿಪಿಲಿಯಾಗಿ ದನಿ ಮಾಡುತ್ತಿರುವ ಹಕ್ಕಿಗಳು ವಿಶ್ವಾಸನಲ್ಲಿ ನವಿರನ್ನೆಬ್ಬಿಸಿದವು. ಚಿಕ್ಕ ಚಿಕ್ಕ ಹಳ್ಳದಂತಹ ಪ್ರವಾಹವನ್ನು ದಾಟಿ ಮಾರ್ಗಕ್ರಮಣ ಮಾಡುತ್ತಿರುವ ಅವನಲ್ಲಿ ಒಂದು ಹೊಸ ಚೈತನ್ಯವೇ ಬಂದಂತಾಗಿತ್ತು. ಅವನು ಹಾಗೇ ಕೆಲಸಮಯ ನಡೆದು ಹೊಳೆಯನ್ನು ಅಡ್ಡಲಾಗಿ ದಾಟಿ 'ಘಟ್ಟೀ ಬಸವಣ್ಣ'ನ ಗುಡಿಯ ಹತ್ತಿರ ಬಂದು ಕುಳಿತು ಒಂದೇ ಸವನೇ ಹರಿಯುವ ನೀರನ್ನು ದಿಟ್ಟಿಸಿದ.–
"ಈ ನೀರು ಹಿಂದಕ್ಕೂ ಹರಿಯುತ್ತಿತ್ತು. ಈಗಲೂ ಹರಿಯುತ್ತದೆ. ನನ್ನ ಚೈತನ್ಯ ಮಾತ್ರ ಕೊಳಚೆಯಾಗಿ ನಿಂತಿದೆ. ಇದೇ ಸ್ಥಳದಲ್ಲಿ ನಾನು ಹಾಡಿದ್ದೆ. ಕವನಗಳನ್ನು ಬರೆದಿದ್ದೆ. ಆದರೆ ಇಂದು ಆ ಕವನಗಳು ಬಾರದಾಗಿದೆ? ಕವನ ಕನ್ನಿಕೆ ಕರೆದಾಗ ಬರುವ ಕೂಲಿಯಾಳೆ? ಅವಳು ಮತ್ತೆ ಬರಲಾರಳೆ? ನನ್ನ 'ಜೀವನ ಸಿದ್ಧಿ'ಯನ್ನು ನಾನು ಪಡೆಯಲಾರೆನೆ?" ವಿಶ್ವಾಸನಲ್ಲಿ ಅದಾವುದೇ ಸಂಕಲ್ಪ ಮೂಡಿತು. ಅದನ್ನೇ ಮೆಲುಕು ಹಾಕುತ್ತ ಅನೇಕ ತಾಸುಗಳನ್ನು ಕಳೆದ. "ಹೌದು ಇದೇ ನಿಶ್ಚಯ. ನನಗೆ ಈ ಬುರುಗು ಬಣ್ಣದ ಜೀವನ ಬೇಡ; ದಾರಿದ್ರ್ಯವನ್ನಪ್ಪುವ ಸಂಭವ ಬಂದರೂ ಸರಿ. ನನ್ನ 'ಜೀವನ ಸಿದ್ಧಿ'ಯನ್ನು ಪಡೆದುಕೊಳ್ಳಬೇಕು." ಈ 'ಜೀವನ ಸಿದ್ಧಿ'ಯೆಂಬ ಮಂತ್ರೋಚ್ಚಾರಣೆಯಿಂದ ಅವನಿಗೊಂದು ಆವೇಶವೇ ಬಂದಂತಾಯಿತು. ಅವನು ನೇರವಾಗಿ ಬೀದಿಗೆ ಹೊರಟು ಅಲ್ಲಿ ಸಿಕ್ಕ ಮೋಟಾರಿನಲ್ಲಿ ಕುಳಿತು ನಿಲ್ದಾಣಕ್ಕೆ ಬಂದು ಅಲ್ಲಿ ಗುಜ್ಜನೊಬ್ಬನ ಅಂಗಡಿಯಲ್ಲಿ ನಾಲ್ಕು ಚಪಾತಿಗಳನ್ನೂ,

ಕಡ್ಲೀಬೇಳೆಗಳನ್ನು ಪುಷ್ಕಳವಾಗಿ ಬೆರೆಸಿದ ಉಳ್ಳಾಗಡ್ಡಿಯ ಪಲ್ಯೆಯನ್ನೂ ತಿಂದು ಮೇಲೆ ಒಂದು ಕಪ್ಪು ಚಹ ಕುಡಿದು ಗಾಡಿ ಬರುತ್ತಲೇ ನಿಲ್ದಾಣದತ್ತ ಸಾಗಿ ಬಿಟ್ಟ.

ಹೂವಿನಹಳ್ಳಿಯ ತನ್ನ ಹಾಟೇಲಿನ ಪಾವಟಿಗೆಗಳನ್ನೇರಿ ಮೇಲಟ್ಟದ ಕೋಣೆಗಾಗಿ ಸಾಗುತ್ತಿರುವ ವಿಶ್ವಾಸನಿಗೆ ಆ ಕೋಣೆಯ ಬಾಗಿಲನ್ನು ಯಾರೋ ತೆಗೆದು ಕುಳಿತಿರುವಂತೆ ಭಾಸವಾಯಿತು. ಅವನು ಅಚ್ಚರಿ ಯಿಂದ ಒಳಕ್ಕೆ ಕಾಲಿಡುವಾಗ ಸಿಗರೇಟಿನಿಂದ ದುಂಡಾಕಾರವಾಗಿ ಹೊಗೆ ಬಿಡುತ್ತ ವೆಂಕಟೇಶ ಕುಳಿತಿದ್ದ. ಇವನನ್ನು ನೋಡುತ್ತಲೇ ಅವನು— "ನಿನ್ನನ್ನು ಹುಡುಕಿ ಸಾಕಾಯಿತು ಮಾರಾಯಾ ಎಲ್ಲಿ ಹೋಗುವಿಯೆಂ ಬುದನ್ನು ಹೇಳಿ ಹೋಗಬಾರದೆ? ಮನೆಯಲ್ಲಿ ತಾರಾಬಾಯಿಯವರು ಒಂದೇ ಸವನೆ ಚಡಪಡಿಸುತ್ತಿರುವರು."

"ಏನೋ ಸ್ವಲ್ಪ ವಿಶ್ರಾಂತಿ ಬೇಕಾಯಿತು. ಗೋವಿನಪುರದ ಸೃಷ್ಟಿಸೌಂದರ್ಯದಲ್ಲಿ ಬೇಸರವನ್ನು ಕಳೆಯಲೆಂದು ಹೋಗಿ ಬಂದೆ. ಅಷ್ಟೆ."

"ಓ ಹೋ ಕವಿಗಳಲ್ಲವೇ ತಾವು. ಅದೇನೆ ಇರಲಿ. ನೀನು ಕೂಡಲೇ ಹಾಲಹಳ್ಳಿಗೆ ಹೋಗು. ಮಾಡುವ ಕೆಲಸ ಸಾಕಷ್ಟಿದೆ. ಇತ್ತೀ ಚೆಗೆ ಜೀವಣ್ಣನ ಪತ್ತೆಯೇ ಇಲ್ಲ. ನಮ್ಮ ವ್ಯವಹಾರಗಳೆಲ್ಲ ಹಾಗೆಯೇ ನಿಂತಿವೆ. ಆ ದಿನ ನಾನೇ ಕೆಲವು ಸಾಮಾನುಗಳನ್ನು ಪೂರೈಸಬೇಕೆಂದು ರಾತ್ರಿ ನಿನ್ನ ಮನೆಗೆ ಹೋಗಿದ್ದೆ. ಆದರೆ ಏನು ಮಾಡುವದು. ತಾರಾ ಬಾಯಿ ಏನನ್ನೋ ತಲೆಯಲ್ಲಿ ಹಾಕಿಕೊಂಡು ಬಾಗಿಲವನ್ನೇ ತೆರೆಯ ಲಿಲ್ಲ ಹೀಗಾಗಿ ವ್ಯವಹಾರವೆಲ್ಲ ಸಾಗದಂತಾಗಿದೆ. ಜೀವಣ್ಣನ ಬದಲಿ ಯಾರನ್ನಾದರೂ ನಿಯಮಿಸಿಕೊಂಡು ಕೆಲಸ ಸಾಗಿಸಬೇಕಾಗಿದೆ. ಆ ಜೀವಣ್ಣನನ್ನು ನೀನು ಒದ್ದು ಹಾಕಿದ್ದು ಒಳ್ಳೆಯದೇ ಆಯಿತು. ಆ ಮೂರ್ಖ ಈಗ ಮನಸ್ಸಿಗೆ ಬಂದಂತೆ ಸುದ್ದಿಗಳನ್ನು ಹೇಳುತ್ತಿರುವನು. ಅವನ ಹಲ್ಲು ಮುರಿಯಬೇಕಾಗಿದೆ. ಹೋಗಲಿ. ಈ ಐದು ಸಾವಿರ ರೂಪಾಯಿಗಳನ್ನು ತೆಗೆದುಕೊ. ಮನೆಯಲ್ಲಿ ಖರ್ಚಿಗೆ ಏನು ಇಲ್ಲವೆ

ನ್ನುತ್ತಿದ್ದಳು. ಅವಳಿಗೊಂದು ಸಾವಿರ ರೂಪಾಯಿಗಳನ್ನು ಕೊಡು ನಾನು ಒಂದೆರಡು ದಿನಗಳಲ್ಲಿ ಬಂದು ಬಿಡುತ್ತೇನೆ. ಮುಂಬಯಿಂದ ಬರುವ ಹಣ ಇನ್ನೂ ಬಂದಿಲ್ಲ. ಬಾಬಾಸಾಹೇಬನಿಗೆ ಸಕ್ಕರಿಯನ್ನು ಹೊಂದಿಸಿ ಕೊಟ್ಟು ಬಿಡು. ಪಟ್ಟಣಶೆಟ್ಟರು ಸಣ್ಣಕ್ಕಿಯನ್ನು ಕೇಳುತ್ತಿದ್ದರು. ಆ ವ್ಯವಹಾರವನ್ನು ಲಾಭದಾಯಕವಾಗಿ ಬಗೆಹರಿಸಿಕೋ." ವೆಂಕಟೇಶ ಉಸಿರು ಬಿಡದೇ ಹೇಳುತ್ತಿರುವ ಈ ಕೆಲಸಗಳನ್ನು ವಿಶ್ವಾಸನು ನಿರ್ಲಕ್ಷ ದಿಂದಲೇ ಕೇಳಿದನು. ಅವನಿಗೆ ತನ್ನ ನಿರ್ಧಾರವನ್ನು ಆಗಲೇ ಹೇಳಿ ಬಿಡಬೇಕೆಂದು ಮನಸ್ಸಾಯಿತು. "ವೆಂಕಟೇಶ ಒಂದು ಮಾತನ್ನು ಕೇಳು ತ್ತೇನೆ. ದಯವಿಟ್ಟು ಸಿಟ್ಟಿಗೇಳಬೇಡ."

ವ್ಯವಹಾರಕ್ಕೆ ಸಂಬಂಧಿಸಿದ ನಿನ್ನ ಯಾವ ಮಾತನ್ನೂ ನಾನು ಮೀರಿಲ್ಲ ವಿಶ್ವಾಸ."

"ಈ ಮಾತು ವ್ಯವಹಾರಕ್ಕೇ ಸಂಬಂಧಿಸಿದೆ. ನನ್ನನ್ನು ಈ ವ್ಯವ ಹಾರದಿಂದ ಮುಕ್ತ ಮಾಡಿ ಬಿಡು."

"ಅಂದರೆ?"

"ನನಗೆ ಈ ವ್ಯವಹಾರದಲ್ಲಿ ಹೇಸಿಕೆಯಾಗತೊಡಗಿದೆ. ನನ್ನ ಜೀವನ ಈ ವ್ಯವಹಾರದಿಂದ ಯಾವ ಸಿದ್ಧಿಯನ್ನೂ ಪಡೆಯುವದಿಲ್ಲವೆಂದು ನನಗೆ ಮನವರಿಕೆ ಯಾಗಿದೆ."

"ನಾ ಕೊಡುತ್ತಿರುವ ಹಣದ ಲಾಭಾಂಶವು ಕಡಿಮೆಯುದೆಂದು ಈ ಮಾತೆ?"

"ನಾನು ಹೇಳುವ ಮಾತು ಹಣಕ್ಕೆ ಸಂಬಂಧಿಸಿದುದಲ್ಲ. ಜೀವ ನಕ್ಕೆ ಸಂಬಂಧಿಸಿದ್ದು. ನನ್ನ ಅಂತರಂಗಕ್ಕೆ ಸಂಬಂಧಿಸಿದ್ದು."

"ನಿನ್ನ ಜೀವನದಲ್ಲಿ ನಾನು ಯಾವ ಕೊರತೆಯನ್ನುಂಟು ಮಾಡಿ ದ್ದೇನೆಂಬುದನ್ನು ಸ್ಪಷ್ಟವಾಗಿ ಹೇಳಿಬಿಡು. ಅದನ್ನು ಪೂರೈಸದಿದ್ದರೆ ಆ ಮೇಲೆ ಮಾತಾಡು."

"ನಿನ್ನ ದೃಷ್ಟಿಯಿಂದ ನನಗೆ ಯಾವ ಕೊರತೆಯೂ ಇಲ್ಲ. ನನ್ನ

ಷ್ಟಿಯಿಂದ ಮಾತ್ರ ನನ್ನ ಜೀವನದಲ್ಲಿ ಒಂದು ಕೊರಕಲು ಬಿದ್ದಿದೆ ಎಂದು ಸ್ಪಷ್ಟವಾಗಿದೆ."

"ನಿನ್ನ ಮಾತೇ ನನಗೆ ಅರ್ಥವಾಗಲೊಲ್ಲದು."

"ನಿನಗೆ ಈ ಮಾತು ಅರ್ಥವಾಗುವದಿಲ್ಲ ವೆಂಕಟೇಶ. ನನ್ನ ಸಾಹಿತ್ಯಶಕ್ತಿ ಕಮರಿ ಹೋಗಿದೆ."

"ನಿನ್ನ ಸಾಹಿತ್ಯಶಕ್ತಿಯನ್ನು ಬೆಳೆಯಿಸಿಕೊಳ್ಳಲು ನಾನು ಬೇಡ ವೆಂದೆನೆ?"

"ಈ ವ್ಯವಹಾರದ ವಕ್ರ ಮಾರ್ಗದಲ್ಲಿ ಸಾಹಿತ್ಯದ ಸರಳತೆಗೆ ದಾರಿ ಸಿಗಲಾರದು ವೆಂಕಟೇಶ. ನಾನು ಅಕ್ಷಮ್ಯ ಅಪರಾಧ ಮಾಡಿರುವೆ. ಈ ಅಪರಾಧದ ಉಪಶಮನಕ್ಕಾಗಿ ನಾನು ಪ್ರಯತ್ನಿಸಬೇಕಾಗಿದೆ. ನೀನು ನನ್ನನ್ನು ಮುಕ್ತ ಮಾಡಬೇಕು." ಹೊತ್ತಿದ ಸಿಗರೇಟು ಅರ್ಧ ಸುಟ್ಟು ಹೋಗುವ ಹಾಗೆ ಜುರುರೆಯನ್ನು ಎಳೆದು ವೆಂಕಟೇಶ ಕೋಣೆಯ ತುಂಬೆಲ್ಲ ಹೊಗೆ ಕಾರಿದ. ಅವನಿಗೆ- ವಿಶ್ವಾಸನನ್ನು ಬಿಡುವುದು ಸಾಧ್ಯ ವಾಗಿರಲಿಲ್ಲ. ವಿಶ್ವಾಸನ ಬುದ್ಧಿ ಮತ್ತೆಯಿಂದ ಅವನ ಸಂಪತ್ತು ಒಂದಕ್ಕೆ ಹತ್ತಾಗಿತ್ತು. ಅವನ ಹೆಡ್ಡಾಟಕ್ಕೂ, ಮನೋರಂಜನೆಗೂ ಸಾಕಷ್ಟು ಅವ ಕಾಶ ಅವನ ಪುಣ್ಯದಿಂದಲೇ ದೊರೆತಿತ್ತು. ಸಟ್ಟಾ ವ್ಯಾಪಾರದಲ್ಲಿ ಸಾಕಷ್ಟು ಮನಸ್ಸು ತೊಡಕಿಸಲು ಅವನ ದಯೆಯೇ ಕಾರಣವಾಗಿತ್ತು. ಅವನ ಕರ್ತೃತ್ವ ಶಕ್ತಿಯಲ್ಲಿ ತನ್ನ ವ್ಯವಹಾರ ಅಡೆತಡೆಯಿಲ್ಲವೆ ಸಾಗು ತ್ತಿರುವದನ್ನು ಕಳೆದುಕೊಳ್ಳಲು ಅವನು ಸಿದ್ಧನಿರಲಿಲ್ಲ. ಏರಿಕೆಯ ಗೃಹ ಗಳು ಅವನಿಗೆ ಈ ಸಟ್ಟಾ ವ್ಯಾಪಾರದಲ್ಲಿ ಸಾಕಷ್ಟು ಲಾಭವನ್ನು ತಂದು ಕೊಡುತ್ತಿದ್ದರೂ ಅವನಿಗೆ ಸಮಾಧಾನವಿರಲಿಲ್ಲ ಈ ಚಿಕ್ಕ ಪುಟ್ಟ ಲಾಭ ಗಳಿಂದ ಅವನ ಹಣದ ದಾಹವು ಕಡಿಮೆಯಾಗದ್ದರಿಂದ ಅವನೊಮ್ಮೆ ತನ್ನ ಸರ್ವ ಸಂಪತ್ತನ್ನೆಲ್ಲ ಈ ಸಟ್ಟಾವ್ಯಾಪಾರದಲ್ಲಿ ತೊಡಕಿಸಿ ಕುಬೇರನಾಗ ಬೇಕಂದು ಹೊಂಚು ಹಾಕಿದ್ದ. ಅವನಿಗೆ ಈ ಕಾರ್ಯದಲ್ಲಿ ಧೈರ್ಯವೂ ಇತ್ತು. ತನ್ನ ಯೋಜನೆಯಲ್ಲಿ ಯಶವನ್ನು ಗಳಿಸಿ ಇಡಿಯ ಹೂವಿನ ಹಳ್ಳಿಯನ್ನೇ ಕೊಂಡುಕೊಳ್ಳುವ ಮಹಾಗೋಪುರವನ್ನು ಮನಸ್ಸಿನಲ್ಲಿಯೇ

ಕಟ್ಟಿಕೊಂಡಿದ್ದ. ಹಾಗೆ ಬರುವ ಸಂಪತ್ತಿನ ಹೊಳೆಯಲ್ಲಿ ಈಗಾಗಲೇ ಅವನು ಈಜ ತೊಡಗಿದ್ದ. ಇಂತಹ ಹೊತ್ತಿನಲ್ಲಿ ವಿಶ್ವಾಸನನ್ನು ಬಿಡುವ ಮೂರ್ಖತನವನ್ನು ಅವನು ಮಾಡಬಹುದೆ? "ನಿನ್ನಂತೆಯೇ ಆಗಲಿ ವಿಶ್ವಾಸ, ನಾನು ನಿನ್ನನ್ನು ಮುಕ್ತ ಮಾಡಿದೆನೆಂದು ತಿಳಿ. ಇದರಿಂದ ನಿನ್ನ ಸಾಹಿತ್ಯ ಶಕ್ತಿ ಹೇಗೆ ಬೆಳೆಯುವದು ಹೇಳು ನೋಡೋಣ. ನಿನ್ನನ್ನು ಯಾರು ಕೇಳುವರು? ಸಮಾಜ ನಿನ್ನನ್ನು ಕತ್ತು ಹಿಡಿದು ದಬ್ಬಿದುದನ್ನು ಇಷ್ಟು ಬೇಗ ಮರೆತೆಯಾ? ನಿನ್ನ ಸಾಹಿತ್ಯ ಶಕ್ತಿಯಲ್ಲಿ ನನಗೆ ಅಭಿಮಾನವಿಲ್ಲದಿದ್ದರೆ ನಿನ್ನನ್ನು ನಾನು ಬರಮಾಡಿಕೊಳ್ಳುತ್ತಲೇ ಇರಲಿಲ್ಲ. ಸಾಹಿತ್ಯ ಸಾಮರ್ಥ್ಯದಲ್ಲಿ ವ್ಯವಹಾರ ಕುಶಲತೆ ಇರದಿದ್ದರೆ ಅದರಿಂದ ಯಾವ ಪ್ರಯೋಜನ ಹೇಳು. ಹಸಿದ ಹೊಟ್ಟೆಯಿಂದ ಸಾಹಿತ್ಯ ನಿರ್ಮಾಣವಾಗಬಲ್ಲದೆ? ನಾನು ಈ ಮೊದಲೇ ಒಂದು ಯೋಜನೆಯನ್ನು ನಿನಗಾಗಿ ಮಾಡಿರುವೆ. ಈ ತಿಂಗಳಲ್ಲಿಯೇ ಒಂದು ಮುದ್ರಣಾಲಯ ತೆರೆದುಕೊಡುವೆ. ನೀನು ಒಂದು ಮಾಸಿಕ ಹೊರಡಿಸಬಹುದು. ಗ್ರಂಥಮಾಲೆಗಳನ್ನು ಮುದ್ರಿಸಬಹುದು. ಆಗ ನಿನ್ನನ್ನು ಈ ವ್ಯವಹಾರದಿಂದ ಮುಕ್ತ ಮಾಡಿಬಿಡುವೆ. ನಿನ್ನ ದಾರಿ ಸುಗಮವಾಗಿ ಸಾಗುವದನ್ನು ಕಂಡರೆ ನನಗೆ ಆಗುವ ಆನಂದ ಕಡಿಮೆಯದಲ್ಲ. ಆ ಮೇಲೆ ನೀನಾಯಿತು ನಿನ್ನ ಸಾಹಿತ್ಯ ಕಾರ್ಯವಾಯಿತು. ಈಗ ಸುಮ್ಮನೇ ದುಡುಕಬೇಡ. ವಿಚಾರಿಸು. ಬುದ್ಧಿ ಶಕ್ತಿಯಲ್ಲಿ ನೀನು ನನ್ನನ್ನೂ ಮೀರಿಸಿರುವಿ."

ವೆಂಕಟೇಶನ ಮಾತುಗಳನ್ನು ವಿಶ್ವಾಸ ಬಹುವಾಗಿ ಮೆಚ್ಚಿದ. ತನಗೆ ಬೇಕಾದ ಮಾತನ್ನು ಮೊದಲೇ ವಿಚಾರಿಸಿದ ಅವನ ಗೆಳೆತನವನ್ನು ಅಮೂಲ್ಯವಾಗಿ ಭಾವಿಸಿದ– "ಈ ಮಾತು ಖಂಡಿತವಷ್ಟೆ?"

"ನಾನು ಎಂದಿಗೂ ವ್ಯರ್ಥ ಮಾತುಗಳನ್ನು ಆಡುತ್ತಿರುವದಿಲ್ಲ. ಇದು ನಿರ್ಧಾರದ ಮಾತಾಗಿದೆ." ವಿಶ್ವಾಸ ಗೆಳೆಯನ ಕೈಯನ್ನು ಅದುಮಿದ. ಅವನ ಕಣ್ಣು ಒದ್ದೆಯಾಗಿದ್ದವು. ಕೃತಜ್ಞತಾ ಭಾವವು ಆ ಕಣ್ಣುಗಳಲ್ಲಿ ಸೂಸುತ್ತಿತ್ತು. "ನೀನು ನನ್ನ ಪಾಲಿನ ದೇವರು ವೆಂಕಟೇಶ."

"ನಿನ್ನ ಕವಿತ್ವ ಈಗಲೇ ಪ್ರಾರಂಭವಾಗಿ ಬಿಟ್ಟಿತೇನು?"

"ಇದು ಕವಿತ್ವವಲ್ಲ ವೆಂಕಟೇಶ, ಕೃತಜ್ಞತೆ."

"ಹಾಂ! ಒಂದು ಮಾತನ್ನು ನಾನು ಹೇಳಲೇಬೇಕು. ನೀನು ಮನೆಗೆ ಹೋದಕೂಡಲೇ ನಾನು ಕ್ಷಮೆಯನ್ನು ಬೇಡಿದೆನೆಂದು ನಿನ್ನ ಹೆಂಡತಿಗೆ ಹೇಳು."

"ಯಾವ ಕಾರಣಕ್ಕಾಗಿ?" ವಿಶ್ವಾಸ ಗೊಂದಲದಲ್ಲಿ ಬಿದ್ದ.

"ಆಗಲೇ ಹೇಳಿದೆನಲ್ಲ. ಆ ರಾತ್ರಿ ನಿನ್ನ ಮನೆಗೆ ಹೋಗಿದ್ದೆ ಸಾಮಾನುಗಳನ್ನು ತರಲೆಂದು. ಈ ಸುಟ್ಟ ಚಾಳಿಯೊಂದಿದೆಯಲ್ಲ. ಆ ದಿನ ಸ್ವಲ್ಪ ಹೆಚ್ಚೇ ಕುಡಿದಿದ್ದೆನೆಂದು ತೋರುತ್ತದೆ. ನನಗೆ ಕೂಡಲೇ ಕೆಲವು ಬಾಟ್ಲಿಗಳನ್ನು 'ಕ್ರಿಶ್ಚನ್ ಕ್ಲಬ್ಬಿ'ಗೆ ಕಳಿಸಬೇಕಾಗಿದ್ದಿತು. ತಾರಾ ಬಾಯಿ ಬಾಗಿಲನ್ನೇ ತೆರೆಯಲಿಲ್ಲ. ನನ್ನ ಮಾತು ಸ್ವಲ್ಪ ಬಿರುಸಾಗಿ ಹೋಯಿತೇನೊ. ಈಗ ನನಗೆ ಪಶ್ಚಾತ್ತಾಪವಾಗಿದೆ. ತಂಗಿಯ ಮನಸ್ಸು ನೋಯಿಸಿದೆನಲ್ಲಾ ಎಂದು."

ಇದೇನು ದೊಡ್ಡಮಾತು ಬಿಡು. ನಾನೆಲ್ಲವನ್ನೂ ಅವಳಿಗೆ ತಿಳಿಸಿ ಹೇಳುತ್ತೇನೆ. ನಿನ್ನ ಕುಡಿಯುವ ಚಟ ಎಂದು ಹಾಳಾಗಿ ಹೋಗುವದೊ?"

"ಅದಕ್ಕೂ ಸಮಯ ಬಂದಿದೆ. ನೋಡುವಿಯಂತೆ." ಎನ್ನುತ್ತ ವೆಂಕಟೇಶ ಅವನ ಕೈಯಲ್ಲಿ ಆರು ಸಾವಿರ ರೂಪಾಯಿಗಳನ್ನು ಕೊಟ್ಟು ಕೂಡಲೇ ಹೋಗಿಬಿಡಲು ಹೇಳಿದ. ಈ ಹೊಸ ವಿಚಾರದಿಂದ ವಿಶ್ವಾಸ ನಲ್ಲಿ ಒಂದು ಹೊಸ ಸ್ಫೂರ್ತಿಯೇ ಉದಯಿಸಿತು. ಅವನು ಆಗಲೇ ತನ್ನ ಮಾಸಪತ್ರಿಕೆಯ ಕನಸನ್ನು ಕಾಣತೊಡಗಿದ. ಮುದ್ರಣಾಲಯದ ಆಫೀಸಿನಲ್ಲಿ ವಿರಾಜಮಾನನಾಗಿ ಬಿಟ್ಟ. ಗೋವಿನಪುರದ ಹೆಡ್‌ಮಾಸ್ತ ರರಿಗೆ ತಾನು ಧೈರ್ಯವಾಗಿ ಈ ಮಾತನ್ನು ಹೇಳಲು ಅನುವಾಯಿತೆಂದು ಆನಂದಿತನಾದ. ಅನೇಕ ದಿನಗಳಿಂದ ಕಾಣದ ತಾರಾನ ಮುಂದೆ ಈ ಯೋಜನೆಯನ್ನು ಹೇಳಿ ಅವಳ ಬಾಳು ಹೇಗೆ ಸಾರ್ಥಕವಾಗುವದೆಂಬು ದನ್ನು ವಿವರಿಸಲು ಆತುರನಾದ. ಇದರಿಂದ ಜೀವಣ್ಣಾನ ಅಪವಾದಕೂ

ತಣ್ಣೀರನ್ನೆರಚುವ ಯೋಗವು ಬರುವದೆಂದು ಹಾರಿಯಾಡಿದ. ತನ್ನ ಮಾಸಪತ್ರಿಕೆಗೆ ತಾರಾನ ಉಪಕಾರ ಸ್ಮರಣೆಗಾಗಿ 'ಸಾಧ್ವಿ' ಎಂಬ ಹೆಸರನ್ನಿಡಬೇಕೋ ಅವಳ ಹಾಗೂ ತನ್ನ ಹೋರಾಟವನ್ನು ನೆನೆದು ಅದಕ್ಕೆ 'ಜೀವನ ಸಿದ್ಧಿ' ಎಂಬ ಹೆಸರನ್ನಿಡಬೇಕೋ ಎಂದು ವಿಚಾರಿಸ ತೊಡಗಿದ.

೧೪

ವೆಂಕಟೇಶನ ಹೊಸ ಯೋಜನೆಯಲ್ಲಿ ನವೋತ್ಸಾಹವನ್ನು ತಾಳಿದ ವಿಶ್ವಾಸ ಮನಸ್ಸಿನಲ್ಲಿ ಅನೇಕ ಗಾಳಿಗೋಪುರಗಳನ್ನು ಕಟ್ಟುತ್ತ ಉಲ್ಲಾಸದಿಂದ ಮನೆಯ ಒಳಗೆ ಕಾಲಿಟ್ಟಾಗ ಅಲ್ಲಿಯ ವಿಚಿತ್ರ ಪರಿಸ್ಥಿತಿಯನ್ನು ಕಂಡು ಬೆರಗಾದ. ಪ್ರಯಾಣಕ್ಕೆ ಸಿದ್ಧವಾಗಿ ಕಟ್ಟಿಟ್ಟ ಗಂಟುಗಳು ಹುರಿಗಳಿಂದ ಬಂಧಿತವಾಗಿ ಅಲ್ಲಲ್ಲಿ ಬಿದ್ದುಕೊಂಡಿದ್ದವು. ಮನೆ ಅವ್ಯವಸ್ಥೆಯ ಆಗರವೇ ಆಗಿತ್ತು. ಈ ಹಗರಣದ ಕಲ್ಪನೆಯನ್ನು ಮಾಡಿಕೊಳ್ಳಲು ಅಸಮರ್ಥನಾದ ಅವನಿಗೆ ಇದೆಲ್ಲವೂ ತೀರ ವಿಚಿತ್ರವಾಗಿ ತೋರತೊಡಗಿತು. "ತಾರಾ ಹೊರಟಿರುವಳಾದರೂ ಎಲ್ಲಿಗೆ? ಏನುಕಥೆ?" ಎಂದವನು ನಿಂತಲ್ಲಿಯೇ ನಿಂತು ವಿಚಾರಿಸುತ್ತಿರುವಾಗ ಅವಳು ಹೊರಗೆ ಬಂದಳು. ಅವಳ ಬಿಳುಪೇರಿದ ಮುಖವನ್ನು ಕಂಡ ವಿಶ್ವಾಸನ ಉತ್ಸಾಹ ಸಪ್ಪನೇ ಇಳಿಯಿತು. ಅವಳು ಅಷ್ಟು ಕೃಶಳಾಗಿ ತೋರಿದಳು. ಅವಳ ಮಂದಸ್ಮಿತ ಮಾಯವಾಗಿತ್ತು; ತುಂಬಿದ ಗಲ್ಲ ಒಳಸೇರಿದ್ದವು. ಬಣ್ಣ ಕಮರಿದಂತಾಗಿ ಕರಿಯ ಛಾಯೆ ಮುಖದ ಬಣ್ಣವನ್ನು ಕೆಡಿಸಿಬಿಟ್ಟಿತ್ತು. ಪತಿಯನ್ನು ನೋಡಿದ ಅವಳು ಯಾವ ಉತ್ಸಾಹವನ್ನೂ ತೋರಲಿಲ್ಲ. ಇದರಿಂದಂತೂ ಅವನು ತೀರಾ ಗಾಬರಿಯಾದ. "ಕೊನೆಗೊಮ್ಮೆ ಮನೆಯ ನೆನಪಾಯಿತೆ?"

"ಕೆಲಸದ ಒತ್ತಡದಲ್ಲಿ ಕೂಡಲೇ ಬರಲಾಗಲಿಲ್ಲವೆಂದ ಮಾತ್ರಕ್ಕೆ ನಾನು ಮನೆಯನ್ನೇ ಮರೆತಂತಾಯಿತೆ? ನಿನ್ನ ಮಾತಿನ ರೀತಿ ಬಹಳ ವಿಚಿತ್ರವಾಗಿದೆ."

"ವಿಚಿತ್ರ ಪರಿಸ್ಥಿತಿಯಲ್ಲಿ ಸಿಕ್ಕವಳ ರೀತಿಯು ವಿಚಿತ್ರವಾಗಿಯೇ ತೋರುವದು ಸ್ವಾಭಾವಿಕ" ಹೀಗೆ ಹೇಳುತ್ತಲೇ ಅವಳ ಕಣ್ಣೊಳಗಿಂದ ನೀರು ಚಿಮ್ಮಿದವು. ವಿಶ್ವನಾಥನಿಗೆ ಆಗಲೇ ವೆಂಕಟೇಶನ ಮಾತುಗಳು ನೆನಪಾದವು. ಅವನ ನಡತೆಯ ಆಘಾತದ ಪರಿಣಾಮವೇ ತಾರಾನ ನೋವಿಗೆ ಕಾರಣವಾಗಿರಬಹುದೆಂಬುದನ್ನು ಕಂಡುಕೊಂಡ. ಈ ಮಾತನ್ನು ಅವನೇ ಒಪ್ಪಿ ಪಶ್ಚಾತ್ತಾಪವನ್ನು ವ್ಯಕ್ತ ಮಾಡಿರುವಾಗ ಈ ಭೀತಿಗೆ ಅರ್ಥವೇ ಇಲ್ಲವೆಂದು ತಿಳಿದು ಆ ವಿಚಾರವನ್ನೂ ಅವಳಿಗೆ ಹೇಳಿ ಅವನ ಕ್ಷಮಾಪಣೆ ನಿವೇದಿಸಬೇಕೆಂದು ಸನ್ನದ್ಧನಾದ. ಅವಳ ಕಂದಿದ ಮುಖ ಅವಳ ಭೀತಿಯ ಆಳವನ್ನು ಸೂಚಿಸುತ್ತಿತ್ತು. "ಕೊನೆಗೊಮ್ಮೆ ಮನೆಯ ನೆನಪಾಯಿತೆ?" ಎಂದ ಮಾತು ಅವನ ಕರುಳನ್ನು ಕೊರೆಯಿತು. ಅವನು ಅವಳನ್ನು ಬರಸೆಳೆದು ಸೋಫಾದ ಮೇಲೆ ಕುಳ್ಳಿರಿಸಿಕೊಂಡು ಅವಳ ಬೆನ್ನಮೇಲೆ ಮೃದುವಾಗಿ ಕೈಯಾಡಿಸಿದ. ಅವನ ಹಸ್ತ ಸ್ಪರ್ಶದಿಂದ ಅವಳ ದುಃಖ ದ್ವಿಗುಣಿತವಾಯಿತೇನೊ ಅವಳು ಬಿಕ್ಕಳಿಸಿ ಅವನ ಹೃದಯದ ಮೇಲೆ ಮುಖವನ್ನಿರಿಸಿದಳು. ಅವಳ ಕಣ್ಣೀರಿನ ಬಿಸಿಗೆ ಅವನ ಹೃದಯ ಕರಗಿಹೋಯಿತು. "ತಾರಾ."

"ಈ ನರಕದ ಬಾಳಿನಿಂದ ನಾವು ಮುಕ್ತರಾಗಲೇಬೇಕು. ನನಗೆ ಈ ಊರಲ್ಲಿ ಇನ್ನು ಮೇಲೆ ಒಂದು ಕ್ಷಣಹೊತ್ತು ಸಹ ನಿಲ್ಲಲು ಸಾಧ್ಯವಿಲ್ಲ. ನಾನು ತಪ್ಪು ಮಾಡಿದೆ. ಆ ತಪ್ಪಿನ ಶಿಕ್ಷೆ ಅನುಭವಿಸಿ ಆಯಿತು. ಮರ್ಯಾದೆಗೆಟ್ಟ ಜೀವನವನ್ನು ಸಹಿಸುವದು ನನಗೆ ಸಾಧ್ಯವೇ ಇಲ್ಲ." ತಾರಾನ ಮಾತು ಬಿಸಿಯಾಗಿ ಹೊರಬಿದ್ದಿತು. "ನೀನು ಯಾವ ಮಾತನ್ನು ಕುರಿತು ಹೀಗೆ ಆಡುತ್ತಿರುವಿಯೆಂಬುದನ್ನು ನಾನು ತಿಳಿದುಕೊಂಡಿರುವೆ ತಾರಾ! ಅದೊಂದು ವಿಷಮ ವೇಳೆಯಲ್ಲಿ - ವೆಂಕಟೇಶ ಎಚ್ಚರವಿಲ್ಲದಾಗ ಮಾಡಿದ ತಪ್ಪು. ಅದಕ್ಕಾಗಿ ಅವನಿಗೆ ಸಂಪೂರ್ಣ ಪಶ್ಚಾತ್ತಾಪವಾಗಿದೆ. ಅವನು ನಿನ್ನ ಕ್ಷಮಾಪಣೆಯನ್ನೂ ಕೇಳಿಕೊಂಡಿದ್ದಾನೆ. ನೀನು ಅವನನ್ನು ಕ್ಷಮಿಸಬೇಕು. ಮೇಲಾಗಿ ಆ ದಿನ ನೀನು ಎಲ್ಲವನ್ನೂ ತಪ್ಪಾಗಿ ತಿಳಿದುಕೊಂಡಿರುವಿ."

ತಾರಾ ಗಂಡನನ್ನು ಕೆಕ್ಕರಿಸಿ ನೋಡಿದಳು. "ನಿಮ್ಮ ಗೆಳೆಯನು ಪರಮ ನೀಚನಾಗಿದ್ದಾನೆ."

"ಅವನ ಕುಡುಕತನ ಒಮ್ಮೊಮ್ಮೆ ತಪ್ಪು ಕಲ್ಪನೆಗೆ ಅವಕಾಶ ಮಾಡಿ ಕೊಡುತ್ತದೆ ತಾರಾ. ಅವನು ಜನ್ಮತಃ ನೀಚನಲ್ಲ."

"ಧರ್ಮರಾಜನಿಗೆ ದುರ್ಯೋಧನನು ಕೂಡ ಸುಯೋಧನನಾಗಿ ಕಾಣುವದು ಅಚ್ಚರಿಯಲ್ಲ. ನಿಮ್ಮ ಸರಳ ಹೃದಯ ನಿಮಗೊಂದು ಕುಂದು. ಅದೇನೆ ಇರಲಿ ನನಗೆ ಮಾತ್ರ ಇಲ್ಲಿರುವದು ಸಾಧ್ಯವಿಲ್ಲ."

"ತಾರಾ, ವೆಂಕಟೇಶನ ತ್ಯಾಗವನ್ನು ನೀನು ಚನ್ನಾಗಿ ತಿಳಿದು ಕೊಂಡಿಲ್ಲ. ಅವನು ನನಗಾಗಿ ನೀಡುತ್ತಿರುವ ಸಹಾಯ ಅನುಪಮ ವಾಗಿದೆ. ನನಗೆ ಕೂಡ ಈ ಬಾಳು ಬೇಡವಾಗಿತ್ತು. ಆದರೆ ನನಗಾಗಿ ಅವನು ಬೇರೆ ಯೋಜನೆಯನ್ನೇ ಮಾಡಿದ್ದಾನೆ. ನನ್ನ ಸಾಹಿತ್ಯ ಶಕ್ತಿಗೆ ಸಾಕಷ್ಟು ಅವಕಾಶ ಸಿಗುವಂತೆ ಏರ್ಪಾಡನ್ನೂ ಮಾಡಿದ್ದಾನೆ. ಇಂತಹ ಸಹಾಯವನ್ನು ದೂಡಿ ನಾವು ಎದ್ದು ಹೋಗುವದು ಸರಿಯಾಗ ಬಹುದೇ ಹೇಳು."

"ಅವನ ಯೋಜನೆ ಕವಡು ಕಂಟಕವಾಗಿದೆ. ಈಗಾದ ನಿಮ್ಮ ದುರವಸ್ಥೆಯನ್ನು ನೋಡಿ ಸಾಕಾಗಿದೆ. ನಿಮ್ಮನ್ನು ಪೂರಾ ಚರಂಡಿಗೆ ನೂಕಿ ಬಲಿಹಾಕಬೇಕೆಂದು ಅವನು ನಿರ್ಧರಿಸಿದಂತೆ ತೋರುತ್ತದೆ. ಅವನ ಸಹಾಯವೂ ಬೇಡ;—ಅವನ ಸಹವಾಸವೂ ಬೇಡ. ಬಡವರಾಗಿ ನಮ್ಮ ಹಳ್ಳಿಯಲ್ಲಿ ದರಿದ್ರ ಜೀವನವನ್ನು ಸಾಗಿಸುವದೇ ನನಗೆ ಪ್ರಿಯ ವಾಗಿದೆ. ಈ ಶ್ರೀಮಂತರು ಯಾವ ವೇಳೆಯಲ್ಲಿ ಎಂತಹ ಅಧಮತನ ವನ್ನು ಮಾಡಿ ಒಂದು ಕುಟುಂಬದ ಜೀವ ತೆಗೆದುಕೊಳ್ಳುವರೋ ತಿಳಿಯದು."

"ನಾವು ಎದ್ದು ಹೋದರೆ ಏನನ್ನು ಸಾಧಿಸಿದಂತಾಗುವದು?"

"ನಾವು ಇಲ್ಲಿಯೇ ಇದ್ದು ಸಾಧಿಸುವದು ಅಷ್ಟರಲ್ಲಿಯೇ ಇದೆ.'

"ನೀನು ಮನೋರಮೆಯ ಜೀವನವನ್ನು ಯೋಚಿಸಬೇಡವೆ? ಆ ದಿನ ನೀನು ಅವಳ ಜೀವನಕ್ಕಾಗಿ ಹಾಕಿದ ಯೋಜನೆಗಳೆಲ್ಲ ಮಾಯ ವಾಗಬಾರದು. ಅವಳ ಬಾಳಿಗಾಗಿ ನಾವು ಮಾಡಬೇಕಾದ ಕರ್ತವ್ಯವೂ ಇದೆ ತಾರಾ."

ಮನೋರಮೆಯ ಮಾತಿನಿಂದ ತಾರಾ ಕಿಡಿಕಿಡಿಯಾದಳು. ಜೀವಣ್ಣ ಹೇಳಿ ಹೋದ ಮಾತುಗಳು ನೆನಪಾಗಿ ಅವಳ ಹೃದಯ ಕಲವಿಸಿ ಗೊಂಡಿತು; ಅಂತರಂಗದಲ್ಲಿ ಜ್ವಾಲೆಯೇ ಎದ್ದಿತು. ಅವಳು ನಡುಗುವ ಸ್ವರದಲ್ಲಿ, "ಈ ಅನರ್ಥಕ್ಕೆ ಅವಳೇ ಕಾರಣವಾಗಿರುವಾಗ ಅವಳ ಬಗ್ಗೆ ನಾನು ಮಾಡುವ ವಿಚಾರ ಯಾವದೂ ಇಲ್ಲ. ಅವಳು ಕುಲಟೆಯಾಗಿ ದ್ದಾಳೆ. ಅವಳಿಗೆ ನನ್ನ ಮೇಲೆ ಮತ್ಸರವೇ ಇದೆ. ಆ ಸೇಡನ್ನು ಅವಳು...."

"ತಾರಾ, ನಿನಗೆ ಆಗಿದೆಯಾದರೂ ಏನು? ಅವಳು ಮಹಾ ಸಾಧ್ವಿಯಾಗಿದ್ದಾಳೆ."

"ನಿಮ್ಮನ್ನು ಬರಮಾಡಿಕೊಂಡ ದಿನವೇ ನಾನು ಅವಳ ಸಾಧ್ವಿತನ ವನ್ನು ಗುರುತಿಸಿದ್ದೇನೆ."

"ಅದು ಅವಳ ಔದಾರ್ಯದ ಗುರುತು ತಾರಾ."

"ಈ ಔದಾರ್ಯದ ಅನಾಹುತವನ್ನು ಹಾಗೆಯೇ ಬೆಳೆಯ ಗೊಟ್ಟು ನನ್ನ ಜೀವನವನ್ನು ಮಣ್ಣು ಮುಕ್ಕಿಸುವ ಔದಾರ್ಯ ನನ್ನಲ್ಲಿಲ್ಲ. ನಿಮಗೆ ಮನೋರಮೆಯ ಹುಚ್ಚು ಹಿಡಿದಿದೆ."

"ನಾಲಿಗೆಯ ಮೇಲೆ ಹಿಡಿತವಿರಲಿ ತಾರಾ."

"ಇದರಿಂದ ಯಾವ ಪ್ರಯೋಜನವೂ ಆಗಲಾರದು. ನೀವು ನನ್ನ ನಾಲಿಗೆಯನ್ನು ಬಂಧಿಸಿದರೆ ಸಮಾಜವೆಂದಿಗೂ ಸುಮ್ಮನಿರಲಾರದು. ಆಗಬೇಕಾದ ಅನಾಹುತ...."

"ತಾರಾ, ನಿನಗೆ ಹುಚ್ಚು ಹಿಡಿದಿದೆ."

"ನನ್ನ ಬುದ್ಧಿ ಇನ್ನೂ ಸರಿಯಾಗಿ ಕೆಲಸ ಮಾಡುತ್ತಿರುವದು ನನಗೇ ಅಚ್ಚರಿಯಾಗಿದೆ. ನೀವು ಜೀವಣ್ಣನನ್ನು ಕತ್ತು ಹಿಡಿದು ದಬ್ಬಿದುದು ಯಾವ ರಕ್ಷಣೆಗಾಗಿ ಹೇಳಬಹುದೆ?"

ಜೀವಣ್ಣ ಇಲ್ಲಿಯೂ ವಿಷದ ಬೀಜವನ್ನು ನೆಟ್ಟು ಹೋಗಿರುವ ಮಾತು ವಿಶ್ವಾಸನಿಗೆ ಮನದಟ್ಟಾಯಿತು. ಈ ವಿಚಾರದಿಂದಲಂತೂ ಅವನು ತನ್ನ ಮೊದಲಿನ ನಿರ್ಧಾರಕ್ಕೆ ಅಂಟಿಕೊಳ್ಳಲು ನಿಶ್ಚಯವನ್ನೇ ಮಾಡಿದ. ಎದ್ದು ಹೋಗಿ ಮರ್ಯಾದೆ ಕಳೆದುಕೊಳ್ಳುವದಕ್ಕಿಂತ ಪರಿಸ್ಥಿತಿಯನ್ನೆಲ್ಲ ವಿವರಿಸಿ ತಾರಾನನ್ನು ಹಾದಿಗೆ ತರುವ ಕೆಲಸ ಸುಲಭವೆಂದು ತಿಳಿದ. "ತಾರಾ, ಆ ಜೀವಣ್ಣನ ಮಾತನ್ನು ನಂಬಬೇಡ. ಅವನು ವಿಶ್ವಾಸ ಘಾತಕ;– ಕೃತಘ್ನ...."

"ವಿಶ್ವಾಸ ಘಾತಕರು ಯಾರು?"

"ನಿನ್ನ ಮಾತು ನನಗೆ ಅರ್ಥವಾಗುತ್ತದೆ ತಾರಾ. ಆದರೆ ನಿನ್ನ ಮಾತುಗಳಲ್ಲಿ ಯಾವ ಹುರುಳೂ ಇಲ್ಲದಿರುವಾಗ ಅವನ್ನು ನಂಬುವದು ನನಗೆ ಸಾಧ್ಯವಿಲ್ಲ. ನೀನು ಜೀವಣ್ಣನ ಮಾತನ್ನು ನಂಬುತ್ತಿ. ನನ್ನನು ಕ್ಷುಲ್ಲಕನೆಂದು ತಿಳಿಯುತ್ತೀ. ನಿನ್ನ ವಿಚಾರಶಕ್ತಿ ಎಲ್ಲಿ ಮಾಯವಾಯಿತು? ನೀನು ಅಪ್ರಬುದ್ಧಳಲ್ಲ. ಅಜ್ಞಾನಿಯಲ್ಲ. ಸಾರಾಸಾರ ವಿಚಾರ ಮಾಡುವ ಸಾಮರ್ಥ್ಯದಲ್ಲಿ ನನ್ನನ್ನೂ ಮೀರಿಸಿರುವಿ. ನಿನ್ನ ಮಾತುಗಳಿಂದ ನನಗಾಗುವ ವ್ಯಥೆಯನ್ನು ತಿಳಿದುಕೊಳ್ಳದಷ್ಟು ಮೂಢಳು ನೀನೆಂದಿಗೂ ಅಲ್ಲ. ಮನೋರಮೆಗೆ ದೋಷಾರೋಪಣ ಮಾಡುವ ಹುಚ್ಚಿನಲ್ಲಿ ನೀನು ನನ್ನ ಎದೆಯನ್ನೇ ತುಳಿಯುತ್ತಿರುವಿಯೆಂಬುದನ್ನು ತಿಳಿದುಕೋ."

"ಹೌದು ನಾನು ಮೂರ್ಖಳು. ನಾನು ಅವಿಚಾರಿ."

"ಈ ಉದ್ವೇಗ ಯಾವ ಕೆಲಸಕ್ಕೂ ಬಾರದು. ನಿನ್ನ ಯಾವ ಮಾತನ್ನೂ ನಾನು ಮೀರಿಲ್ಲ ತಾರಾ ...."

"ಹಾಗಾದರೆ ಈಗಲೇ ಈ ಮನೆಬಿಟ್ಟು ಹೊರಡಿ."

"ಈ ಮಾತು ಎಂದಿಗೂ ಸಾಧ್ಯವಿಲ್ಲ ತಾರಾ. ನಾನು ಎದ್ದು ಹೋಗಿ ಮನೋರಮೆಯನ್ನು ಜೀವಣ್ಣನ ಬಾಯಿಗೆ ಹಾಕಿ ಅವಳ ಮರ್ಯಾದೆಯನ್ನು ತೂರಿ ಬಿಡುವ ಅಧಮತನವನ್ನು ಎಂದಿಗೂ ಮಾಡಲಾರೆ. ಅವಳ ಮಾನರಕ್ಷಣೆಯನ್ನು ನೀನು ಮಾಡಬೇಕು."

"ನಾನು ನನ್ನ ಬಾಳುವೆಯನ್ನು ಯಜ್ಞಕುಂಡದಲ್ಲಿ ಆಹುತಿ ಹಾಕಬೇಕು."

"ನಮ್ಮ ಬಾಳಿಗೆ ಉಜ್ವಲವಾದ ಭವಿಷ್ಯವಿದೆ. ಮನೋರಮೆಯ ಹಿತದಲ್ಲಿ ನಮ್ಮ ಹಿತವೂ ಇದೆ. ನಾವು ಅವಳಿಗಾಗಿ...."

"ನೀವು ಈಗಲೇ ಹೊರಡುವಿರೋ ಇಲ್ಲವೋ?"

"ಸಾಧ್ಯವಿಲ್ಲ." ತಾರಾ ಒಮ್ಮೆ ಗಂಡನನ್ನು ತೀಕ್ಷ್ಣವಾಗಿ ನೋಡಿದಳು. ಅವಳ ಕಣ್ಣು ತಿರುಗುತ್ತಿದವು. ಅವಳೊಮ್ಮೆಲೇ ಚಿಟ್ಟನೇ ಚೀರಿ ದೊಪ್ಪನೇ ಬಿದ್ದುಬಿಟ್ಟಳು. "ತಾರಾ. ತಾರಾ. ಏ, ಕಿರಣ! ಉಷಾ...." ಎನ್ನುತ್ತ ವಿಶ್ವಾಸ ಹೆಂಡತಿಯನ್ನು ಹೊತ್ತುಕೊಂಡು ಒಳಗಿನ ಕೋಣೆಯಲ್ಲಿ ಮಲಗಿಸಿದ. ಓಡುತ್ತ ಹೋಗಿ ನೀರನ್ನು ತಂದು ತಲೆಗೆ ತಟ್ಟಿದ ಅವಳಿಗೆ ಎಚ್ಚರವೇ ಬರದಾಯಿತು. ಅವಳ ಬಿಳುಪಾದ ದೇಹ ತೀರಾ ಬೆಳ್ಳಗಾಗಿ ಹಾಸಿಗೆಗೆ ಹತ್ತಿಕೊಂಡಂತೆ ಭಾಸವಾಗಿ ಅವನು ವ್ಯಾಕುಲನಾದ. ಕಿರಣ ಓಡುತ್ತ ಬಂದು "ಅವ್ವಾ! ಅವ್ವ" ಎಂದು ಕೂಗಿದರೂ ಪ್ರಯೋಜನವಾಗದಾಯಿತು. ಉಷಾ ಒಂದೇಸವನೆ ಅಳುತ್ತಿದಳು. ವಿಶ್ವಾಸ ಒಂದೇ ಸವನೆ ಗಾಳಿಹಾಕುತ್ತ— "ತಾರಾ ತಾರಾ" ಎಂದು ಕ್ಷಣಕ್ಷಣವೂ ಉಸುರತೊಡಗಿದ. ಬಹಳ ಹೊತ್ತಿನ ಮೇಲೆ ಅವಳು ಕಣ್ಣು ತೆರೆದಳು ಒಮ್ಮೆ ಸುತ್ತಲೂ ನೋಡಿ ಒಮ್ಮೆಲೇ ಭೋರೆಂದು ಅಳತೊಡಗಿದಳು. "ತಾರಾ, ನಿನ್ನ ಮಾತನ್ನು ನಡೆಸುತ್ತೇನೆ. ಶಾಂತಳಾಗು...." ಎಂದ ವಿಶ್ವಾಸ ಅವಳ ತಲೆಯನ್ನು ತಟ್ಟತೊಡಗಿದ. ವಿಶ್ವಾಸ ದಿಕ್ಕುಗಾಣದವನಾದ. ಅವನ ಭವಿಷ್ಯ ಜೀವನದ ಕನಸುಗಳೆಲ್ಲ ಒಂದೇ ಏಟಿಗೆ ಪುಡಿಪುಡಿಯಾದವು. ತಾರಾಳ ಆರೋಗ್ಯದ ಮುಂದೆ ಎಲ್ಲವೂ ಕ್ಷುಪದಾರ್ಥವಾಗಿ ಕಂಡವು. ಮೂರು ದಿನಗಳವರೆಗೂ ಅವಳ ಸ್ಥಿತಿ ಭಯಂಕರವಾಗಿತ್ತು. ಒಮ್ಮೆ ಅರಿವು, ಒಮ್ಮೆ ಮರೆವು ಈ ಸ್ಥಿತಿಯಲ್ಲಿ ಅವಳು ಹೊಯ್ದಾಡುತ್ತಿದ್ದಳು. ಮನೋರಮೆ ಕೋಣೆಯಲ್ಲಿ ಬಂದರೆ ಉರಿದು ಬೀಳುತ್ತ, ಮುಖವನ್ನು ವಿಕಾರ ಮಾಡುವಳು. ಈ ಸ್ಥಿತಿಯನ್ನು ಕಂಡು ಅವಳು ಅಲ್ಲಿ ಬರುವದನ್ನೇ ನಿಲ್ಲಿಸಬೇಕಾಯಿತು. ಕಿರಣ ಬಾಯಿಂದ ಕೆಲ ಮಾತುಗಳನ್ನು ಕೇಳಿದಾಗ ಅವಳು ಹೌಹಾರಿದ್ದಳು. ತಾರಾ ಈ ಭಾವ ಬೆಳೆ

ಯಿಸಿಕೊಂಡದ್ದು. ವಿಧಿ ವಿಲಾಸವೆಂದೇ ಬಗೆದಳು. ಅವಳ ಆರೋಗ್ಯ ಸುಧಾರಿಸಿದರೆ ಎಲ್ಲವನ್ನು ಕೇಳಿಕೊಳ್ಳಬಹುದೆಂದು ಭಾವಿಸಿ ಆ ವುಟ್ಟಿಗೆ ಸುಮ್ಮನಾದರೂ ಅವಳ ಹೃದಯ ಕತಕತನೆ ಕುದಿಯುತ್ತಿತ್ತು.

ಇತ್ತ ಮನೆಯಲ್ಲಿ ವಿಶ್ವಾಸನ ಪರಸ್ಥಿತಿ ತೀರಾ ಗಂಭಿರವಾಗಿತ್ತು. ಆ ದಿನ ರಾತ್ರಿ ತಾರಾ– "ನಾನು ತಪ್ಪುಮಾಡಿದೆ....ನಾನು ಪಾಪಿ!.... ಮನೋರಮೆ ನನಗೆ ಮೋಸ ಮಾಡಿದಳು.....ಕಿರಣ ದೊಡ್ಡಪ್ಪನಿಗೆ ಪತ್ರ ಹಾಕು....ಅಯ್ಯೋ ಮನೋರಮೆ ಬಂದಳು....!! ಎಂದು ಚಿಟ್ಟನೇ ಚೀರಿದ ಸಂದರ್ಭ ನೆನೆದಾಗ ಅವನು ನಾಡಿಯಲ್ಲಿಯ ಶಕ್ತಿಯೇ ಹೋಗಿಬಿಟ್ಟಿತು. ಅವನ ಯಾಂತ್ರಿಕವಾಗಿ ಪತ್ನಿಯ ಶೂಶ್ರೂಷೆ ಮಾಡ ತೊಡಗಿದ. ಮೂರು ತಿಂಗಳ ಬಸಿರಿಯಾದ ಅವಳು ಇಂತಹ ಆಘಾತ ವನ್ನು ಸಹಿಸಿ ಹೇಗೆ ಪಾರಾಗುವಳೆಂದು ಅವನಿಗೊಂದು ಸಮಸ್ಯೆಯೇ ಆಯಿತು. ಹುಚ್ಚನಂತೆ ಅವನು ತಾರಾನ ಕಡೆಗೊಮ್ಮೆ, ಮಕ್ಕಳ ಕಡೆಗೊಮ್ಮೆ ನೋಡುವದೇ ಅವನ ದೈನಂದಿನ ಕೆಲಸವಾಯಿತು.

ನಾಲ್ಕನೆಯ ದಿನ ತಾರಾ ಎದ್ದು ಕುಳಿತಳು. ಮಕ್ಕಳನ್ನು ಕರೆದು ಮುದ್ದಾಡಿದಳು. ಪತಿಯನ್ನು ಹತ್ತಿರ ಕುಳ್ಳಿರ ಹೇಳಿ. ನನ್ನಿಂದ ನಿಮಗೆ ಬಹಳ ತೊಂದರೆಯಾಯಿತು. ಎಷ್ಟು ಸೊರಗಿದ್ದೀರಿ...." ಎಂದು ಹನಿದುಂಬಿದಳು.

"ನೀನು ಎದ್ದು ಕುಳಿತೆಯಲ್ಲ ಅದೇ ನನ್ನ ಆರೋಗ್ಯ ಕುಂಬಿಸು ವದು ಬಿಡು. ಪಾಪ! ಮಕ್ಕಳೆಲ್ಲ ಒಂದೇ ಸವನೆ ಒದ್ದಾಡುತ್ತಿದ್ದವು." ಎಂದು ವಿಶ್ವಾಸ ಮಕ್ಕಳ ಮೈದಡವಿದ.

"ಹುಚ್ಚಮ್ಮಗಳು! ನನಗೇನಾಗುತ್ತಿತ್ತು. ಎಂದು ತಾರಾ ಮಕ್ಕಳನ್ನು ಮತ್ತೆ ಮುದ್ದಿಸಿದಳು. ಅವಳಿಗೆ ಆಕ್ಷಣ ಯಾವ ವಿಚಾರ ಬಂದಿತೊ- "ಇಂದು ಸಂಜೆ ಗಾಡಿ ಬರುವದಷ್ಟೆ?" ಎಂದು ಕೇಳಿದಳು.

"ಅದಕ್ಕಾಗಿ ಚಿಂತಿಸಬೇಡ ತಾರಾ. ನಿನ್ನ ಆರೋಗ್ಯ ಸುಧಾರಿಸಲಿ ಇಂದೇ ಅಣ್ಣನಿಗೆ ಪತ್ರ ಬರೆಯುತ್ತೇನೆ. ಆಯಿತಿಲ್ಲೊ?"

ತಾರಾನ ಮೊಗದಲ್ಲಿ ಮಂದಸ್ಮಿತ ಮಿಂಚಿತು. ಅವಳು ಕೃತಜ್ಞತಾ ಪೂರ್ಣವಾಗಿ ಗಂಡನನ್ನು ನೋಡಿ ಕಿರಣನಿಗೆ- "ನಿನ್ನ ಮನೊಮಾವಿ ಇಲ್ಲಿ ಬಂದಿದ್ದಳೇನೊ?"

ಈ ಪ್ರಶ್ನೆ ಅನಿರೀಕ್ಷಿತವಾಗಿ ಬಂದಿದ್ದರಿಂದ ಅವನಿಗೆ ಬಹಳ ಗಡಿ ಬಿಡಿಯಾಯಿತು. ಕಿರಣ ಏನು ಹೇಳುವನೋ ಎಂದು ಕಾತರಿಸಿದ.

"ಆವತ್ತ ಬಂದಾಗ ನೀ ಮನೊಮಾಮಿನ್ನ ಬೈದುಬಿಟ್ಟಿ. ಅವಳು ಅಳಕೋತ ಮನೀಗೆ ಹೋದಳು-ಅವ್ವಾ."

"ಹಂಗಾರ ಅವಳು ಇಲ್ಲೆ ಬಂದೇ ಇಲ್ಲ!"

"ನಾ ಏನ ಸುಳ್ಳ ಹೇಳತೀನೇನು? ಮುಂಜಾನೆ ಸಂಜೀನಾಗ ಬರೇ ಅಳಕೋತ ಕೂತಾಳ. ನಿನ್ನೆ ನನಗ ಉಂಡಿಕೊಟ್ಟು- ನಿಮ್ಮ ಅವ್ವಗ ಹೆಂಗ ಅದನೊ ಬಾಳಾ. ದೇವರ ಮ್ಯಾಲೆ ಆಣಿ ಇಟ್ಟ ಹೇಳತೀನಿ- ನಿಮ್ಮವ್ವನ ಭಂಗಾರದ ಮ್ಯಾಲೆ ನನಗೆ ಯಾವ ಆಶಾನೂ ಇಲ್ಲ. ಆ ಭಂಗಾರ ಅವಳದು. ಅದು ನನ್ನ ಅಣ್ಣಾ ಅಂತ ಏನೇನೋ ಹೇಳಿದ ಳವಾ. ನಿನ್ನ ಭಂಗಾರ ಮನೊಮಾಮಿಗೆ ಬೇಕಾಗಿಲ್ಲ ಅವ್ವ-ನೀ ಸುಳ್ಳೆ ಅವಳನ್ನ ಬೈತೀದಿ" ಎಂದ ಕಿರಣ.

ವಿಶ್ವಾಸನ ಕಣ್ಣು ಹನಿಯಾಡಿತು. ತಾರಾ ಅದನ್ನು ಕಂಡು ತನ್ನ ಹೃದಯದಿಂದ ಒಂದು ನಿಟ್ಟುಸಿರನ್ನು ಹೊರಹಾಕಿದಳು. ಆ ಹೊರಬಿದ್ದ ಉಸಿರಿನಿಂದ ಅವಳ ಎದೆಯೂ ಹಗುರಾಯಿತೇನೊ!- "ಹಂಗಾರ ನನ್ನ ಭಂಗಾರ ಅವಳಿಗೆ ಬೇಡಪಾ" ಎಂದು ಗಂಡನನ್ನು ತುಂಟಕಣ್ಣುಗಳಿಂದ ನೋಡಿದಳು.

"ಆಕೇನು ಸುಟ್ಟ್ಯಾಳು ಬಿಡು ನಿನ್ನ ಭಂಗಾರ. ಆಕಿಗೇನು ಭಂಗಾರ ಕಡಿಮಿ ಅದ. ನಿನ್ನ ಭಂಗಾರ ನಿನ್ನ ಕೊಳ್ಳಾಗ ಕಟಿಗೋ. ನೀ ಸುಮಸುಮ್ನ ಆಕಿನ್ನ ಬೈಯಬ್ಯಾಡ ನೋಡು" ಮಗನ ಮಾತಿಗೆ ವಿಶ್ವಾಸ ತೊಳ್ಳನೆ ನಕ್ಕ. ಈ ಬಂಗಾರದ ಮಾತು ತಂದೆಯಲ್ಲಿ ನಗೆ ಎಬ್ಬಿಸಿದ್ದು

ಕಿರಣನಿಗೆ ಸೋಜಿಗವಾಗಿ ಕಂಡರೂ ಅನೇಕ ದಿನಗಳಿಂದ ಆ ನಗೆಯನ್ನು ಕಾಣದ ಅವನಿಗೆ ಬಹಳ ಸಂಭ್ರಮವೆನ್ನಿಸಿತು. ಅವನೂ ಸುಮ್ಮಸುಮ್ಮನೆ ತನಗೆ ಎಲ್ಲವೂ ತಿಳಿದವನ ಹಾಗೆ ನಗಹತ್ತಿದ. ಉಷಾ ತಾಯಿಯ ಹತ್ತಿರ ಕುಳಿತವಳು ಒಮ್ಮೆಲೆ- "ಅವ್ವಾ—ಅವಾ ನಗತಾನ್ಯಾಕ?" ಎಂದಳು.

"ಅವನಿಗೆ ಹುಚ್ಚು ಹಿಡಿದಿದೆ."

"ಚಿಗಪ್ಪಗ?"

ತಾರಾ ಉಷಾನನ್ನು ಅಪ್ಪಿಕೊಂಡು ಲಟಲಟ ಮುದ್ದುಕೊಟ್ಟಳು.

೧೫

ರಾತ್ರಿಯ ಸಮಯ ಮೀರಿ ಹೋದರೂ ಮನೋರಮೆಗೆ ಇನ್ನೂ ಮಲಗುವ ವಿಚಾರವೇ ಇಲ್ಲ. ಅಪವಾದ ಶಲ್ಯದಿಂದ ಗಾಯ ಗೊಂಡ ಹೃದಯದಲ್ಲಿ ವೇದನೆಯ ಮುಳ್ಳು ಕಟುಕುತ್ತಿರುವಾಗ ಅವಳಿಗೆ ನಿದ್ರೆಯಾದರೂ ಹೇಗೆ ಬಂದೀತು? ಆ ದಿನ ನುಡಿದ ಮಾತುಗಳು ಭಯಂಕರವಾಗಿದ್ದವು. ಅವಳು ಹೊರಿಸಿದ ಅಪವಾದ ಸಹನಾತೀತವಾ ಗಿತ್ತು. ತಾರಾನ ಮಾತುಗಳೆಲ್ಲ ತಳಬುಡವಿಲ್ಲದವೆಂದು ಮನೋರಮೆಗೆ ಅರಿವಿದ್ದರೂ ಅವಳಿಗೆ ಬಡಿದ ಸಂಶಯ ಪಿಶಾಚಿ ಭಯಂಕರವಾಗಿತ್ತು. ಅದರ ಪರಿಣಾಮದಿಂದುಂಟಾದ ಅನಾಹುತವನ್ನು ಅವಳಾಗಲೇ ಪ್ರತ್ಯಕ್ಷ ವಾಗಿ ಕಂಡುಕೊಂಡಿದ್ದಳು. ಅವಳ ಹೃದಯದಲ್ಲಿ ತುಂಬಿದ ವಿಷ ಹೊರಚೆಲ್ಲುತ್ತಲಿತ್ತು. ಈ ವಿಷದ ಮೂಲವನ್ನು ಪರಿಶೋಧಿಸಿ ಅವಳಿಗೆ ಮನಗಾಣುವಂತೆ ಮಾತನಾಡಬೇಕೆಂದರೆ ಅವಳು ಮಾತನಾಡುವ ಪರ ಸ್ಥಿತಿಯಲ್ಲಿಯೇ ಇರಲಿಲ್ಲ. ಮನೋರಮೆಯನ್ನು ಕಂಡಾಗ ಅವಳು ವಿಕಾರವಾಗಿ ಕೂಗಿ ಉರಿದು ಬೀಳುತ್ತಿದ್ದಳು. ಈಗ ನಾಲ್ಕು ದಿನಗಳಿಂದ ಮನೋರಮೆಗೆ ವಿಚಾರ ಮಾಡುತ್ತಿರುವಂತೆ ತನ್ನ ಸಮಸ್ಯೆ ಪೂರಾ ಗಡಚಾಗಿ ತೋರಿತು; ಅನ್ನ ರುಚಿಸದಾಯಿತು; ನಿದ್ರೆ ಹಾರಿ ಹೋಯಿತು. ತನ್ನಿಂದಾಗಿ ವಿಶ್ವಾಸನಂತಹ ಕಾವ್ಯ ಜೀವಿಗೆ ಪರಿತಾಪ ಉಂಟಾದದ್ದು ದುರ್ದೈವವೆಂದೇ ಬಗೆದಳು.— "ನಾನೇನು ಮಾಡಬೇಕು? ನನ್ನಲ್ಲಿ ಯಾವ

ಅಪರಾಧವಿದೆ? ನಾನು ಯೋಚಿಸಿದುದೇನು—ಈಗ ನಡೆಯಿತೇನು? ನನ್ನ ಜೀವನ ಸಂಸ್ಕಾರಕ್ಕಾಗಿ, ನನ್ನ ಪತಿಯ ಮಾರ್ಗದರ್ಶನಕ್ಕಾಗಿ ನಾನು ಬೇಡಿ ಬಯಸಿದುದೇನು? ಈಗ ಅವೆಲ್ಲ ಹುಳಿಯಾಗಿ ಅವರ ಬಾಳ ಹೊಳೆಯೇ ಕಲಕಿ ಹೋಗುವದು ಎಂತಹ ಅನಾಹುತ? ಇದಕ್ಕೆ ನಾನು ಹೊಣೆಯಾಗಬೇಕೆ?" ಮನೋರಮೆ ಒಂದು ನಿಟ್ಟುಸಿರು ಬಿಟ್ಟು ಮುದುಡಿ ಮುದುಡಿಯಾದ ಹಾಸಿಗೆಯ ಮೇಲೆ ಸುಮ್ಮನೆ ಹೊರಳಾಡಿದಳು. ಮತ್ತೆ ಎದ್ದು ಕುಳಿತಳು. ಅವಳಿಗೆ ತನ್ನ ಜೀವನದ ಹೊಸ ಕಾಲವಲ್ಲಿ ತೇಲಿ ಬಂದ ಚಿತ್ರವೊಂದು ಸುಳಿದು ಬಂದಿತು. ಅದನ್ನೇ ಮೆಲುಕು ಹಾಕ ಲಾರಂಭಿಸಿದಳು. ಬಹಳ ದಿನಗಳ ಹಿಂದೆ ಮನೋರಮೆಯ ತಂದೆ ಅವಳ ತಾಯಿಯೊಡನೆ ಹೇಳಿದ ಮಾತು— "ಮನೋರಮೆಗೆ ಯೋಗ್ಯ ವರ ವಿಶ್ವಾಸ. ಹುಡುಗ ಚನ್ನಾಗಿದ್ದಾನೆ. ಒಳ್ಳೆಯ ಬರಹಗಾರನಾಗುವ ಹಾಗೆ ಕಾಣುತ್ತದೆ. ಈಗಾಗಲೆ ಅವನ ಕೀರ್ತಿ ಬೆಳೆದಿದೆ. ನಮಗಾ ದರೂ ಮನೋರಮೆಯನ್ನು ಬಿಟ್ಟು ಯಾರಿದ್ದಾರೆ? ವಿಶ್ವಾಸನನ್ನೇ ಮನೆಯ ಅಳಿಯನನ್ನಾಗಿ ಮಾಡಿಟ್ಟುಕೊಂಡರಾಯಿತು.— ಬಂಗಾರಕ್ಕೆ ಕುಂದಣ ವಿಟ್ಟಹಾಗಾಗುತ್ತದೆ."

"ಹಾಗಾದರೆ ನಿಶ್ಚಯ ಮಾಡಿಬಿಡಿರಿ."

"ನಿಶ್ಚಯದ ಮಾತೇನು? ಅಚ್ಯುತರಾಯರೊಡನೆ ಎಲ್ಲವನ್ನೂ ಮಾತಾಡಿ ಮುಗಿಸಿದ್ದೇನೆ. ವಿಶ್ವಾಸ ಮನೋರಮೆಯ ಗಂಡನಾಗುವದು ನಿಶ್ಚಯ."

"ಮನೋರಮೆಗೂ ಓದುವ ಹುಚ್ಚು. ಗಂಡ ಬರೆದ ಪುಸ್ತಕಗಳನ್ನೇ ಓದಲಿ. ತಾಯಿ ಸಂತೋಷದಿಂದ ನಕ್ಕು ನುಡಿದಳು. ಅವಳ ನಗೆಯೊ ಡನೆ ತಂದೆ ತಮ್ಮ ನಗೆಯನ್ನು ಬೆರಸಿ.— "ಓಹೋ! ಬೇಕಾದಷ್ಟು ಓದಲಿ" ಎಂದರು.

ಕೋಣೆಯಲ್ಲಿ ಕುಳಿತು ಈ ಮಾತುಗಳನ್ನು ಕೇಳಿದಾಗ ಅವಳ ಹೃದಯ ಸಂತಸದಿಂದ ತುಂಬಿತು. ವಿಶ್ವಾಸನನ್ನು ಪತಿಯಾಗಿ ಸ್ವೀಕರಿಸಿದ

ಅನೇಕ ಕನಸುಗಳನ್ನು ಕಂಡಳು. ಆದರೆ....ಈ ಚಿತ್ರ ಈ ದಿನ ಮತ್ತೆ ತೇಲಿಬಂದಾಗ ಅವಳು ದಿಗ್ಗನೆ ಎದ್ದಳು. ಅತ್ತಿತ್ತ ಎಡೆಯಾಡಿ ಮತ್ತೆ ಹತ್ತಿರವಿರುವ ವಿರಾಮಾಸನದ ಮೇಲೊರಗಿದಳು.– "ನಿಜ, ವಿಶ್ವಾಸನನ್ನು ಪತಿಯೆಂದು ಸ್ವೀಕರಿಸಿ ಅನೇಕ ಕನಸು ಕಂಡಿದ್ದು ನಿಜ. ಅವನು ನನ್ನ ಸ್ವಾಮಿಯಾಗಿದ್ದರೆ ನನ್ನ ಬಾಳಿನ ರೀತಿಯೇ ಬೇರೆಯಾಗಿರುತ್ತಿತ್ತು. ಆದರಿಂದು ನನ್ನ ಜೀವನ ನನ್ನ ಪತಿಗೆ ಮೀಸಲು...."

"ಆದರೂ ನೀನು ವಿಶ್ವಾಸನನ್ನು ಪ್ರೀತಿಸುತ್ತೀ."

"ಇಲ್ಲೆನ್ನಲಾರೆ."

"ಹಾಗಾದರೆ ತಾರಾನ ಸಂಶಯ ಅರ್ಥಪೂರ್ಣವಾಗಿದೆ."

"ತಪ್ಪು. ನಾನವರನ್ನು ಪ್ರೀತಿಸುವ ರೀತಿಯೇ ಬೇರೆ. ಅವನ ಸುಖಕ್ಕಾಗಿ, ಉಜ್ವಲ ಜೀವನಕ್ಕಾಗಿ...."

"ನಿನಗೆ ಈ ಹಂಬಲವೇಕೆ?"

"ಅದು ನನಗೇ ತಿಳಿಯದು. ಅವನ ದರಿದ್ರ ಜೀವನವನ್ನು ನನ್ನಿಂದ ನೋಡಲಾಗಲಿಲ್ಲ. ಅವನ ಬಾಳ ಸುಖವನ್ನು ಬಯಸಿಯೇ ಅವನನ್ನು ಕರೆಯಿಸಿಕೊಂಡೆ."

"ಆದರೆ ಅವನಿಗೆ ನಿಜವಾದ ಸುಖ ಇಲ್ಲಿಗೆ ಬಂದರೂ ದೊರಕಿದೆಯೆ? ನಿನ್ನ ಪತಿಯ ಸಹವಾಸ ಅವನಿಗೆ ಸಹಾಯವಾಗಲಿಲ್ಲ. ಅವನ ಕಾವ್ಯ ಜೀವನದೊಂದಿಗೆ ಸಂಸಾರ ಜೀವನವೂ ದುರ್ದೆಶೆಯ ಮಾರ್ಗ ಹಿಡಿಯಿತು....ಇದಕ್ಕೆಲ್ಲ ನೀನಲ್ಲದೇ ಮತ್ತಾರು ಹೊಣೆ?...."

"ಹೀಗಾಗಬಹುದೆಂದು ನಾನು ಎಣಿಸಿದ್ದೆನೆ?"

"ಈಗಾದರೂ ಏನಾಯಿತು? ನಿನ್ನ ಪ್ರೀತಿ ಸಾರ್ಥಕವಾಗಬೇಕಾದರೆ ಆತನನ್ನು ನಿನ್ನ ಪತಿಯ ಸಹವಾಸದಿಂದ ದೂರ ಕಳಿಸು. ಅವನು ಸುಖವಾಗಿ ಬಾಳಿಯಾನು." ಮನೋರಮೆಯ ಕಣ್ಣುಗಳಿಂದ ಧಾರೆ ಧಾರೆಯಾಗಿ ನೀರು ಹರಿಯುತ್ತಿದ್ದವು. ಅವಳು ಒಂದೇ ಸವನೆ ಶೂನ್ಯ ದೃಷ್ಟಿಯಿಂದ ನೋಡುತ್ತಲಿದ್ದಳು. ಅವಳ ದೃಷ್ಟಿ ಪಥದೆದುರು ಆ ದಿನ

ಹೂವಿನ ಹಳ್ಳಿಯಲ್ಲಿ ವಿಶ್ವಾಸ ಮಾಡಿದ ಕಾವ್ಯ ಗಾಯನದ ಸಂದರ್ಭ ಫಕ್ಕನೆ ಸುಳಿಯಿತು. ಅವನ ಗಂಭೀರ ಧ್ವನಿ ಕಿವಿಯಲ್ಲಿ ಗುಣುಗುಣಿಸಿತು. ಆವಳೊಮ್ಮೆಲೇ ತನ್ನಲ್ಲಿಯೇ- "ತಾರಾ ಮೂಢಳಂತೆ ನನ್ನ ಮೇಲೆ ಉರಿದು ಬೀಳಲಿ. ನಾನು ಆವಳಿಗಾಗಿ ಅಲ್ಲದಿದ್ದರೂ ನನ್ನ ಜೀವನ ಸಾಫಲ್ಯಕ್ಕಾಗಿ ವಿಶ್ವಾಸನನ್ನು ಹಾಲಹಳ್ಳಿಯಿಂದ....ಹೌದು....ಈ ಜೊಂಜಾಟದಲ್ಲಿ ಅವನು ಕಮರಿ ಹೋಗುವದು ಬೇಡ....ನನ್ನ ಜೀವನ ನನಗಿದೆ... ಅದು ನನ್ನ ಪೂರ್ವ ಜನ್ಮದ ಗಂಟು....ನನಗಾಗಿ, ನನ್ನ ಸ್ವಾರ್ಥಕ್ಕಾಗಿ ವಿಶ್ವಾಸ ಇಲ್ಲಿರುವದೇ ಬೇಡ....ಅವರು ಬಂದು ಹೇಳುವದೂ ಬೇಡ. ಕರೆಯಿಸಿಕೊಂಡವಳು ನಾನು....ನಾನೇ ಅವನಿಗೆ ಹೋಗಲು ಅಪ್ಪಣೆ ಕೊಡುತ್ತೇನೆ....ಇದೇ ಸರಿ...."

ಅವಳು ದುಡುದುಡನೆ ಒಳಗಿನ ಕೋಣೆಗೆ ಹೋಗಿ ತನ್ನ ಟ್ರಂಕಿನ ಬಾಗಿಲು ತೆಗೆಯುವ ವೇಳೆಗೆ ಗಡಿಯಾರ ನಾಲ್ಕು ಸಲ 'ಢಣ್' ಎಂದಿತು. ತನ್ನ ಟ್ರಂಕಿನೊಳಗಿಂದ ಒಂದು ಪುಟ್ಟ ಪೆಟ್ಟಿಗೆ ಹೊರದೆಗೆದು ಅದರಲ್ಲಿ ತನ್ನ ತವರು ಮನೆಯ ಆಭರಣಗಳನ್ನೆಲ್ಲ ತುಂಬಿ ತನ್ನಲ್ಲಿದ್ದ ಇದ್ದ ಬಿದ್ದ ಹಣವನ್ನೂ ಅದರಲ್ಲಿ ಸೇರಿಸಿ ಅದರ ಬಾಗಿಲು ಭದ್ರವಾಗಿ ಹಾಕಿ ರೇಶಿಮೆಯ ವಸ್ತ್ರದಿಂದ ಸುತ್ತಿದಳು. ಅವಳಿಗೊಂದು ರೀತಿಯ ಸಮಾಧಾನ ಆಗ ದೊರೆತಿತ್ತು. ಆ ಪೆಟ್ಟಿಗೆ ತೆಗೆದುಕೊಂಡು ನೇರವಾಗಿ ವಿಶ್ವಾಸನ ಮನೆಗೆ ಹೋಗಿ ಅದನ್ನು ಅವನಿಗೆ ಆಗಲೇ ಕೊಟ್ಟು ಬಿಡಬೇಕೆಂದು ನಿಶ್ಚಯಿಸಿದಳು. ಹೊಂಗೆ ಇನ್ನೂ ಕತ್ತಲು ಕವಿದಿತ್ತು. ಬೆಳಕು ಹರಿಯಲೆಂದು ಆವಳು ಕಿಡಕಿಯ ಹತ್ತಿರ ನಿಂತಿದ್ದಳು-ಬೆಳಕಿಗಾಗಿ ಹಂಬಲಿಸುತ್ತ.

ಅದೇ ವೇಳೆಯಲ್ಲಿ ವಿಶ್ವಾಸ ತನ್ನ ಕೋಣೆಯಲ್ಲಿ ತಲೆಯ ಮೇಲೆ ಕೈಹೊತ್ತುಕೊಂಡು ವಿಚಾರಿಸುತ್ತ ಕುಳಿತಿದ್ದ. ನಿದ್ರೆಯ ಅಭಾವನಿಂದ ಅವನ ಕಣ್ಣು ಉಬ್ಬಿಕೊಂಡು ಕೆಂಪಗಾಗಿದ್ದವು. ನಡೆದು ಹೋದ ಘಟನೆಗಳಿಂದಾಗಿ ಅವನ ಹೃದಯ ಅಲ್ಲೋಲ ಕಲ್ಲೋಲವಾಗಿತ್ತು.- "ನಾನು ಏನನ್ನೊ ಸಾಧಿಸಲು ಹೋಗಿ ಏನನ್ನೊ ಪಡೆದುಕೊಂಡೆ. ಜೀವನದ

ಗುರುತರ ಸಮಸ್ಯೆಗಳನ್ನೆದುರಿಸಲಾರದೆ ಕೈಲಾಗದ ಹೇಡಿಯಾಗಿ ಸುಖ ಜೀವನಕ್ಕಾಗಿ ನನ್ನ ಅಂತರ್ಯವನ್ನೇ ತೂರಿಕೊಂಡೆ. ಇಂದು ಈ ಸುಖ ಜೀವನದ ಅಂತರಂಗದಲ್ಲಿ ತುಂಬಿಕೊಂಡ ನನ್ನ ಬಾಳನ್ನೇ ಕಹಿ ಮಾಡುತ್ತಲಿದೆ. ಮಡದಿ, ಮಕ್ಕಳ ಸೌಖ್ಯಕ್ಕಾಗಿ, ಹಿತಕ್ಕಾಗಿ ನಾನು ಅಪ್ಪಿಕೊಂಡ ಬಾಳಿನಲ್ಲಿ ಸೊಗಸಿಲ್ಲವೆಂದರಿತೂ ಅದನ್ನೇ ಮುಂದುವರಿಸಿದೆ. ಕಳ್ಳ ಸಂತೆಯು ಕವಿಯನ್ನಾದೆ. ಕುಡುಕರ ಸಂಘದಲ್ಲಿ ಜೀವನದ ಶುದ್ಧಿಯನ್ನು ತೇಲಿಬಿಟ್ಟೆ. ಇದು ತಪ್ಪೆಂದನ್ನಿಸಿದರೂ ಒಪ್ಪಾಗಿ ಭಾವಿಸಿದೆ. ಇಂದು ಈ ಬಾಳು ಮುಗಿಯಬೇಕು. ನಾನು ಹೊಸ ಮನುಷ್ಯನಾಗಬೇಕು. ಕಾವ್ಯ ಜೀವನ ಹೋಗಲಿ. ಸಂಸಾರ ಜೀವನಕ್ಕಾಗಿಯಾದರೂ ಈ ಜೊಂಜಾಟದಿಂದ ಬಹುದೂರ ಹೋಗಬೇಕು. ಆದರೆ ತಾರಾ ಮನೋರಮೆಯು ವಿಚಾರದಲ್ಲಿ ಏನನ್ನೊ ಭಾವಿಸಿದ್ದಾಳೆ. ಈ ಮಾತು ತಿಳಿಯಾಗದೆ ನಾನು ಹೋಗಲಾರೆ. ಆದರೆ ಅದು ತಿಳಿಯಾಗಬೇಕೆಂತು? ಈಗ ನಾನೊಮ್ಮೆಲೇ ಎದ್ದು ಹೋದರೆ ವೆಂಕಟೇಶನಿಗೆ ಅನ್ಯಾಯವಾಗುತ್ತದೆ. ಅವನು ತನ್ನ ದೃಷ್ಟಿಯಿಂದ ನನ್ನನ್ನು ಪೋಷಿಸಿದ್ದಾನೆ. ಆ ಪೋಷಣೆಯು ಹೊಣೆಯನ್ನು ನಾನರಿಯಬೇಡವೆ? ಆದರೆ ತಾರಾ ಈ ಊರನ್ನು ಬಿಡಲು ಪಟ್ಟು ಹಿಡಿದಿದ್ದಾಳೆ. ಅವಳ ಮಾತು ನಡೆಯದಿದ್ದರೆ ಸಾಗುವಂತಿಲ್ಲ ಹೋದರೆ ಎಲ್ಲವೂ ಅನರ್ಥ.. ನನ್ನ ಮೇಲೆಯೂ ಅವಳು ಅವಿಶ್ವಾಸ ತಳೆದಿದ್ದು ವಿಲಕ್ಷಣವಾಗಿದೆ. ನಾನೇನು ಮಾಡಲಿ? ಒಂದು ತಪ್ಪು ಹೆಜ್ಜೆಗಾಗಿ ನನ್ನ ಜೀವನವೇ ಚರಂಡೆಯ ಮಾರ್ಗದತ್ತ ಸಾಗಿರುವ ದುರ್ದೈವ ನನ್ನ ಪಾಲಿಗೆ ಏಕೆ ಬಂದಿತು? ನನ್ನಲ್ಲಿ ಧೃಡತೆಯಿಲ್ಲ. ಜೀವನದ ಬಗ್ಗೆ ಸ್ಪಷ್ಟ ವಿಚಾರವಿಲ್ಲ. ಅದಕ್ಕಾಗಿಯೇ ಈ ಗೊಂದಲ. ನಾನು ಹಿಂದಿನ ಜೀವನ ಮರೆತು ಮುಂದಿನ ಮಾರ್ಗದಲ್ಲಿ ಮುಳ್ಳುಗಳೇ ಇದ್ದರೂ ಆ ಹಾದಿಯನ್ನೇ ಬಳಸಬೇಕು. ತಾರಾನಿಗೆ ಈ ಜೀವನವೇ ಬೇಕಾಗಿದೆ. ಅವಳಿಗೆ ಬೇಕಾದದ್ದು ನನಗೂ ಬೇಕು. ಆದರೆ....ಆದರೆ...."

ವಿಶ್ವಾಸನ ಕಿವಿಯಲ್ಲಿ ಅಣ್ಣನ ಮಾತು ಗುಡುಗಾಡಿದವು. ಗೋವಿನಪುರದ ಶಿಕ್ಷಕರ ವಿಶ್ವಾಸದ ಮಾತುಗಳು ಅವನನ್ನಣಕಿಸಿದವು. ಆ ದಿನ ಹೊಂದಿನ ಹಳಿಯಲಿ ಕಸಕಾದ ಜನ ಮುಂತು ಮುಗದಾಗಿ ತಪ

ಕವನಗಳನ್ನು ಕೇಳುತ್ತಿರುವ ಅಪೂರ್ವ ದೃಶ್ಯ ಅವನ ಕಣ್ಣು ಮುಂದೆ ಕುಣಿಯಿತು.- “ಹೌದು. ನಾನು ನನ್ನ ಧೈರ್ಯದಿಂದ ಚುತನಾಗಿರುವೆ. ಅದಕ್ಕಾಗಿಯೇ ಈ ಅನರ್ಥ. ಕಾವ್ಯ ಲಕ್ಷ್ಮಿ ಸರಳ ಹೃದಯಗಳ ಕೈವಾರಿಯೆಂಬುದನ್ನರಿತೂ ವಕ್ರಮಾರ್ಗದಿಂದ ಸಾಗಿ ಅವಳನ್ನು ಕಡೆಗೆ ಣಿಸಿದೆ. ಅದರ ಪ್ರತಿಫಲವೇ ಇದು. ನನ್ನ ದಾರಿದ್ರ್ಯವೀಗ ಮೊದಲಿ ಗಿಂತಲೂ ಹೆಚ್ಚಿದೆ. ಅಂದು ಹಣದ ದಾರಿದ್ರ್ಯವಿತ್ತು. ಹೃದಯ ಸಂಪತ್ತು ಮಿಗಿಲಾಗಿತ್ತು. ಇಂದು ಹೃದಯವೂ ಬರಡಾಗಿದೆ. ಜೀವ ನವೂ ಹಡೆಯೆತ್ತಿ ನಿಂತಿದೆ. ಮುಂದೇನು?....ಮುಂದೇನು?....” ಅವನ ಅಂತರಂಗ ಒಂದೇ ಸವನೆ ಚೀರುತ್ತಲಿತ್ತು. ಆ ಮಾತುಗಳು ಆತ್ಮಗತ ವಾಗಿದ್ದರೂ ದನಿ ತುಸು ಎತ್ತರವಾಗಿಯೇ ಬಂದಿತು. ಆ ದನಿಯನ್ನು ಕೇಳಿಯೋ ಎಂಬಂತೆ ತಾರಾ ಕೋಣೆಯಲ್ಲಿ ಕಾಲಿರಿಸಿದಳು.

“ಮುಂದಿನ ಮಾರ್ಗ ಬಹಳ ಸುಲಭವಾಗಿದೆ. ನಾವು ಇಂದೇ ಇಲ್ಲಿಂದ ಗುಡಿಚಾಪಿ ಕಿತ್ತಬೇಕು” ತಾರಾ ನಿರ್ಧಾರದಿಂದ ಹೇಳಿದಳು.

“ವೆಂಕಟೇಶ ಬಾರದ ವಿನಃ ಇದು ಹೇಗೆ ಸಾಧ್ಯವಾದೀತು ಹೇಳು ತಾರಾ.”

“ಯಾಕೆ? ಅವರು ನಿಮ್ಮನ್ನು ಕೊಂಡುಕೊಂಡಿಲ್ಲವಷ್ಟೆ?”

“ಹಾಗೆಂದು ನಾನು ಹೊಣೆಗಾರಿಕೆ ಹಾರಿಸಿಕೊಂಡು ಹೋಗ ಬಹುದೆ? ನೀನು ಸ್ವಲ್ಪ ತಾಳಬೇಕು ತಾರಾ. ಅವನು ಬರಲಿ. ಅವನಿ ಗೆಲ್ಲವನ್ನೂ ಹೇಳಿ ಬಹುದೂರ ಹೋಗೋಣ. ಆಯಿತಿಲ್ಲೊ?”

“ಇದು ಆಗದ ಮಾತು. ನಾವು ಈ ದಿನವೇ ಹೊರಡಬೇಕು,”

“ಇದು ಹೇಗೆ ತಾರಾ? ನಿನ್ನ ವಿವೇಕವೆಲ್ಲಿ ಹೋಯಿತು?”

“ನನ್ನ ವಿವೇಕ ಬುದ್ಧಿ ಎಂದೋ ಮಸಣ ಸೇರಿದೆ. ಹೆಂಡತಿಯು ಮೇಲೆ ಕೈಮಾಡಿದ ಮುಷ್ಕಾಳನ ದಾರಿ ಕಾಯುವವರ ವಿವೇಕ ಬುದ್ಧಿ ಮಾತ್ರ ಇನ್ನೂ ಜಾಗ್ರತವಾಗಿದೆ.”

“ತಾರಾ!....”

"ಅದು ಸಾಲದೆ ಮನೋರಮೆಯು...."

ವಿಶ್ವಾಸ ಸರ್ರನೆ ಎದ್ದು ಅವಳ ಬಾಯ ಮೇಲೆ ಕೈಯಿಟ್ಟು ಗದ ಗದ ನಡುಗುತ್ತ ಹೇಳಿದ.- "ಆ ಮಾತನ್ನು ನೀನು ಆಡಿದರೆ ಪ್ರಾಣ ವನ್ನೇ ಕೊಟ್ಟೇನು. ನನ್ನನ್ನು ಇಷ್ಟು ಕೀಳೆಂದು ತಿಳಿಯುವ ನಿನಗೆ ಹುಚ್ಚೇ ಹಿಡಿದಿದೆ. ಮನೋರಮೆಯ ಗುಣಗಳನ್ನು ಕಾಣದ ನೀನು ಕುರುಡಾಗಿದ್ದೀ. ಆಗಲಿ. ನಿನ್ನ ಮಾತನ್ನೇ ನಡೆಯಿಸುತ್ತೇನೆ" ಎಂದು ನುಡಿದ ವಿಶ್ವಾಸ ಉದ್ವೇಗದಿಂದ- "ಏ ಕಿರಣ, ಹೊರಬೀಳು. ಉಷಾ ಹೊರಬಿದ್ದು ಬಿಡು. ನಿನ್ನ ಗಂಟು ಗದಡಿಗಳನ್ನೆಲ್ಲ ಸರಿಪಡಿಸು ಹೋಗು ತಾರಾ. ಈ ವೇದನೆಯನ್ನು ಚುಚ್ಚಿಸಿಕೊಂಡು ಸಾಯುವದಕ್ಕಿಂತ...." ವಿಶ್ವಾಸ ಪತ್ನಿಯನು ಕೆಕ್ಕರಿಸಿ ನೋಡುತ್ತ ಇನ್ನೂ ಏನೋ ಮಾತ ನಾಡಬೇಕೆಂದು ಯೋಚಿಸುವ ಸಮಯಕ್ಕೆ ತಾರಾ ಒಮ್ಮೆಲೇ ಹೊರಗೆ ದೃಷ್ಟಿ ಬೀರಿದಳು. ಒಂದು ವ್ಯಕ್ತಿ ಅವರೆಡೆಗೆ ಧಾವಿಸಿ ಬರುತ್ತಲಿತ್ತು. ಇನ್ನೂ ಚನ್ನಾಗಿ ಬೆಳಕಾಗದ ಮೂಲಕ ಆ ವ್ಯಕ್ತಿಯ ಮೊಗ ಅಷ್ಟು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ ತೀರ ಸನಿಯಕ್ಕೆ ಬಂದಾಗ ಆ ವ್ಯಕ್ತಿ ಮನೋರಮೆಯೆಂದು ತಾರಾ ತಿಳಿದುಕೊಂಡಳು.- "ಮನೋರಮೆ!" ವಿಶ್ವಾಸ ಕಣ್ಣು ಹಿಗ್ಗಿಸಿ ನೋಡಿದ. ಒಂದೇ ಸವನೆ ಓಡುತ್ತ ಬಂದುದರಿಂದ ಮನೋರಮೆಗೆ ಕೂಡಲೆ ಮಾತನಾಡಲಾಗಲಿಲ್ಲ. ಅವಳು ಉಬ್ಬುಸಬಡುತ್ತ ಕ್ಷಣಕಾಲ ಹಾಗೆ ನಿಂತಳು. ತಾರಾ ಅವಳ ಗಾಬರಿದುಂಬಿದ ಮುಖ ಗನ್ನು ಕಂಡಳು ಏಕೆಂದು ಕೇಳಲಿಲ್ಲ.

ಎಂತಹ ನಸುಕಿನಲ್ಲಿ ಬಂದಿರಿ ಮನೋರಮಾಬಾಯಿ. ಏನು ಸಮಾಚಾರ? ಹೀಗೇಕೆ ನಡುಗುತ್ತಿದ್ದೀರಿ? ಏ ತಾರಾ. ಅವರನ್ನು ಆ ಆಸನದ ಮೇಲೆ ಕುಳಿರಿಸು. ಹೇಳಿರಿ. ಏನು ಸಮಾಚಾರ?"

ತಾರಾ ಗಂಡನನ್ನು ತೀಕ್ಷ್ಣವಾಗಿ ನೋಡಿ- "ಇದರ ಅರ್ಥವೇನು ಮನ್ನಿಸ್ಕಿ? ಹೀಗೆ ಕುಳಿತುಕೋ" ಎಂದು ಅವಳ ಕೈಹಿಡಿದು ಕುಳ್ಳಿರಿಸಿದಳು.

"ಏನೋ ಘಾತವಾದಂತೆ ತೋರುತ್ತದೆ ವಿಶ್ವಾಸರಾವ್. ಆ ರಜಾಕ ಹೇಳಿದ. ಜೀವಣ್ಣ ಎಲ್ಲವನ್ನೂ ಮೋಸಮಾಡಿದ್ದಾನಂತೆ."

"ಆ! ಏನೆಂದು ಹೇಳಿದ ರಜಾಕ್?" ವಿಶ್ವಾಸ ಆತುರದಿಂದ ಕೇಳಿದ. ಆ ವೇಳೆಗೆ ಮುಂಜಾವಿನ ನೀರವತೆಯನ್ನು ಭೇದಿಸುವಂತೆ ಮೋಟಾರು ಹಾರ್ನುಗಳ ಸಪ್ಪಳವಾಗಿ ಮನೆಯ ಹತ್ತಿರವೇ ಧೂಳಿದ್ದಿತು.– "ಅಯ್ಯೋ! ಬಂದೇ ಬಿಟ್ಟರು" ಎಂದು ಮನೋರಮೆ ನಡುಗಿದಳು.

ಈ ಗದ್ದಲವೇನೆಂದು ವಿಶ್ವಾಸ ತಿಳಿದುಕೊಳ್ಳುವ ಮೊದಲೇ ಎರಡು ಕಾರುಗಳು, ಒಂದು ಜಾಳಿಗೆಯ ಮೋಟಾರು ಮನೆಯ ಬಾಗಿಲಿಗೇ ನಿಂತವು. ಜಾಳಿಗೆಯ ಮೋಟಾರಿನಿಂದ ಹದಿನೈದು, ಇಪ್ಪತ್ತು ಸಶಸ್ತ್ರ ಪೋಲೀಸರು ಕೆಳಗಿಳಿದು ಸಾಲಾಗಿ ನಿಂತರು. ಕಾರುಗಳೊಳಗಿಂದ ಸುಸಜ್ಜಿತ ಸಮವಸ್ತ್ರ ಧಾರಿಗಳಾದ ಪೋಲೀಸ ಅಧಿಕಾರಿಗಳು ಕೆಳಗಿಳಿದರು. ಅವರೊಡನೆ ಕೊನೆಗೆ ಇಳಿದ ವ್ಯಕ್ತಿಯೇ ಜೀವಣ್ಣ. ವಿಶ್ವಾಸನಿಗೆ ಗಂಡಾಂತರದ ಅರಿವಾಯಿತು. ಜೀವಣ್ಣನನ್ನು ನೋಡಿದ ಬಳಿಕಂತೂ ಅದು ಇನ್ನೂ ಸ್ಪಷ್ಟವಾಯಿತು. ಬಂದ ಅಧಿಕಾರಿಗಳಲ್ಲಿ ಅವನ ಪರಿಚಯದವರಾರೂ ಇರಲಿಲ್ಲವಾಗಿ ಅವನಿಗೆ ಏನು ಮಾಡಬೇಕೊ ತಿಳಿಯದಾಯಿತು. ಅವನು ದಿಙ್ಮೂಢನಾಗಿ ನಿಂತುಬಿಟ್ಟ.

ಅಧಿಕಾರಿಯ ಆಜ್ಞೆಯಮೇರೆಗೆ ಕೆಲವು ಪೋಲೀಸರು ಜೀವಣ್ಣನನ್ನು ಮುಂದೆ ಮಾಡಿಕೊಂಡು ಹಿಂದಿನ ಕೋಣೆಯೆಡೆಗೆ ನಡೆದರು. ಕೆಲವರು ಮನೆಯ ಸುತ್ತು ಕಾವಲು ನಿಂತು ದಕ್ಷರಾದರು. ಅಧಿಕಾರಿ ನೇರವಾಗಿ ವಿಶ್ವಾಸನ ಸನಿಯಕ್ಕೆ ಬಂದು ಗಡಸು ಧ್ವನಿಯಲ್ಲಿ– "ನಮಗೆ ಈ ಮನೆ ಶೋಧಿಸಬೇಕಾಗಿದೆ." ಎಂದು ಹೇಳಿ ಬೇರೆ ಅಧಿಕಾರಿಗಳನ್ನು ಒಳಗೆ ಕರೆದ. ಅವರೆಲ್ಲ ವಿಶ್ವಾಸನ ಉತ್ತರವನ್ನು ನಿರೀಕ್ಷಿಸದೆ ಒಳ ಹೊಕ್ಕು ಅತ್ತಲಿತ್ತ ಹುಡುಕಾಡಲಾರಂಭಿಸಿದರು. ಹೀಗೆ ಹದಿನೈದು ಇಪ್ಪತು ನಿಮಿಷ ಕಳೆದ ಮೇಲೆ ಅವರು ಹೊರ ಬಂದಾಗ ಅವರ ಮುಖದ ಮೇಲೆ ನಿರಾಶೆ ಮೂಡಿತ್ತು. ಆ ವೇಳೆಗೆ ಕೋಣೆಯೆಡೆಗೆ ಹೋದ ಪೋಲೀಸರು ಅಲ್ಲಿಯ ಸಾಮಾನುಗಳನ್ನೆಲ್ಲ ಪರೀಕ್ಷಿಸಿ ಕೋಣೆಗೆ ಮೋಹರು

ಮಾಡಿ ಬಂದಿರುವದಾಗಿ ವರದಿ ಒಪ್ಪಿಸಿದರು. ಹಿರಿಯ ಅಧಿಕಾರಿಗೆ ತುಸು ಸಮಾಧಾನವಾದಂತೆ ತೋರಿದರೂ ಸಂಪೂರ್ಣ ತೃಪ್ತಿ ಏನೂ ಆಗಲಿಲ್ಲ. ಅವನು ದರ್ಪದಿಂದ ಜೀವಣ್ಣಾನನ್ನುದ್ದೇಶಿಸಿ- "ಸೆರೆಯ ಬಾಟಲಿಗಳೆಲ್ಲಿ ಜೀವಣ್ಣಾ?" ಎಂದು ಗದ್ದರಿಸಿದ. ಆ ಗದ್ದರಿಕೆ ಕೇಳಿ ನಡುಗಿದ ಚಿಕ್ಕ ಅಧಿಕಾರಿಗಳು- "ಮನೆಯಲ್ಲೆಲ್ಲ ಶೋಧಿಸಿಯಾಯಿತು. ಅವುಗಳ ಗುರುತೇ ಇಲ್ಲ" ಎಂದು ನಿರಾಶೆಯಿಂದ ಹೇಳಿದರು.- "ಸುಳ್ಳು ಹೇಳಿ ಪಾರಾಗುವದು ಬಹಳ ಕಠಿಣ ಜೀವಣ್ಣಾ. ಎಚ್ಚರವಿರಲಿ" ಎಂದು ನುಡಿದ ಅಧಿಕಾರಿಯ ದನಿಯನ್ನು ಕೇಳಿ ಜೀವಣ್ಣಾ ಖೊಳ್ಳನೆ ನಕ್ಕ.- "ಬನ್ನಿರಿ ಸಾಹೇಬರೆ. ನಿಮ್ಮ ಕೈಗೆ ಸಿಗುವ ಹಾಗೆ ಇಡುವ ವಸ್ತುವೆ ಅವು? ಹೀಗೆ ಬನ್ನಿರಿ" ಎಂದು ಜೀವಣ್ಣಾ ವಿಶ್ವಾಸನ ಮಲಗುವ ಕೋಣೆಯತ್ತ ಸಾಗಿದ. ಅದರ ಬಾಗಿಲಿಗೆ ವಿಶ್ವಾಸ ಅಡ್ಡವಾಗಿ ನಿಂತ. ಜೀವಣ್ಣಾ ಅವನನ್ನೊಮ್ಮೆ ತೀಕ್ಷ್ಣವಾಗಿ ನೋಡಿ- "ನನ್ನ ಕಪಾಳ ಇನ್ನೂ ನೋಯುತ್ತದೆ ರಾಯರೆ. ಸುಮ್ಮನೆ ದಾರಿ ಬಿಡಿರಿ" ಎಂದು ಅವನನ್ನು ಸರಿಸಿ ಒಳ ನುಗ್ಗಿದ. ಅವನೊಡನೆ ಅಧಿಕಾರಿಗಳೂ ನುಗ್ಗಿದರು. ಜೀವಣ್ಣಾ ಒಳಗೆ ಹೋದವನೇ ಕಾಟನ್ನು ಎಳೆದು ಸರಿಸಿದ. ಅದರ ಕೆಳಗೆ ಹಾಸಿದ ರತ್ನಗಂಬಳಿ ಓರೆಯಾಗಿ ಸರಿದಾಗ ಅಲ್ಲೊಂದು ನೆಲ ಕಪಾಟು ಕಾಣಿಸಿತು. ಜೀವಣ್ಣಾ ಆಶೆಬುರುಕನಂತೆ ಅದರ ಕೀಲಿಯನ್ನು ಗಪ್ಪನೆ ಹಿಡಿದು ಅಧಿಕಾರಿಗಳಿಗೆ ಅದನ್ನು ಮುರಿಯ ಹೇಳಿದ. ಕ್ಷಣಾರ್ಧದಲ್ಲಿ ಮುಚ್ಚಳ ತೆರೆಯಿತು. ಒಳಗೆ ರಾಸಿರಾಸಿಯಾಗಿ ಒಟ್ಟಿದ ಸೆರೆಯ ಬಾಟಲಿಗಳು ಕಂಗೊಳಿಸಿದವು. ಅಧಿಕಾರಿ ಸಂತೋಷದಿಂದ ಜೀವಣ್ಣಾನ ಬೆನ್ನು ತಟ್ಟಿದ. ಪೋಲೀಸರ ಸಹಾಯದಿಂದ ಎಲ್ಲ ಬಾಟಲಿಗಳನ್ನೂ ಹೊರಗೆ ತಂದು ಪಡಸಾಲೆಯಲ್ಲಿ ಗುಂಪು ಹಾಕಲಾಯಿತು. ಅದರ ಹತ್ತಿರವೇ ಖುರ್ಚಿ ಹಾಕಿಕೊಂಡು ಕುಳಿತು ಅಧಿಕಾರಿ ಸಿಗರೇಟೆಳೆಯುತ್ತ ವಿಶ್ವಾಸನನ್ನು ಕೆಕ್ಕರಿಸಿ ನೋಡಿದ. ಆ ಹೊತ್ತಿಗೆ ಜೀವಣ್ಣಾ ಬಂದು ಅಧಿಕಾರಿಯ ಕಿವಿಯಲ್ಲಿ ಏನೋ ಹೇಳಿ ಹೋದ. ಅಧಿಕಾರಿ ಬರಿಯ ಗೋಣನ್ನು ಮಾತ್ರ ಅಲ್ಲಾಡಿಸಿದ.- "ವಿಶ್ವಾಸರಾಯರೆಂದರೆ ತಾವೇ ಅಲ್ಲವೆ?" ಅಧಿಕಾರಿ ಸಮಾಧಾನದಿಂದ ಕೇಳಿದ.

"ನಿಮಗೆ ಈಗಾಗಲೆ ನನ್ನ ಪರಿಚಯ ಮಾಡಿಕೊಟ್ಟ ಜೀವಣ್ಣನ ಮಾತು ಸರಿಯಾಗಿದೆ. ನಾನೇ ವಿಶ್ವಾಸರಾಯ" ಎಂದು ಅವನು ನುಡಿಯುತ್ತಿರುವಾಗ ಮನೋರಮೆ ತಾರಾನೊಂದಿಗೆ ನಡುಮನೆಯ ಬಾಗಿಲಿಗೆ ಬಂದು ನಿಂತಳು.

"ಸರಿ. ಸರಿ. ನಿಮ್ಮ ಬಗ್ಗೆ ನಾನು ಕೇಳಿದ್ದೇನೆ. ನೀವು ಸಾಹಿತಿಗಳಂತೆ. ಕವಿಗಳಂತೆ. ಒಮ್ಮೆ ಶಿಕ್ಷಕರೂ ಆಗಿದ್ದರಂತೆ...." ಅಧಿಕಾರಿಯ ಮಾತುಗಳಲ್ಲಿ ಹರಿತವಾದ ಚೂರಿಯ ವೇದನೆಯನ್ನೇ ವಿಶ್ವಾಸ ಅನುಭವಿಸುತ್ತಿದ್ದ.– "ನೀವೂ ಕೂಡ ಇಂತಹ ವ್ಯವಹಾರದಲ್ಲಿ ಬೀಳಬೇಕೆ? ನನಗೆ ಗೊತ್ತಿದೆ ಇದರಲ್ಲಿ ನಿಮ್ಮ ಅಂಗವೇ ಇಲ್ಲವೆಂದು. ಆದರೆ....ಆದರೆ...." ಅಧಿಕಾರಿ ಜೋರಿನಿಂದ ಹೊಗೆ ಎಳೆದು ಕೇಳಿದ– "ಈ ಬಾಟಲಿಗಳೆಲ್ಲ ಸಾಹುಕಾರ ವೆಂಕಟೇಶರಾಯರಿಗೆ ಸಂಬಂಧಿಸಿದವೆಂದೂ, ಈಗಾಗಲೇ ಆ ಕೋಣೆಯಲ್ಲಿರುವ ಸಾಮಾನುಗಳೆಲ್ಲ ಅವರ ಮಾಲಕಿಯವೆಂದೂ ನೀವು ಸಾಕ್ಷಿ ನುಡಿಯುವಿರೆಂದು ನಾನು ನಂಬುತ್ತೇನೆ. ಇದ್ದ ಮಾತನ್ನು ಇದ್ದಂತೆ ಹೇಳುವಲ್ಲಿ ಯಾವ ಅನ್ಯಾಯವೂ ಇಲ್ಲ. ನೀವು ಒಪ್ಪುವಿರಷ್ಟೆ ವಿಶ್ವಾಸರಾವ್?"

ವಿಶ್ವಾಸನೊಮ್ಮೆ ಸುತ್ತಲೂ ನೋಡಿದ. ಬಾಗಿಲಲ್ಲಿ ನಿಂತ ಮನೋರಮೆಯ ಕಣ್ಣಂಚಿನಲ್ಲಿ ನೀರು ತುಳುಕುತ್ತಿದ್ದವು. ತಾರಾ ನಡುಗುತ್ತಿದ್ದಳು.– "ನಿಮ್ಮ ಮಾತುಗಳೆಲ್ಲ ನನಗರ್ಥವಾಗುವದಿಲ್ಲ ಸಾಹೇಬರೆ. ಇದು ನನ್ನ ಮನೆ. ನಿಮಗೆ ಸಿಕ್ಕ ಸಾಮಾನುಗಳೆಲ್ಲ ನನ್ನ ಮನೆಯಲ್ಲಿಯೆ."

"ಅದೇನೊ ನಿಜ. ಆದರೆ ಇದು ನಿಮಗಾಗಿ ವೆಂಕಟೇಶ ಸಾಹುಕಾರರು ಕೊಡಿಸಿದ ಬಾಡಿಗೆಯ ಮನೆ. ಈ ಸಾಮಾನುಗಳೆಲ್ಲ ಅವರವು, ಅಲ್ಲವೆ?"

"ನಿಮ್ಮ ಗ್ರಹಿಕೆ ತಪ್ಪಾಗಿದೆ. ನನ್ನ ಮನೆಯಲ್ಲಿ ಇನ್ನೊಬ್ಬರ ಸಾಮಾನು ಇರುವದೆಂದರೇನು? ಇದೆಲ್ಲ ನನ್ನ ಸಾಮಾನುಗಳು. ಈ

ವ್ಯವಹಾರ ನನಗೆ ಸಂಬಂಧಿಸಿದ್ದು. ವೆಂಕಟೇಶರಾಯರಿಗೂ ನನಗೂ ಯಾವ ಸಂಬಂಧವೂ ಇಲ್ಲ" ಮನೋರಮೆ ಬಾಗಿಲಲ್ಲಿ ಬಿಕ್ಕಳಿಸಿದಳು.

ಅಧಿಕಾರಿ ನಕ್ಕು ಹೇಳಿದ– "ಈ ಮಾತುಗಳಿಂದ ನಿಮ್ಮ ಮೇಲೆ ನೀವಾಗಿಯೇ ಗಂಡಾಂತರ ತಂದುಕೊಳ್ಳುತ್ತೀರಿ. ಸ್ವಲ್ಪ ಯೋಚಿಸಿ ಹೇಳಿ"

"ನಿಮ್ಮ ಕರ್ತವ್ಯವನ್ನು ನೀವು ಮುಂದುವರಿಸಬೇಕು. ಈ ವ್ಯವಹಾರ ನನಗೆ ಸಂಬಂಧಿಸಿದ್ದೆಂದು ಹತ್ತು ಸಾರೆ ಹೇಳುತ್ತೇನೆ."

ಅಧಿಕಾರಿಗಳು ಒಬ್ಬರ ಮುಖವನ್ನೊಬ್ಬರು ನೋಡಿದರು. ಬೆರಗಾಗಿ ನಿಂತಿದ್ದ ಜೀವಣ್ಣ ಅಸ್ವಸದಿಂದ– "ಈ ರಾಯರು ಸುಳ್ಳು ಹೇಳುತ್ತಾರೆ ಸಾಹೇಬ. ಇವೆಲ್ಲ ಆ ಸಾಹುಕಾರ ವೆಂಕಟೇಶರಾಯರ ಸಾಮಾನುಗಳು" ಎಂದ.

"ನಿಮಗದನ್ನು ತೆಗೆದುಕೊಂಡು ಏನು ಮಾಡುವದಿದೆ? ಸುಮ್ಮನೆ ಪಂಚನಾಮೆ ಮಾಡಿ ನಿಮ್ಮ ಕೆಲಸ ಮಾಡಿರಿ" ಎಂದು ವಿಶ್ವಾಸ ಅಧಿಕಾರಿಗೆ ಹೇಳಿದ.

"ಸರಿ ಹಾಗಾದರೆ. ನೀವು ಬಂಧಿತರಾಗಿದ್ದೀರಿ. ನಮ್ಮೊಡನೆ ಕಚೇರಿಗೆ ನಡೆಯಬೇಕು" ಅಧಿಕಾರಿ ಒಮ್ಮೆಲೆ ಎದ್ದು ನಿಂತ.

"ಒಂದೆರಡು ನಿಮಿಷ ಒಳಗೆ ಹೋಗಿ ಬರಬಹುದೆ?"

"ಆಗಬಹುದು"

ವಿಶ್ವಾಸ ಒಳಗೆ ಬಂದೊಡನೆ ಮನೋರಮೆ ಅವನ ಪಾದಗಳನ್ನು ಹಿಡಿದುಕೊಂಡು ಕಣ್ಣೀರ ಕೋಡಿ ಹರಿಸಿದಳು. ಅವನು ಪಾದಗಳನ್ನು ಹಿಂದೆಳೆದುಕೊಂಡು– "ಇದೇನು ಮನೋರಮಾಬಾಯಿ, ಹುಚ್ಚರ ಹಾಗೆ ಇದನ್ನೇನು ನಡೆಯಿಸಿದ್ದೀರಿ?" ಎಂದಾಗ ಅವನ ಕಂಠ ತುಂಬಿ ಬಂತು.

"ಇದು ಶುದ್ಧ ಅನ್ಯಾಯ–ಅಸತ್ಯ ಅವರಿಗಾಗಿ ನೀವು...."

"ದಯವಿಟ್ಟು ಆ ಮಾತನ್ನಾಡಬೇಡಿರಿ. ಗಂಡಾಂತರ ಯಾರ ಮೇಲೆ ಬಂದರೂ ಅಷ್ಟೆ. ಅವರಿಗಾಗಿ ನಾನಿಷ್ಟು ಮಾಡಿದ್ದು...."

"ಈ ಸುಳ್ಳಿಗಾಗಿ....ನೀವು...."

"ಬರಬಹುದಾದುದನ್ನು ಎದುರಿಸಲು ಸಿದ್ಧನಾಗಿದ್ದೇನೆ."

"ಈ ಅನ್ಯಾಯವನ್ನು ನಾನು ಸಹಿಸಲಾರೆ....ನಾನೀಗಲೇ...."

ವಿಶ್ವಾಸ ಅವಳನ್ನು ಒತ್ತಾಯದಿಂದ ಮಂಚದ ಮೇಲೆ ಕುಳ್ಳಿ ಹೆಂಡತಿಗೆ– "ತಾರಾ, ಪರಸ್ಥಿತಿ ಹೇಗೊ ತಿಳಿಯದು. ನೀನು ಗಾಬ ಯಾಗಬೇಡ. ನಿನ್ನ ಮಾತನ್ನು ನಾನು ನಡೆಯಿಸಿಕೊಡುತ್ತೇನೆ. ನ ಮನಸ್ಸಿನ ಪ್ರತಿಕ್ರಿಯೆಯನ್ನು ನೀನೂಹಿಸಲಾರಿ. ನನ್ನ ನಿರ್ಧಾರ ಮಾತು ನಡೆಯಬೇಕಾದಾಗ ವಿಧಿ ಅಡ್ಡ ಬಂದಿದೆ. ಇದರಿಂದ ನಾ ಪಾರಾಗಬಹುದು. ಒಂದು ವೇಳೆ ಏನೇ ಆದರೂ ನೀನು ನಿ ಆರೋಗ್ಯ ಕಾಯ್ದುಕೊಂಡಿರು. ಮಕ್ಕಳು ಗಾಬರಿಯಾದಾವು. ನನಗೀ ಏನೂ ಹೇಳಲು ತೋಚದು. ಮನೋರಮಾಬಾಯಿ ಇಷ್ಟು ದಿ ನಮ್ಮನ್ನು ಕಾಪಾಡಿದ್ದಾರೆ. ಅವರು ನಿನ್ನ ಅಕ್ಕ....ಅಣ್ಣನಿಗೆ ಪತ ಬರೆಯಿಸು...." ಈ ಮಾತುಗಳನ್ನೆಲ್ಲ ತಾರಾ ಕೇಳುತ್ತಿರಲಿಲ್ಲ. ಅವ ಕಣ್ಣುಗಳೂ ಒದ್ದೆಯಾಗಿರಲಿಲ್ಲ. ಶೂನ್ಯ ದೃಷ್ಟಿಯಿಂದ ಗಂಡನನ್ನು ನೋಡುತ್ತಿದ್ದಳು ಮಾತ್ರ.– "ತಾರಾ!...."

ಮನೋರಮೆಯನ್ನು ತಾರಾ ನೋಡುತ್ತಿದ್ದಳು. "ತಾರಾ....ಆಗಲಿ ಹಾಗಾದರೆ...."

ಹೊತ್ತಾಯಿತೆಂದು ಅಧಿಕಾರಿ ಎಚ್ಚರಿಸಿದ. ಭಯಂಕರವಾದ ಧೂಳವನ್ನೆಬ್ಬಿಸುತ್ತ ಮೋಟಾರುಗಳೆಲ್ಲ ಹಾರ್ನಿನ ಸಪ್ಪಳ ಮಾಡುತ ಮಿಂಚಿನಂತೆ ಹೋಗಿಬಿಟ್ಟವು. ಆ ಸಪ್ಪಳ ನಿಂತಾಗ ತಾರಾ ಒಮ್ಮೆಲೇ ಚೀರಿ– "ಅವರು ಹೋಗಿಯೆ ಬಿಟ್ಟರು....ಹೋಗಿಯೇ ಬಿಟ್ಟರು...." ಎಂದು ದೊಪ್ಪನೆ ನಿಶ್ಚೇಷ್ಟಿತಳಾಗಿ ಕೆಳಗುರುಳಿದಳು. ಮನೋರಮೆ ಸಂಕಟದಿಂದ ಗಡಬಡಿಸಿ ಅವಳ ತಲೆಗೆ ನೀರು ತಟ್ಟಿದಳು. ತಾರಾನ ತಲೆ ಅವಳ ತೊಡೆಯ ಮೇಲೆ ವಿರಾಜಮಾನವಾದಾಗ ಆ ತಲೆಯ ಮೇಲೆ ಮನೋರ ಮೆಯ ಕಣ್ಣೀರ ಹನಿಗಳುದುರಿದವು.– "ತಾರಕ್ಕ....ತಾರಕ್ಕ...."

ತಾರಾ ಮಂದವಾದ ಧ್ವನಿಯಲ್ಲಿ—"ಅವರು ಹೋಗಿಯೇ ಬಿಟ್ಟರು" ಎಂದು ಸೂಕ್ಷ್ಮವಾಗಿ ನುಡಿದು ಮತ್ತೆ ಕಣ್ಣು ಮುಚ್ಚಿದಳು.

೧೬

"ಅವರು ಹೋಗಿಯೇ ಬಿಟ್ಟರು" ಎಂದು ನುಡಿಯುವ ತಾರಾ ಮರುಕ್ಷಣದಲ್ಲಿ—"ಇವರು ಮೋಸ ಮಾಡಿದರು. ಪೇಚಿನಲ್ಲಿ ಸಿಗಿಸಿದರು" ಎಂದು ಚೀರುವಳು. ಮತ್ತೊಮ್ಮೆ ಭಯಂಕರವಾಗಿ ಕೂಗಿ—"ಮನೋರಮೆ ತನ್ನ ಗಂಡನನ್ನುಳಿಸಿಕೊಂಡು ನಮ್ಮವರನ್ನು ಆಹುತಿ ಕೊಟ್ಟಳು. ಅಪ್ಪಯ್ಯಾ ನನಗಾರು ಗತಿ? ಕಿರಣ ಉಷೆಯರನ್ನು ಹೇಗೆ ಸಂತೈಸಲಿ?" ಎಂದು ಮುಳು ಮುಳು ಅಳುವಳು. ಮಗದೊಮ್ಮೆ—"ಇದೆಲ್ಲ ವೆಂಕಟೇಶರಾಯರ ನೀಚತನ. ಅವರದೇ ಈ ಜಾಲ. ಇದಕ್ಕೆ ಅವರ ಹೆಂಡತಿಯೂ ಅನುಕೂಲಳು. ಈ ನೀಚರ ಸಹನಾಶದಲ್ಲಿ ನಾವೇಕೆ ಸಿಕ್ಕೆವು ದೇವರೆ. ಅವರು ನನ್ನ ಮಾತು ಕೇಳಲಿಲ್ಲ. ಅಯ್ಯೋ....ಭಾವನವರಿಗೆ ಏನು ಹೇಳಲಿ? ಅವರು ಮೊದಲೇ ಎಚ್ಚರಿಸಿದ್ದರು" ಎಂದು ಮಲಗಿದಲ್ಲೇ ಸರಸರ ಮಾತನಾಡಿದಳು. ಒಮ್ಮೆ ದಿಗ್ಗನೆ ಏಳಲು ಹವಣಿಸಿ—"ನಾನು ಹೋಗುತ್ತೇನೆ. ಬಹುದೂರ ಹೋಗುತ್ತೇನೆ. ಅವರಿಲ್ಲದ ಮನೆಯಲ್ಲಿ ನಾನು ಅನಾಥೆ" ಎಂದು ಪ್ರಯಾಸದಿಂದ ನುಡಿದು ದೊಪ್ಪನೆ ಬಿದ್ದು ಬಿಡುವಳು. ಈ ಅವಸ್ಥೆ, ಈ ಅಭ್ರಮ ಶುಭ್ರಮ ಒಂದೇ ಸವನೆ ನಡೆದದ್ದರಿಂದ ಮನೋರಮೆ ಗಾಬರಿಯಾಗಿ ಡಾಕ್ಟರರನ್ನು ಕರೆಯ ಕಳಿಸಿದಳು.

"ಆಕಸ್ಮಿಕ ಆಘಾತದ ಪರಿಣಾಮವಿದು ತಾಯಿ. ಇವರಿಗೆ ಸಂಪೂರ್ಣ ವಿಶ್ರಾಂತಿ ಬೇಕು. ನಾನೊಂದು ಇಂಜಕ್ಶನ್ ಮಾಡುತ್ತೇನೆ. ಅವರಿಗೆ ನಿದ್ರೆ ಬರುತ್ತದೆ" ಎಂದು ಉಪಚಾರ ಮಾಡಿ ಡಾಕ್ಟರರು—"ಸ್ವಲ್ಪ ಜಾಗ್ರತೆಯಿಂದಲೇ ಇರಬೇಕು." ಎಂದು ಎಚ್ಚರ ಹೇಳಿ ಹೊರಟು ಹೋದರು. ಆ ಔಷಧದ ಪರಿಣಾಮವಾಗಿ ತಾರಾನಿಗೆ ನಿದ್ರೆ ಬರ ಹತ್ತಿತು. ಇದರಿಂದ ಮನೋರಮೆಗೆ ಅದೆಷ್ಟೋ ಸಮಾಧಾನವಾಗಿ ಅವಳು ಸಂಪೂರ್ಣ ಮಲಗಿದ ಮೇಲೆ ನೀಲವ್ವ ದಾಸಿಯನ್ನು ಕರೆದು—"ನೀನು

ಇಲ್ಲಿಯೇ ಇರು ನೀಲವ್ವ. ನಾನು ಮಕ್ಕಳನ್ನು ಕರೆದುಕೊಂಡು ಮನೆಗೆ ಹೋಗುತ್ತೇನೆ. ಪಾಪ! ಗಾಬರಿಯಾಗಿವೆ" ಎಂದು ಮಕ್ಕಳನ್ನು ಕರೆದು ಕೊಂಡು ಭಾರವಾದ ಹೆಜ್ಜೆ ಹಾಕುತ್ತ ಮನೋರಮೆ ಮನೆಗೆ ನಡೆದಳು. ಮಕ್ಕಳೆರಡೂ ಅವಳ ಕೈಗಳನ್ನು ಹಿಡಿದು ಎರಡೂ ಬದಿಗೆ ಸಾಗಿದ್ದವು. ಇದೀಗ ನಡೆದು ಹೋದ ಘಟನೆ ಅವಳ ಕರುಳನ್ನು ಕೊಯ್ಯುತ್ತಿತ್ತು. ಬುದ್ಧಿಗೆ ಮಂಕುಕವಿದಂತಾಗಿತ್ತು. ವಿಚಾರ ಮೂಢಳಾಗಿ ಅವಳು ಯಂತ್ರದ ಬೊಂಬೆಯಂತೆ ಸಾಗಿದಳು. "ಚಿಗಪ್ಪನನ್ನು ಎಲ್ಲಿ ಕರೆದು ಕೊಂಡು ಹೋದರೆ ಮನೂಮಾಮಿ" ಎಂಬ ಕಿರಣನ ಪ್ರಶ್ನೆಯನ್ನು ಕೇಳಿ ಅವಳು ತತ್ತರಿಸುತ್ತ–"ಅವರನ್ನೆಲ್ಲಿ ಕರೆದುಕೊಂಡು ಹೋಗಿರುವರೋ. ಅವರೇ ಕೆಲಸಕ್ಕಾಗಿ ಹೋಗಿದ್ದಾರೆ ಮೋಟಾರಿನಲ್ಲಿ."

"ಅವನು ಕಾರಿನಲ್ಲಿ ಕೂಡ್ರಲಿಲ್ಲ ಮನೂಮಾಮಿ. ಜಾಳಿಗೆಯ ಮೋಟಾರಿನಲ್ಲಿ ಕುಳಿತ. ಅಲ್ಲಿ ಸುಡುಗಾಡು ಸಿಪಾಯಿಗಳಿದ್ದರು ಮನೂ ಮಾಮಿ."

"ಕಾರಿನಲ್ಲಿ ಸ್ಥಳವಿರಲಿಲ್ಲ ಕಿರಣ. ಹೋಗಲಿ ಬಿಡು. ನಾಳೆ ನಾಡದು ಬಂದೇ ಬರುತ್ತಾರೆ."

"ಅವ್ವ ಏಕೆ ಅಳುತ್ತಾಳೆ ಹಾಗಾದರೆ?"

"ಅವ್ವನಿಗೆ ಜಡ್ಡಾಗಿದೆ ಬಾಬಾ."

"ಜಡ್ಡಿನ ಅವ್ವನನ್ನು ಬಿಟ್ಟು ಚಿಗಪ್ಪ ಏಕೆ ಹೋದ?"

"ನೀನಿಲ್ಲವೆ ಕಿರಣಾ ನಾನಿಲ್ಲವೆ?"

"ಹಾಗಾದರೆ ಮನೆಗೆ ಹೋಗೋಣ ನಡೆ ಮನೂಮಾಮಿ."

"ಹೋಗೋಣಂತೆ. ಅವ್ವ ಈಗ ಮಲಗಿದ್ದಾಳೆ. ಮಲಗಲಿ. ಆ ಮೇಲೆ ಊಟ ಮಾಡಿ ಹೋಗುವಿಯಂತೆ."

"ಅವ್ವನಿಗೆ ಊಟ?" ಮನೋರಮೆಯ ಕಣ್ಣು ಹನಿದುಂಬಿದವು.- "ಇಲ್ಲಿಂದ ನೀನೇ ಒಯ್ಯುವಿಯಂತೆ. ನಾನೂ ಬರುತ್ತೇನೆ" ಕಿರಣನಿಗೆ ಸಮಾಧಾನವಾಗಲಿಲ್ಲ. ಆದರೂ ಅವಳ ಮನಸ್ಸು ನೋಯಿಸಲಾರದೆ ಸುಮ್ಮನೆ ಹಿಂಬಾಲಿಸಿದ.

ಮನೋರಮೆ ಮನೆಯಲ್ಲಿ ಚಡಪಡಿಸಿದಳು. ಅವಳ ಕಿವಿಯ ಪಟಲದ ಮೇಲೆ– "ಮನೋರಮೆ ತನ್ನ ಗಂಡನನ್ನು ಉಳಿಸಿಕೊಂಡಳು. ನಮ್ಮವರನ್ನು ಆಹುತಿ ಕೊಟ್ಟಳು" ಎಂಬ ಮಾತು ಕಾದ ಸೀಸದ ಗುಂಡಿನಂತೆ ಅವಳೆದೆಯನ್ನೇ ಬಗೆಯಿತು.– "ಅಯ್ಯೋ ನಾನು ನಿರಪರಾಧಿ. ಅದನ್ನು ತಾರಾನಿಗೆ ಹೇಗೆ ಮನಗಾಣಿಸಲಿ?" ಎಂದು ಅವಳು ಕುದಿದಳು. ಆಗಾಗ ಕಣ್ಣೀರು ಚಿಮ್ಮಿ ಬರುತ್ತಿದ್ದವು.

ಇಳಿ ಹೊತ್ತಿಗೆ ತಾರಾ ಎಚ್ಚತ್ತಳು. ಗಾಢ ನಿದ್ರೆಯ ಪರಿಣಾಮವಾಗಿ ಅವಳಿಗೆ ಸಂಪೂರ್ಣ ವಿಶ್ರಾಂತಿ ಸಿಕ್ಕಿದ್ದರಿಂದ ಅವಳ ಮನಸ್ಸು ಸ್ಥಿಮಿತಕ್ಕೆ ಬಂದಿತ್ತು. ಕಣ್ಣು ಪಿಳಕಿಸಿ ಸುತ್ತಲೂ ನೋಡಿದಳು; ಪರಿಸ್ಥಿತಿಯ ಅರಿವಾಗಲಾರಂಭಿಸಿತ್ತು. ಹೋಗುವ ಮುಂದೆ ಪತಿಯ ಎಲ್ಲ ಮಾತುಗಳೂ ಮತ್ತೀಗ ಕೇಳಬಂದವು. ಅವಳು ಗಟ್ಟಿಯಾಗಿ ಕಣ್ಣು ಮುಚ್ಚಿ ಧ್ಯಾನಿಸಹತ್ತಿದಳು. ಸ್ವಲ್ಪ ಹೊತ್ತಿನಲ್ಲಿಯೇ ಮತ್ತೆ ಕಣ್ಣು ತೆರೆದು ಹಾಸಿಗೆಯ ಮೇಲೆ ಎದ್ದು ಕುಳಿತಳು. ಅವಳು ಎದ್ದು ಕುಳಿತುದನ್ನು ನೋಡಿದ ನೀಲವ್ವ ಓಡಿ ಬಂದು– "ಹುಷಾರಾಯಿತೆ ತಾಯಿ?" ಎಂದು ಕೇಳಿದಳು.

"ನನಗೇನಾಗಿದೆ ಬಿಡು ನೀಲವ್ವ. ಏನಾದರೂ ಸುದ್ದಿ ಬಂದಿದೆಯೆ?"

"ಇಷ್ಟು ಬೇಗನೆ ಹೇಗೆ ಬಂದೀತು ತಾಯಿ?"

"ವೆಂಕಟೇಶರಾಯರು ಬಂದಿರುವರೆ?"

"ಬಂದಂತೆ ಕಾಣುವದಿಲ್ಲ."

ತಾರಾ ಗಂಭೀರವಾಗಿ ಯೋಚಿಸತೊಡಗಿದಳು.– "ಮಕ್ಕಳ ಊಟವಾಯಿತೆ ನೀಲವ್ವ?"

"ದೊಡ್ಡ ತಾಯಿಯವರು ತಮ್ಮ ಮನೆಗೇ ಕರೆದುಕೊಂಡು ಹೋಗಿದ್ದಾರೆ. ಅವರ ಬಗ್ಗೆ ಚಿಂತಿಸಬೇಡಿರಿ ತಾಯಿ. ನಿಮಗೇನಾದರೂ ಹಣ್ಣಿನ ರಸ ತಂದು ಕೊಡಲೇನು?"

"ಸಧ್ಯ ನನಗೇನೂ ಬೇಡ ನೀಲವ್ವ. ಈ ಮನೆಯಲ್ಲಿ ನಾನು ನೀರೂ ಕುಡಿಯುವದೂ ಸಾಧ್ಯವಿಲ್ಲ. ನೀನು ಹೋಗಿ ಮಕ್ಕಳನ್ನು ಕರೆದು ತಾ."

"ಮುಂಜಾನೆಯಿಂದ ನಿಮ್ಮ ಹೊಟ್ಟೆಯಲ್ಲಿ ಏನೂ ಇಲ್ಲ ತಾಯಿ. ಈಗ ಮಕ್ಕಳನ್ನು ಕರೆದು ತರುವದು ಬೇಡ. ಸುಮ್ಮನೆ ಗಾಬರಿಯಾಗುತ್ತವೆ. ಮೊದಲು ನೀವು ಹೊಟ್ಟೆಗೆ ಏನಾದರೂ ತೆಗೆದುಕೊಳ್ಳಬೇಕು."

"ನನ್ನ ಹೊಟ್ಟೆ ಪೂರಾ ತುಂಬಿ ಹೋಗಿದೆ ನೀಲವ್ವ" ತಾರಾನ ಕಣ್ಣು ಒದ್ದೆಯಾದವು. ನೀಲವ್ವನಿಗೆ ಆ ಮಾತುಗಳ ಅರ್ಥವಾಗಿತ್ತು.– "ಹೀಗೆಂದರೆ ಹೇಗೆ ತಾಯಿ?"

"ಆದಿರಲಿ–ನಿನ್ನ ಮನೆ ಇಲ್ಲಿಂದ ಬಹಳ ದೂರವೆ?"

"ಸ್ವಲ್ಪ ದೂರವೇ ಎನ್ನಬೇಕು. ಯಾಕೆ ತಾಯಿ?"

"ನಿನ್ನ ಮನೆಯಲ್ಲಿ ಯಾರು ಯಾರಿದ್ದಾರೆ ನೀಲವ್ವ?"

"ಈ ಗೂಬೆಯ ಮನೆಯಲ್ಲಿ ನನ್ನನ್ನು ಬಿಟ್ಟರೆ ಯಾರೂ ಇಲ್ಲ ತಾಯಿ."

"ಒಂದೇ ಕೋಣೆಯಲ್ಲಿರುವಿಯಾ?"

"ಎರಡು ಕೋಣೆಗಳವೆ–ಗೂಡಿನಂತಹವು."

"ನೀಲವ್ವ ಒಂದು ಮಾತನ್ನು ನಡೆಯಿಸಿ ಕೊಡುತ್ತೀಯಾ?"

"ನಾನು ನಿಮ್ಮ ಮಾತನ್ನು ಎಂದಾದರೂ ಮೀರುವೆನೆ?"

"ನೋಡು ನೀಲವ್ವ–ನೀನು ನನ್ನ ತಾಯಿಯಂತಿರುವಿ. ನಿನ್ನ ಮನೆಯಲ್ಲಿ ನನಗೆ ಕೆಲದಿನ ಆಶ್ರಯ ಕೊಡಬೇಕು. ನನಗಿಲ್ಲಿ ಕಾಲ ಹಾಕುವದು ಸಾಧ್ಯವಿಲ್ಲ. ಈ ಮಾತು ಈಗಲೇ ನಡೆಯಬೇಕು. ನಾನು ನಿನ್ನ ಮನೆಯಲ್ಲಿಯೇ ಈದಿನ ನೀರು ಕುಡಿಯುವವಳು. ಒಪ್ಪುವಿಯಾ?"

"ನನ್ನ ಕೊಂಪೆಯಲ್ಲಿ ನೀವು ಇರುವದೆಂದರೇನು ತಾಯಿ? ಈಗಂತಹದೇನಾಗಿದೆ? ಒಂದೆರಡು ದಿನಗಳಲ್ಲಿಯೇ ದೊಡ್ಡ ಸಾಹುಕಾರರು ಬಂದು

ಎಲ್ಲವನ್ನೂ ಸರಿಮಾಡುತ್ತಾರೆ. ನಿಮ್ಮ ಯಜಮಾನರೂ ಮನೆಗೆ ಬರುತ್ತಾರೆ. ಸುಮ್ಮನೆ ಇಲ್ಲದ್ದನ್ನು ತಲೆಯಲ್ಲಿ ಹಾಕಿಕೊಳ್ಳಬೇಡಿರಿ ತಾಯಿ.''

"ಆ ದೊಡ್ಡ ಸಾಹುಕಾರರು ಬರುವ ಮೊದಲೇ ನಾನೀಮನೆ ಬಿಡಬೇಕು ನೀಲವ್ವ. ನಿನಗೆ ನನ್ನ ಮಾತಿನ ಸೂಕ್ಷ್ಮ ತಿಳಿಯಲಾರದು. ನಿನಗೆ ಮನಸ್ಸಿಲ್ಲದಿದ್ದರೆ ಹೇಳು–ನಾನು ಊರ ಹೊರಗಿನ ಧರ್ಮಶಾಲೆಯಲ್ಲಾದರೂ...."

"ನೀವು ಬಂದರೆ ನನ್ನ ಮನೆ ತುಂಬೀತು ತಾಯಿ. ನಾನು ಆ ಮಾತು ಹೇಳಲಿಲ್ಲ. ಆದರೆ...."

"ಹಾಗಾದರೆ ನೀನೀಗಲೇ ಹೋಗಿ ಮಕ್ಕಳನ್ನು ಕರೆದು ತಾ. ನಿನ್ನ ದೊಡ್ಡ ಯಜಮಾನತಿಗೆ ಮನೆ ಒಪ್ಪಿಸಿಕೊಂಡು ಹೋಗಲು ಹೇಳು." ಆ ವೇಳೆಗೆ ಪಡಸಾಲೆಯಲ್ಲಿ ಕಾಲು ಸಪ್ಪಳವಾಯಿತು. ಮನೋರಮೆ ಮಕ್ಕಳೊಡನೆ ಬಂದು ನಿಂತಿದ್ದಳು.– "ಅವರೇ ಬಂದಂತೆ ಕಾಣುತ್ತದೆ ತಾಯಿ" ಎಂದು ನೀಲವ್ವ ನುಡಿಯುವ ಹೊತ್ತಿಗೆ ಆವಳು ಒಳಗೇ ಬಂದಳು.

"ಎದ್ದು ಕುಳಿತು ಸುಮ್ಮನೆ ಆಯಾಸ ಮಾಡಿಕೊಳ್ಳಬೇಡ ತಾರಕ್ಕ. ನಿನಗೆ ವಿಶ್ರಾಂತಿ ಅವಶ್ಯವಾಗಿದೆ" ಎಂದು ನುಡಿದ ಆವಳನ್ನು ತಾರಾ ತಿರಸ್ಕಾರದಿಂದಲೇ ನೋಡಿದಳು.

"ನನ್ನ ವಿಶ್ರಾಂತಿ ಈ ಮನೆಯಲ್ಲಿ ಕಾಲಿಟ್ಟ ದಿನವೇ ಹಾಳಾಗಿ ಹೋಗಿದೆ. ನಾನೀಗ ಎದ್ದು ಕುಳಿತದ್ದು ಮತ್ತೆ ಮಲಗಲಿಕ್ಕಿಲ್ಲ ಮನೋರಮಾಬಾಯಿಯವರೆ, ಬಹು ದೂರ ಹೋಗಲಿಕ್ಕೆ"

"ಅಂದರೆ?...."

"ನನ್ನವರನ್ನು ಅಪರಾಧಿಗಳನ್ನಾಗಿ ಮಾಡಿದ ಮನೆಯಲ್ಲಿ ಹೆಂಡತಿಯಾದವಳು ಇರಬಾರದಷ್ಟೆ?"

"ವಿಶ್ವಾಸರಾಯರನ್ನು ಅಪರಾಧಿಗಳೆಂದು ಹೇಳುವವರಾರು?"

"ಅವರನ್ನು ಬಂಧಿಸಿದ್ದೂ ನಿನಗೆ ಹುಡುಗಾಟಿಕೆಯಲ್ಲವೆ?"

"ಅದೊಂದು ವಿಷಮ ವೇಳೆ ತಾರಕ್ಕ. ನಾನೀದಿನವೇ ಅವರಿಗೆ ಹೇಳಿಕಳಿಸಿದ್ದೇನೆ. ಅವರು ಬಂದೊಡನೆ ಎಲ್ಲವೂ ಸರಿಯಾಗುವದು. ನೀನು ಸುಮ್ಮನೆ ದುಡುಕಬೇಡ."

"ಅವರನ್ನು ಬೇಕೆಂದೇ ಆಹುತಿ ಕೊಟ್ಟ ನಿನ್ನ ಯಜಮಾನರು ನಂಬಿದವರ ಗೋಣು ಕೊಯ್ಯುವ ಕಟುಕರು. ಅವರು ಬರುವರೆಂದು ನಂಬುವಷ್ಟು ನಾನು ಮೂರ್ಖಳಲ್ಲ."

"ಮಾತು ಹಾಗಿರಲಾರದು ತಾರಕ್ಕ. ಇದರಲ್ಲಿ ಜೀವಣ್ಣನ ಕೈವಾಡವಿದೆ; ನೀಚತನವಿದೆ."

"ಒಬ್ಬರ ತಪ್ಪನ್ನು ಇನ್ನೊಬ್ಬರ ಮೇಲೆ ಹಾಕಿ ಜಾರಿಕೊಳ್ಳುವ ಸಿರಿವಂತರ ಸಾಂಪ್ರದಾಯಕ್ಕೆ ನೀನೂ ಅಪವಾದಳಲ್ಲ. ಮುಖ್ಯ ನನ್ನದೇ ತಪ್ಪಾಗಿದೆ. ಅವರ ಜೀವನ ಹಾಳು ಮಾಡಿದ ಪಾಪಿಯಾದ ನನಗೆ ಈ ಶಿಕ್ಷೆ ಬಂದಿದೆ. ನಾನಿದನ್ನು ಅನುಭೋಗಿಲೇಬೇಕು. ಸುಖ ಜೀವನದ ತೆರೆಯ ತೆಕ್ಕೆಯಲ್ಲಿ ಕೊಚ್ಚಿಕೊಂಡ ಜೀವನ ಇಷ್ಟು ಗಾಸಿಯಾಗಬಹುದೆಂದು ನಾನು ತಿಳಿದಿರಲಿಲ್ಲ. ಸಿರಿತನವೊಂದು ಮುಳ್ಳು ಹಾಸಿಗೆ ಈ ಹಾಸಿಗೆಯಲ್ಲಿ ಮಲಗಿ ರಕ್ತ ಸುರಿದದ್ದಾಯಿತು; ಗಾಯಗೊಂಡದ್ದಾಯಿತು. ಇನ್ನು ಮೇಲೆ ಈ ಮನೆಯಲ್ಲಿ ಒಂದು ಕ್ಷಣ ಕೂಡ...." ತಾರಾ ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ತಾಯ ಅಳುವನ್ನು ಮಕ್ಕಳೂ ದನಿ ತೆಗೆದವು. ಮನೋರಮೆಗೆ ಮತ್ತೆ ತಾರಾನ ವ್ಯಾಧಿ ಮರುಕಳಿಸಿತೆಂಬ ಅರಿವಾಗಿ ಸಂಕಟವಾಯಿತು. ಅವಳು ತಾರಾನ ಹತ್ತರ ಹೋಗಿ ಮೈ ಮೇಲೆ ಕೈಯಾಡಿಸುತ್ತ- "ಸ್ವಲ್ಪ ಸಮಾಧಾನದಿಂದ ವಿಚಾರ ಮಾಡು ತಾರಕ್ಕ. ಈ ಉದ್ವೇಗ ಏತಕ್ಕೆ ಬಂದೀತು?" ಎಂದಳು.

"ನನ್ನ ಸಮಾಧಾನ ಅವರೊಡನೆಯೇ ಹೊರಟು ಹೋಗಿದೆ. ನೀನು ಹೆಚ್ಚು ಮಾತಾಡಿ ನನ್ನನ್ನು ಚುಚ್ಚುವ ಅವಶ್ಯಕತೆಯಿಲ್ಲ."

"ನಿನಗೆ ಹುಚ್ಚು ಹಿಡಿದಿಲ್ಲವಷ್ಟೆ?"

"ಆ ಮೋಜನ್ನಷ್ಟು ನೋಡಬೇಕೆಂದು ನಿನಗೆ ಅಪೇಕ್ಷೆಯಾಗಿದ್ದರೆ ನಿನ್ನ ಆಸೆ ಕೈಗೂಡಲಾರದು ಮನೋರಮಾಬಾಯಿ. ನನಗೆ ಅವರ ಸಂದೇಶವಿದೆ. ನನ್ನ ಮಕ್ಕಳನ್ನು ಕಾಪಾಡಬೇಕಾಗಿದೆ. ಅದಕ್ಕಾಗಿಯೆ...."

"ನೀನು ಸಮಾಧಾನದಿಂದಿರಬೇಕು ತಾರಕ್ಕ...."

"ಈ ಮನೆಯಲ್ಲಿ ಅದು ಸಾಧ್ಯವಿಲ್ಲ."

"ಮತ್ತೆ ಅದೇ ಮಾತು."

"ನೊಂದ ಜೀವನದ ಮಾತನ್ನು ನೀನೇನು ಬಲ್ಲಿ?"

"ಈ ನೋವು ನಿನ್ನೊಬ್ಬಳದೇ ಅಲ್ಲ ತಾರಕ್ಕ. ವಿಶ್ವಾಸರಾಯರು ನನಗೆ ಹೊರಗಿನವರಲ್ಲ. ನನ್ನ ಮಾತನ್ನು ಪೂರಾ ಕೇಳು. ನಿನಗಾದ ವ್ಯಥೆಯ ಸಾವಿರಪಟ್ಟು ವ್ಯಥೆ ನನಗೂ ಆಗಿದೆ...."

"ಅವ್ವಯ್ಯ—ಆಗದೇನು ಮಾಡೀತು? ಎಷ್ಟೆಂದರೂ...."

"ನೀನು ತಪ್ಪು ವಿಚಾರದ ಹುಳ್ಳು ಹಾದಿಗುಂಟ ಸಾಗಿದ್ದೀ ತಾರಕ್ಕ. ವಿಶ್ವಾಸರಾಯರು ನೆಮ್ಮದಿಯ ಜೀವನ ಅನುಭವಿಸಿ ಕಾವ್ಯ ಸಂಪತ್ತನ್ನು ಬೆಳೆಯಿಸಲೆಂದು, ನನಗೂ ನನ್ನ ಯಜಮಾನರಿಗೂ ಮಾರ್ಗ ದರ್ಶಕರಾಗಲೆಂದು ಅವರನ್ನು ಬರಮಾಡಿಕೊಂಡೆ ಆದರೆ ವಿಧಿಯ ಸಂಕಲ್ಪ ಬೇರೆಯಾಗಿತ್ತು. ಅವರ ಜೀವನ ಹಾಳು ಮಾಡಿದ ಪಾಪಿ ನಾನೆಂದು ದಯವಿಟ್ಟು ಹೇಳಬೇಡ ತಾರಕ್ಕ. ನನಗೆ ನನ್ನ ಜೀವನದ ಅರಿವಿದೆ. ಏನೇ ಆಗಲಿ ನಿನ್ನವರನ್ನು ಗಂಡಾಂತರದಿಂದ ಪಾರು ಮಾಡುವೆ. ತಿಳಿಯಿತೆ?"

"ಈಗಾದ ಹಾನಿಯನ್ನು ತುಂಬಿಕೊಡಲಾರೆಯಷ್ಟೆ?"

"ಅದಕ್ಕೆ ನಾನೇ ಹೊಣೆಯೆಂದು ನಂಬಲಾರೆ."

"ನಾನೇ ಹೊಣೆ....ನಾನೇ ಹೊಣೆ...." ಎನ್ನುತ್ತ ತಾರಾ ದಿಗ್ಗನೆದ್ದು ಅಲ್ಲಿಯೇ ಗಾಬರಿಯಾಗಿ ನಿಂತ ಉಷೆಯನ್ನು ಬಗಲಲ್ಲಿ ತೆಗೆದುಕೊಂಡಳು.

ಕಿರಣನ ಕೈಹಿಡಿದೆಳೆಯುತ್ತ ತಲೆಬಾಗಿಲ ಕಡೆಗೆ ನಡೆದಳು. ಮನೋರಮೆ ಗಾಬರಿಯಿಂದ- "ತಪ್ಪಾಯಿತು ತಾರಕ್ಕ. ನನ್ನನ್ನು ಕ್ಷಮಿಸು....ದಯ ವಿಟ್ಟು ಹೋಗಬೇಡ ತಾರಕ್ಕ...."

"ಹೊರಟ ಹೆಜ್ಜೆಯನ್ನು ಕೀಳುವ ಸ್ವಭಾವ ನನ್ನದಲ್ಲ. ಏ ನೀಲವ್ವ, ಆ ಕೋಲಿನ ಮೇಲೆ ಒಣ ಹಾಕಿದ ಸೀರೆಯೊಂದೇ ನನ್ನದು. ಅದನ್ನು ತೆಗೆದುಕೊಂಡು ನನ್ನೊಡನೆ ಹೊರಟು ಬಿಡು."

"ತಾರಕ್ಕ; ತಾರಕ್ಕ! ನಿನ್ನ ಕಾಲು ಬೀಳುತ್ತೇನೆ. ಹೀಗೆ ಅನ್ಯಾಯ ಮಾಡಬೇಡ. ನೀನು ಹೋಗುವದಾದರೂ ಎಲ್ಲಿಗೆ?"

"ಸುಡುಗಾಡಕ್ಕೆ...."

"ಇಲ್ಲಿ ನೋಡು ತಾರಕ್ಕ–ಬೇಕಾದರೆ ನಾನೀಗಲೇ ಅಚ್ಯುತರಾಯ ರೆಡೆಗೆ ಆಳು ಕಳಿಸುತ್ತೇನೆ. ಅವರು ಬರುವವರೆಗಾದರೂ...."

"ಆ ಮಾತೇ ಸುಳ್ಳು. ಭಾವನವರು ಬೇಕಾದರೆ ನನ್ನನ್ನು ನೀಲ ವ್ವನ ಮನೆಯಲ್ಲಿಯೇ ಕಾಣಲಿ. ಏ-ನೀಲವ್ವ ಏಕೆ ನಿಂತಿ? ಹೊರಡು ವಿಯೊ ಇಲ್ಲವೊ?...." ಎನ್ನುತ್ತ ತಾರಾ ಹಿಂದಿರುಗಿ ಕೂಡಾ ನೋಡದೆ ಬಿರಬಿರನೆ ನಡೆದಳು. ಅವಳಲ್ಲಿ ಒಂದು ರೀತಿಯ ಆವೇಶ ಬಂದಂತಿತ್ತು. ಮನೋರಮೆ ಅವಳ ಈ ಅವತಾರ ನೋಡಿ ದಿಗ್ಭ್ರಾಂತಳಾದಳು. ಈ ಸಮಸ್ಯೆಯ ತಿರುಗಣಿಯಲ್ಲಿ ಅವಳ ಹೃದಯ ಗಿರ್ರೆಂದು ತಿರುಗಿತು. ಅವ ಳೊಮ್ಮೆ ನೀಲವ್ವನನ್ನು ದಿಟ್ಟಿಸಿ ನೋಡಿ ಸಮಾಧಾನದಿಂದ- "ನೀಲವ್ವ, ನಿನ್ನ ಮನೆಯಲ್ಲಿ ಅವಳಿಗೆ ಎಲ್ಲ ಅನುಕೂಲ ಮಾಡಿಕೊಡು ಹೋಗು. ಅವಳ ತಲೆ ಸಧ್ಯ ಸರಿಯಾಗಿಲ್ಲ. ಅವಳಿಗೆ ಪ್ರತಿಯಾಗಿ ಮಾತಾಡಿದರೆ ಅನರ್ಥವಾದೀತು. ಬೇಕಾದ್ದನ್ನು ನನ್ನಿಂದ ತೆಗೆದುಕೊಂಡು ಹೋಗು ತ್ತಿರು. ನೋಡು ಅವಳಾಗಲೇ ಬಹುದೂರ ಹೋಗಿಬಿಟ್ಟಳು...."

ನೀಲವ್ವ ಒಡತಿಯ ಅಜ್ಞೆಯಂತೆ ತಾರಾನನ್ನು ಕೂಡಿಕೊಳ್ಳಲು ಓಡಿದಳು.– "ತಾರಾನಿಗೆ ಹುಚ್ಚು ಹಿಡಿದದ್ದೇ ನಿಜ. ತಲೆ ಸರಿಯಾಗಿ ದ್ದವರು ಮಾಡುವ ಕೆಲಸವೇ ಇದು? ಗರ್ಭಿಣಿ. ಮೇಲೆ ಎರಡು ಮಕ್ಕಳ

ಬೇರೆ. ಇಂತಹದರಲ್ಲೇ ಮನೆ ಬಿಟ್ಟು ನಡೆದಿದ್ದಾಳೆ. ಎಂತಹ ಅನಾಹುತದ ಪ್ರಸಂಗವಿದು? ಇದಕ್ಕೆ ನಾನೇ ಹೊಣೆಯೆಂದು ಅವಳು ಭಾವಿಸಿದ್ದಾಳೆ. ನಾನು ನನ್ನ ಕರ್ತವ್ಯವನ್ನು ಮಾಡಿದೆನೇ ವಿನಾ ಹೀಗಾಗಬಹುದೆಂದು ತಿಳಿದಿದ್ದೆನೆ? ಈ ದಿನದ ಘಟನೆಯೊಂದೇ ಅವಳ ಈ ಅವಸ್ಥೆಗೆ ಕಾರಣವಾಗಿರಲಾರದು. ಯಾವುದೋ ಒಂದು ಸಂದೇಹದ ಭಾವವನ್ನು ಅವಳು ಬಹು ದಿನಗಳಿಂದ ಹತ್ತಿಕ್ಕಿಕೊಂಡಿರಬಹುದು. ಅದೀಗ ಸ್ಫೋಟನಾಗುತ್ತಲಿದೆ. ಇದರ ಪರಿಹಾರವನ್ನು ನಾನು ಹೇಗೆ ಮಾಡಲಿ? ಅವಳು ನನ್ನ ಮಾತನ್ನು ತಪ್ಪಾಗಿ ಭಾವಿಸುತ್ತಾಳೆ. ಅವಳ ಈ ದುರವಸ್ಥೆ ಇನ್ನೂ ಮುಂದುವರೆದರೆ....” ಹೀಗೆ ವಿಚಾರಿಸಿದ ಮನೋರಮೆಗೆ ಈ ವಿಚಾರ ಬರುತ್ತಲೇ ದೇಹದಲ್ಲಿ ನಡುಕ ಬಂದಂತಾಯಿತು. ಈ ವಿಷಮ ವೇಳೆಯೇ ಘನೀಭೂತವಾಗಿ ತಲೆದೋರಿದಂತೆ ಸಂಜೆಯ ಮಬ್ಬುಗತ್ತಲು ವಿಶ್ವದಲ್ಲೆಲ್ಲ ಆವರಿಸಿತು. ಮನೋರಮೆಗೆ ಈ ಕತ್ತಲೆಲ್ಲ ತನ್ನ ಹೃದಯವನ್ನೇ ಹೊಕ್ಕಂತೆ ಭಾಸವಾಯಿತು. ಅವಳು ನಿರ್ವಿಣ್ಣಳಾಗಿ ಆ ಕತ್ತಲನ್ನು ದುರುಗುಟ್ಟಿಕೊಂಡು ನೋಡುತ್ತಿದ್ದಳು.– “ಈ ಕತ್ತಲನ್ನು ಭೇದಿಸುವ ಬೆಳಕು ಬರಬಹುದೆ?” ಎಂದು ಪದೇ ಪದೇ ತನ್ನನ್ನೇ ತಾನು ಕೇಳಿಕೊಂಡಳು. ಅವಳಿಗೆ ಆಕ್ಷಣ ಗಂಡನ ನೆನಪಾಯಿತು. ಆಗಲೇ ಅವಳು ಇಲ್ಲಿ ನಡೆದ ಸಂಗತಿಯನ್ನು ತಿಳಿಸಲು ಆಳು ಕಳಿಸಿದ್ದಳು. ವೆಂಕಟೇಶ ಈ ಸುದ್ದಿ ಕೇಳಿ ಧಾವಿಸಬಹುದೆಂದು ಬಗೆದಿದ್ದಳು ಅವನು ಬಂದ ಕೂಡಲೆ ವಿಶ್ವಾಸನ ಬಿಡುಗೆಯಾಗಬಹುದೆಂದೂ ನಂಬಿದ್ದಳು. ಪತಿಯ ಕೃತತ್ವ ಶಕ್ತಿಯಲ್ಲಿ ಅವಳಿಗೆ ವಿಶ್ವಾಸವಿತ್ತು. ಈಗ ಬಂದ ಗಂಡಾಂತರ ಕೂಡಲೆ ಹಾರಿ ಹೋಗುವದೆಂಬ ವಿಶ್ವಾಸ ಅವಳಲ್ಲಿ ತುಸು ಚೇತನೆಯನ್ನೇ ತಂದಿದ್ದರಿಂದ ಅವಳು ಸಾವಕಾಶವಾಗಿ ಮೇಲಕ್ಕೆದ್ದಳು. ತಾರಾನ ಮನೆ ಅಸ್ತವ್ಯಸ್ತವಾಗಿ ತುಂಬಿ ನಿಂತಿತ್ತು. ಅವಳೊಮ್ಮೆ ಅದನ್ನು ಶೂನ್ಯ ಮನಸ್ಕಳಾಗಿ ನೋಡಿ ಎಲ್ಲ ಬಾಗಿಲುಗಳನ್ನು ಹಾಕಿಕೊಂಡು ಮನೆಯ ಕಡೆಗೆ ಭಾರವಾದ ಹೆಜ್ಜೆಗಳನ್ನಿಕ್ಕುತ್ತ ಸಾಗಿದಳು. ಇನ್ನೇನು ಮನೆಗೆ ಹೋಗುವದರಲ್ಲಿ ಪತಿ ಬಂದಿರುತ್ತಾನೆ; ಕೂಡಲೆ ವಿಶ್ವಾಸನ ಬಂಧ ವಿಮೋಚನೆಗಾಗಿ ಪ್ರಯತ್ನಿಸುತ್ತಾನೆ–ಎಂಬ ಭಾವ

ಅವಳಲ್ಲಿ ಜಾಗ್ರತವಾಗಿ ಅವಳು ತನ್ನ ಮನೆಯೆಡೆಗೆ ಉಟು-ಉಟು ಹೆಜ್ಜೆ ಹಾಕುತ್ತಿದ್ದಳು.

೧೭

ವೆಂಕಟೇಶನ ಬರವನ್ನು ಆತುರದಿಂದ ನಿರೀಕ್ಷಿಸುತ್ತಿರುವ ಮನೋರಮೆಗೆ ಸಂಪೂರ್ಣ ಆಶಾಭಂಗವಾಗತೊಡಗಿತ್ತು. ಅವನಿರುವ ಸ್ಥಳಗಳಿಗೆಲ್ಲ ಆಳುಗಳನ್ನಟ್ಟಿ ನೋಡಿದ್ದಳು. ಎಲ್ಲಿಯೂ ಅವನ ಸುಳಿವೇ ಹತ್ತಲಿಲ್ಲ. ರಜಾಕನನ್ನಾದರೂ ಕಳಿಸಬೇಕೆಂದರೆ ಮಟಾ ಮಾಯವಾಗಿದ್ದ. ಇದರಿಂದಲಂತೂ ಅವಳಿಗೆ ಇಲ್ಲದ ಸಂಶಯುಗಳು ಸುರುಳಿಸುರುಳಿಯಾಗಿ ಬರತೊಡಗಿ ಹೃದಯುದಲ್ಲಿ ಭಯ ನೆಲಿಸಿತ್ತು. ಅವಳಿಗೀಗ ತಾರಾನ ಮಾತೇ ನಿಜವಾಗಿ ತೋರಲಾರಂಬಿಸಿತ್ತು. ವಿಶ್ವಾಸನನ್ನು ಗಾಣದಲ್ಲಿ ಸಿಲುಕಿಸಿ ವೆಂಕಟೇಶ ಪಾರಾಗಿರಬೇಕೆಂಬ ಸಂಶಯ ಬಲವಾಯಿತು. ವಿಶ್ವಾಸನನ್ನುಳಿಸುವದು ಹೇಗೆಂಬುದು ಅವಳಿಗೀಗ ಪ್ರಬಲ ಸಮಸ್ಯೆಯಾಗಿ ನಿಂತಿತು. ಗಂಡನ ಆಚರಣೆಯ ಬಗ್ಗೆ ಸಂತಾಪವಾಯಿತು. ಈ ಸಂತಾಪದ ಜೊತೆಗೇ ಭಯವೂ ಕಾಣಿಸಿಕೊಂಡಿತು. ಮನೆಯ ಸಂಪತ್ತೆಲ್ಲ ಅನ್ಯರ ಪಾಲಾಗಿರುವದನ್ನು ಕೇಳಿ ಅವನು ಮನೆಯನ್ನೇ ತೊರೆದಿರಬಹುದೆ-ಎಂಬ ಭಾವವೇ ಆ ಭಯಕ್ಕೆ ಕಾರಣವಾಗಿತ್ತು. ಆದರೆ ಅಪಾರ ಸಂಪತ್ತಿನಲ್ಲಿ ಹೋಗಬಹುದಾದದ್ದು ಎಲ್ಲಿಯೋ ಒಂದು ಕಣವೆಂಬ ಅರಿವಾದಾಗ ಅವಳ ಭಯ ಸ್ವಲ್ಪ ಕಡಿಮೆಯಾಗುವದು. ಆದರೆ ಅವನು ಬಾರದಿರುವ ಕಾರಣ ಯಾವದೆಂಬುದನ್ನೂಹಿಸಲು ಅವಳಿಗೆ ಕಷ್ಟಸಾಧ್ಯವಾಗಿತ್ತು.

ಇತ್ತ ನೀಲವ್ವನ ಮನೆಯಲ್ಲಿ ತಾರಾ ನಡೆಯಿಸುತ್ತಿರುವ ಜೀವನವನ್ನು ಕೇಳಿದಾಗಲಂತೂ ಅವಳ ಹೃದಯ ಬಾಯಿಗೇ ಬರಹತ್ತಿತು. ಮೊದಲು ಒಂದೆರಡು ದಿನ ಕೆಂಡವಾಗಿದ್ದಳಂತೆ. ಈಗ ಸಮಾಧಾನದಿಂದ ಮಕ್ಕಳನ್ನು ಸಂತೈಸುವಳಂತೆ. ಎಲ್ಲ ಕೆಲಸವನ್ನೂ ತಾನೇ ಮಾಡಿಕೊಳ್ಳುತ್ತ, ಕದನ್ನವನ್ನೇ ತಿನ್ನುತ್ತಿರುವಳಂತೆ. ತಪ್ಪಿ ಕೂಡ ನನ್ನ ಹೆಸರು

"ನಿನಗೆ ಹುಚ್ಚು ಹಿಡಿದಿಲ್ಲವಷ್ಟೆ?"

"ಆ ಮೋಜನ್ನಷ್ಟು ನೋಡಬೇಕೆಂದು ನಿನಗೆ ಅಪೇಕ್ಷೆಯಾಗಿದ್ದರೆ ನಿನ್ನ ಆಸೆ ಕೈಗೂಡಲಾರದು ಮನೋರಮಾಬಾಯಿ. ನನಗೆ ಅವರ ಸಂದೇಶವಿದೆ. ನನ್ನ ಮಕ್ಕಳನ್ನು ಕಾಪಾಡಬೇಕಾಗಿದೆ. ಅದಕ್ಕಾಗಿಯೆ...."

"ನೀನು ಸಮಾಧಾನದಿಂದಿರಬೇಕು ತಾರಕ್ಕ...."

"ಈ ಮನೆಯಲ್ಲಿ ಅದು ಸಾಧ್ಯವಿಲ್ಲ."

"ಮತ್ತೆ ಅದೇ ಮಾತು."

"ನೊಂದ ಜೀವನದ ಮಾತನ್ನು ನೀನೇನು ಬಲ್ಲಿ?"

"ಈ ನೋವು ನಿನ್ನೊಬ್ಬಳದೇ ಅಲ್ಲ ತಾರಕ್ಕ. ವಿಶ್ವಾಸರಾಯರು ನನಗೆ ಹೊರಗಿನವರಲ್ಲ. ನನ್ನ ಮಾತನ್ನು ಪೂರಾ ಕೇಳು. ನಿನಗಾದ ವ್ಯಥೆಯ ಸಾವಿರಪಟ್ಟು ವ್ಯಥೆ ನನಗೂ ಆಗಿದೆ...."

"ಅಪ್ಪಯ್ಯ—ಆಗದೇನು ಮಾಡೀತು? ಎಷ್ಟೆಂದರೂ...."

"ನೀನು ತಪ್ಪು ವಿಚಾರದ ಮುಳ್ಳು ಹಾದಿಗುಂಟ ಸಾಗಿದ್ದೀ ತಾರಕ್ಕ. ವಿಶ್ವಾಸರಾಯರು ನೆಮ್ಮದಿಯ ಜೀವನ ಅನುಭವಿಸಿ ಕಾವ್ಯ ಸಂಪತ್ತನ್ನು ಬೆಳೆಯಿಸಲೆಂದು, ನನಗೂ ನನ್ನ ಯಜಮಾನರಿಗೂ ಮಾರ್ಗ ದರ್ಶಕರಾಗಲೆಂದು ಅವರನ್ನು ಬರಮಾಡಿಕೊಂಡೆ ಆದರೆ ವಿಧಿಯ ಸಂಕಲ್ಪ ಬೇರೆಯಾಗಿತ್ತು. ಅವರ ಜೀವನ ಹಾಳು ಮಾಡಿದ ಪಾಪಿ ನಾನೆಂದು ದಯವಿಟ್ಟು ಹೇಳಬೇಡ ತಾರಕ್ಕ. ನನಗೆ ನನ್ನ ಜೀವನದ ಅರಿವಿದೆ. ಏನೇ ಆಗಲಿ ನಿನ್ನವರನ್ನು ಗಂಡಾಂತರದಿಂದ ಪಾರು ಮಾಡುವೆ. ತಿಳಿಯಿತೆ?"

"ಈಗಾದ ಹಾನಿಯನ್ನು ತುಂಬಿಕೊಡಲಾರೆಯಷ್ಟೆ?"

"ಅದಕ್ಕೆ ನಾನೇ ಹೊಣೆಯೆಂದು ನಂಬಲಾರೆ."

"ನಾನೇ ಹೊಣೆ....ನಾನೇ ಹೊಣೆ...." ಎನ್ನುತ್ತ ತಾರಾ ದಿಗ್ಗನೆದ್ದು ಅಲ್ಲಿಯೇ ಗಾಬರಿಯಾಗಿ ನಿಂತ ಉಷೆಯನ್ನು ಬಗಲಲ್ಲಿ ತೆಗೆದುಕೊಂಡಳು.

ಕಿರಣನ ಕೈಹಿಡಿದೆಳೆಯುತ್ತ ತಲೆಬಾಗಿಲ ಕಡೆಗೆ ನಡೆದಳು. ಮನೋರಮೆ ಗಾಬರಿಯಿಂದ- "ತಪ್ಪಾಯಿತು ತಾರಕ್ಕ. ನನ್ನನ್ನು ಕ್ಷಮಿಸು....ದಯ ವಿಟ್ಟು ಹೋಗಬೇಡ ತಾರಕ್ಕ...."

"ಹೊರಟ ಹೆಜ್ಜೆಯನ್ನು ಕೀಳುವ ಸ್ವಭಾವ ನನ್ನದಲ್ಲ. ಏ ನೀಲವ್ವ, ಆ ಕೋಲಿನ ಮೇಲೆ ಒಣ ಹಾಕಿದ ಸೀರೆಯೊಂದೇ ನನ್ನದು. ಅದನ್ನು ತೆಗೆದುಕೊಂಡು ನನ್ನೊಡನೆ ಹೊರಟು ಬಿಡು."

"ತಾರಕ್ಕ; ತಾರಕ್ಕ! ನಿನ್ನ ಕಾಲು ಬೀಳುತ್ತೇನೆ. ಹೀಗೆ ಅನ್ಯಾಯ ಮಾಡಬೇಡ. ನೀನು ಹೋಗುವದಾದರೂ ಎಲ್ಲಿಗೆ?"

"ಸುಡುಗಾಡಕ್ಕೆ...."

"ಇಲ್ಲಿ ನೋಡು ತಾರಕ್ಕ-ಬೇಕಾದರೆ ನಾನೀಗಲೇ ಅಚ್ಯುತರಾಯ ರೆಡೆಗೆ ಆಳು ಕಳಿಸುತ್ತೇನೆ. ಅವರು ಬರುವವರೆಗಾದರೂ...."

"ಆ ಮಾತೇ ಸುಳ್ಳು. ಭಾವನವರು ಬೇಕಾದರೆ ನನ್ನನ್ನು ನೀಲ ವ್ವನ ಮನೆಯಲ್ಲಿಯೇ ಕಾಣಲಿ. ಏ-ನೀಲವ್ವ ಏಕೆ ನಿಂತಿ? ಹೊರಡು ವಿಯೊ ಇಲ್ಲವೊ?...." ಎನ್ನುತ್ತ ತಾರಾ ಹಿಂದಿರುಗಿ ಕೂಡಾ ನೋಡದೆ ಬಿರಬಿರನೆ ನಡೆದಳು. ಅವಳಲ್ಲಿ ಒಂದು ರೀತಿಯ ಆವೇಶ ಬಂದಂತಿತ್ತು. ಮನೋರಮೆ ಅವಳ ಈ ಅವತಾರ ನೋಡಿ ದಿಗ್ಭ್ರಾಂತಳಾದಳು. ಈ ಸಮಸ್ಯೆಯ ತಿರುಗಣಿಯಲ್ಲಿ ಅವಳ ಹೃದಯ ಗಿರ್ರೆಂದು ತಿರುಗಿತು. ಅವ ಳೊಮ್ಮೆ ನೀಲವ್ವನನ್ನು ದಿಟ್ಟಿಸಿ ನೋಡಿ ಸಮಾಧಾನದಿಂದ- "ನೀಲವ್ವ, ನಿನ್ನ ಮನೆಯಲ್ಲಿ ಅವಳಿಗೆ ಎಲ್ಲ ಅನುಕೂಲ ಮಾಡಿಕೊಡು ಹೋಗು. ಅವಳ ತಲೆ ಸಧ್ಯ ಸರಿಯಾಗಿಲ್ಲ. ಅವಳಿಗೆ ಪ್ರತಿಯಾಗಿ ಮಾತಾಡಿದರೆ ಅನರ್ಥವಾದೀತು. ಬೇಕಾದ್ದನ್ನು ನನ್ನಿಂದ ತೆಗೆದುಕೊಂಡು ಹೋಗು ತ್ತಿರು. ನೋಡು ಅವಳಾಗಲೇ ಬಹುದೂರ ಹೋಗಿಬಿಟ್ಟಳು...."

ನೀಲವ್ವ ಒಡತಿಯ ಆಜ್ಞೆಯಂತೆ ತಾರಾಳನ್ನು ಕೂಡಿಕೊಳ್ಳಲು ಓಡಿದಳು.- "ತಾರಾನಿಗೆ ಹುಚ್ಚು ಹಿಡಿದದ್ದೇ ನಿಜ. ತಲೆ ಸರಿಯಾಗಿ ದ್ದವರು ಮಾಡುವ ಕೆಲಸವೇ ಇದು? ಗರ್ಭಿಣಿ. ಮೇಲೆ ಎರಡು ಮಕ್ಕಳ

ಬೇರೆ. ಇಂತಹವರಲ್ಲೇ ಮನೆ ಬಿಟ್ಟು ನಡೆದಿದ್ದಾಳೆ. ಎಂತಹ ಅನಾಹುತದ ಪ್ರಸಂಗವಿದು? ಇದಕ್ಕೆ ನಾನೇ ಹೊಣೆಯೆಂದು ಅವಳು ಭಾವಿಸಿದ್ದಾಳೆ. ನಾನು ನನ್ನ ಕರ್ತವ್ಯವನ್ನು ಮಾಡಿದೆನೇ ವಿನಾ ಹೀಗಾಗಬಹುದೆಂದು ತಿಳಿದಿದ್ದೆನೆ? ಈ ದಿನದ ಘಟನೆಯೊಂದೇ ಅವಳ ಈ ಅವಸ್ಥೆಗೆ ಕಾರಣವಾಗಿರಲಾರದು. ಯಾವುದೋ ಒಂದು ಸಂದೇಹದ ಭಾವವನ್ನು ಅವಳು ಬಹು ದಿನಗಳಿಂದ ಹತ್ತಿಕ್ಕಿಕೊಂಡಿರಬಹುದು. ಅದೀಗ ಸ್ಫೋಟನಾಗುತ್ತಲಿದೆ. ಇದರ ಪರಿಹಾರವನ್ನು ನಾನು ಹೇಗೆ ಮಾಡಲಿ? ಅವಳು ನನ್ನ ಮಾತನ್ನು ತಪ್ಪಾಗಿ ಭಾವಿಸುತ್ತಾಳೆ. ಅವಳ ಈ ದುರವಸ್ಥೆ ಇನ್ನೂ ಮುಂದುವರೆದರೆ...." ಹೀಗೆ ವಿಚಾರಿಸಿದ ಮನೋರಮೆಗೆ ಈ ವಿಚಾರ ಬರುತ್ತಲೇ ದೇಹದಲ್ಲಿ ನಡುಕ ಬಂದಂತಾಯಿತು. ಈ ವಿಷಮ ವೇಳೆಯೇ ಘನೀಭೂತವಾಗಿ ತಲೆದೋರಿದಂತೆ ಸಂಜೆಯ ಮಬ್ಬುಗತ್ತಲು ವಿಶ್ವದಲ್ಲೆಲ್ಲ ಆವರಿಸಿತು. ಮನೋರಮೆಗೆ ಈ ಕತ್ತಲೆಲ್ಲ ತನ್ನ ಹೃದಯವನ್ನೇ ಹೊಕ್ಕಂತೆ ಭಾಸವಾಯಿತು. ಅವಳು ನಿರ್ವಿಣ್ಣಳಾಗಿ ಆ ಕತ್ತಲನ್ನು ದುರುಗುಟ್ಟಿಕೊಂಡು ನೋಡುತ್ತಿದ್ದಳು.- "ಈ ಕತ್ತಲನ್ನು ಭೇದಿಸುವ ಬೆಳಕು ಬರಬಹುದೆ?" ಎಂದು ಪದೇ ಪದೇ ತನ್ನನ್ನೇ ತಾನು ಕೇಳಿಕೊಂಡಳು. ಆವಳಿಗೆ ಆಕ್ಷಣ ಗಂಡನ ನೆನಪಾಯಿತು. ಆಗಲೇ ಅವಳು ಇಲ್ಲಿ ನಡೆದ ಸಂಗತಿಯನ್ನು ತಿಳಿಸಲು ಆಳು ಕಳಿಸಿದ್ದಳು. ವೆಂಕಟೇಶ ಈ ಸುದ್ದಿ ಕೇಳಿ ಧಾವಿಸಬಹುದೆಂದು ಬಗೆದಿದ್ದಳು ಅವನು ಬಂದ ಕೂಡಲೆ ವಿಶ್ವಾಸನ ಬಿಡುಗಡೆಯಾಗಬಹುದೆಂದೂ ನಂಬಿದ್ದಳು. ಪತಿಯ ಕೃತತ್ವ ಶಕ್ತಿಯಲ್ಲಿ ಅವಳಿಗೆ ವಿಶ್ವಾಸವಿತ್ತು. ಈಗ ಬಂದ ಗಂಡಾಂತರ ಕೂಡಲೆ ಹಾರಿ ಹೋಗುವದೆಂಬ ವಿಶ್ವಾಸ ಅವಳಲ್ಲಿ ತುಸು ಚೇತನೆಯನ್ನೇ ತಂದಿದ್ದರಿಂದ ಅವಳು ಸಾವಕಾಶವಾಗಿ ಮೇಲಕ್ಕೆದ್ದಳು. ತಾರಾನ ಮನೆ ಅಸ್ತವ್ಯಸ್ತವಾಗಿ ತುಂಬಿ ನಿಂತಿತ್ತು. ಅವಳೊಮ್ಮೆ ಅದನ್ನು ಶೂನ್ಯ ಮನಸ್ಕಳಾಗಿ ನೋಡಿ ಎಲ್ಲ ಬಾಗಿಲುಗಳನ್ನು ಹಾಕಿಕೊಂಡು ಮನೆಯ ಕಡೆಗೆ ಭಾರವಾದ ಹೆಜ್ಜೆಗಳನ್ನಿಕ್ಕುತ್ತ ಸಾಗಿದಳು. ಇನ್ನೇನು ಮನೆಗೆ ಹೋಗುವದರಲ್ಲಿ ಪತಿ ಬಂದಿರುತ್ತಾನೆ; ಕೂಡಲೆ ವಿಶ್ವಾಸನ ಬಂಧ ವಿಮೋಚನೆಗಾಗಿ ಪ್ರಯತ್ನಿಸುತ್ತಾನೆ-ಎಂಬ ಭಾವ

ಅವಳಲ್ಲಿ ಜಾಗ್ರತವಾಗಿ ಅವಳು ತನ್ನ ಮನೆಯೆಡೆಗೆ ಉಟು-ಉಟು ಹೆಜ್ಜೆ ಹಾಕುತ್ತಿದ್ದಳು.

೧೭

ವೆಂಕಟೇಶನ ಬರವನ್ನು ಆತುರದಿಂದ ನಿರೀಕ್ಷಿಸುತ್ತಿರುವ ಮನೋರಮೆಗೆ ಸಂಪೂರ್ಣ ಆಶಾಭಂಗವಾಗತೊಡಗಿತ್ತು. ಅವನಿರುವ ಸ್ಥಳಗಳಿಗೆಲ್ಲ ಆಳುಗಳನ್ನಟ್ಟಿ ನೋಡಿದ್ದಳು. ಎಲ್ಲಿಯೂ ಅವನ ಸುಳಿವೇ ಹತ್ತಲಿಲ್ಲ. ರಜಾಕನನ್ನಾದರೂ ಕಳಿಸಬೇಕೆಂದರೆ ಮಟಾ ಮಾಯವಾಗಿದ್ದ. ಇದರಿಂದಲಂತೂ ಅವಳಿಗೆ ಇಲ್ಲದ ಸಂಶಯಗಳು ಸುರುಳಿಸುರುಳಿಯಾಗಿ ಬರತೊಡಗಿ ಹೃದಯದಲ್ಲಿ ಭಯ ನೆಲಿಸಿತ್ತು. ಅವಳಿಗೀಗ ತಾರಾನ ಮಾತೇ ನಿಜವಾಗಿ ತೋರಲಾರಂಬಿಸಿತ್ತು. ವಿಶ್ವಾಸನನ್ನು ಗಾಣದಲ್ಲಿ ಸಿಲುಕಿಸಿ ವೆಂಕಟೇಶ ಪಾರಾಗಿರಬೇಕೆಂಬ ಸಂಶಯ ಬಲವಾಯಿತು. ವಿಶ್ವಾಸನನ್ನುಳಿಸುವದು ಹೇಗೆಂಬುದು ಅವಳಿಗೀಗ ಪ್ರಬಲ ಸಮಸ್ಯೆಯಾಗಿ ನಿಂತಿತು. ಗಂಡನ ಆಚರಣೆಯ ಬಗ್ಗೆ ಸಂತಾಪವಾಯಿತು. ಈ ಸಂತಾಪದ ಜೊತೆಗೇ ಭಯವೂ ಕಾಣಿಸಿಕೊಂಡಿತು. ಮನೆಯ ಸಂಪತ್ತೆಲ್ಲ ಅನ್ಯರ ಪಾಲಾಗಿರುವದನ್ನು ಕೇಳಿ ಅವನು ಮನೆಯನ್ನೇ ತೊರೆದಿರಬಹುದೆ-ಎಂಬ ಭಾವವೇ ಆ ಭಯಕ್ಕೆ ಕಾರಣವಾಗಿತ್ತು. ಆದರೆ ಅಪಾರ ಸಂಪತ್ತಿನಲ್ಲಿ ಹೋಗಬಹುದಾದದ್ದು ಎಲ್ಲಿಯೋ ಒಂದು ಕಣವೆಂಬ ಅರಿವಾದಾಗ ಅವಳ ಭಯ ಸ್ವಲ್ಪ ಕಡಿಮೆಯಾಗುವದು. ಆದರೆ ಅವನು ಬಾರದಿರುವ ಕಾರಣ ಯಾವದೆಂಬುದನ್ನೂಹಿಸಲು ಅವಳಿಗೆ ಕಷ್ಟಸಾಧ್ಯವಾಗಿತ್ತು.

ಇತ್ತ ನೀಲವ್ವನ ಮನೆಯಲ್ಲಿ ತಾರಾ ನಡೆಯಿಸುತ್ತಿರುವ ಜೀವನವನ್ನು ಕೇಳಿದಾಗಲಂತೂ ಅವಳ ಹೃದಯ ಬಾಯಿಗೇ ಬರಹತ್ತಿತು. ಮೊದಲು ಒಂದೆರಡು ದಿನ ಕೆಂಡವಾಗಿದ್ದಳಂತೆ. ಈಗ ಸಮಾಧಾನದಿಂದ ಮಕ್ಕಳನ್ನು ಸಂತೈಸುವಳಂತೆ. ಎಲ್ಲ ಕೆಲಸವನ್ನೂ ತಾನೇ ಮಾಡಿಕೊಳ್ಳುತ್ತ, ಕದನ್ನವನ್ನೇ ತಿನ್ನುತ್ತಿರುವಳಂತೆ. ತಪ್ಪಿ ಕೂಡ ನನ್ನ ಹೆಸರು

ಬಂದರೆ ಉರಿದು ಬೀಳುವಳಂತೆ. ಹೊಲಿಗೆ ಯಂತ್ರದ ಮೇಲೆ ಕೆಲಸ ಮಾಡಿ ಉಪಜೀವಿಸಲು ಬದ್ಧಕಂಕಣಳಾಗಿರುವಳಂತೆ. ಇದೆಂತಹ ವಿಪರೀತ. ಈ ಜೀವನವನ್ನು ಅವಳು ಸಹಿಸಬಹುದೆ? ಗರ್ಭಿಣಿಯಾದವಳು ಹೀಗೆ ದುಡಿದರೆ ಮುಂದೆ ಹೇಗೆ?–ಇವೆಲ್ಲ ವಿಚಾರಗಳನ್ನು ಮಾಡಿ, ಮಾಡಿ ಮನೋರಮೆ ಬೆಂದು ಹೋಗುತ್ತಲಿದ್ದಾಳೆ. ಇದರ ಪರಿಹಾರ ಮಾರ್ಗವನ್ನು ಹೇಗೆ ಕಂಡುಕೊಳ್ಳುವದೆಂದು ವಿಚಾರಿಸುತ್ತ ದಿನ ಹಗಲು ಕಳೆಯುತ್ತಾಳೆ.

ವಿಶ್ವಾಸನನ್ನು ಬಂಧಿಸಿಕೊಂಡು ಹೋದ ಏಳನೆಯ ದಿನ ಸಂಜೆಯ ಐದು ಗಂಟೆಯ ಸುಮಾರಿಗೆ ನೀಲವ್ವ ಓಡುತ್ತ ಬರುವದನ್ನು ನೋಡಿ ಹೊರಗಿನ ಕಟ್ಟೆಯ ಮೇಲೆ ಕುಳಿತ ಮನೋರಮೆ ಗಾಬರಿಯಾದಳು. ಶಾರಾನ ಬಗ್ಗೆ ಯಾವ ಅನಿಷ್ಟ ಸಮಾಚಾರವನ್ನು ಇವಳು ಹೇಳಬಹುದೆಂಬುದೇ ಗಾಬರಿಗೆ ಕಾರಣವಾಗಿತ್ತು. ನೀಲವ್ವ ತೇಕುತ್ತ ಬಂದಾಗ ಅವಳ ಕಣ್ಣು ಅಶ್ರುಪೂರ್ಣವಾಗಿದ್ದವು.– “ಯಾವ ಸುದ್ದಿಯನ್ನು ತಂದಿರುವೆಯೇ ನೀಲವ್ವ?”

“ಎಲ್ಲವೂ ಮುಗಿದು ಹೋಯಿತು ತಾಯಿ. ಅನರ್ಥವಾಗಿ ಹೋಯಿತು.”

“ಏನೇ ಹಾಗಂದರೆ?”

“ಸಣ್ಣ ಸಾಹುಕಾರರಿಗೆ ನಾಲ್ಕು ತಿಂಗಳ ಸಜಾ ಆಗಿ ಬಿಟ್ಟಿತು. ಮೇಲೆ ಐದು ಸಾವಿರ ರೂಪಾಯಿ ದಂಡ. ದಂಡ ತರದಿದ್ದರೆ ಮತ್ತೆ ಎರಡು ವರುಷ ಕಠಿಣ ಸಜಾ.”

‘ಹಾ? ಏನು ಹೇಳುವಿಯೇ ಚಂಡಾಳಿ?” ಕರುಳುಗಳೆಲ್ಲ ಕಿತ್ತು ಬರುವಂತೆ ಸಂಕಟದಿಂದ ಮನೋರಮೆ ನುಡಿದಳು.– “ಇಷ್ಟು ಬೇಗನೆ.... ಇಷ್ಟು ಬೇಗನೆ....”

“ವಿಶ್ವಾಸರಾಯರು ಎಲ್ಲವನ್ನೂ ಒಪ್ಪಿಕೊಂಡ ಮೇಲೆ ತಡವೇ ತಕ್ಕಾಗಬೇಕು ತಾಯಿ? ಅವರನ್ನು ಒಂದು ತಾಸಿನ ಹಿಂದೆ ಹಿಂಡಲಿಗೆಗೆ

ಮನೋರಮೆ ತುಟಿಗಳನ್ನು ಬಲವಾಗಿ ಬಿಗಿದುಕೊಂಡು ನಡುಗುವ ದನಿಯಲ್ಲಿ ನೀಲವ್ವನಿಗೆ ಕೇಳಿದಳು.– "ನಿನಗಾರು ಹೇಳಿದರೆ ಈ ಅನಿಷ್ಟ ಸಮಾಚಾರ ನೀಲವ್ವ?"

"ಇಲ್ಲಿಯ ಕೆಲಸ ಮುಗಿಸಿಕೊಂಡು ಮನೆಯ ಕಡೆ ನಡೆದಾಗ ಜೀವಣ್ಣ ಭೆಟ್ಟಿಯಾದ ತಾಯಿ. ಅವನೇ ನನ್ನನ್ನು ಕರೆದು ಈ ಸಮಾಚಾರ ಹೇಳಿದ. ಅವನ ಮುಖ ಬಹಳ ಸಪ್ಪಗಾಗಿತ್ತು; ಹೇಳಿದ ಬಳಿಕ ಕಣ್ಣೀರೂ ಸುರಿಸಿದ."

"ಅದೆಲ್ಲ ಮೊಸಳೆಯ ಕಣ್ಣೀರು....ಅವನದೇ ಈ ಕುತಂತ್ರ....ಅದಿರಲಿ ನೀಲವ್ವ-ಈ ಸುದ್ದಿಯನ್ನು ತಾರಾನಿಗೆ ಹೇಗೆ ತಿಳಿಸಬೇಕು ಹೇಳು. ಅವಳ ಅವಸ್ಥೆ ಏನಾದೀತು?...."

"ಆ ತಾಯಿಗೆ ಈ ಸುದ್ದಿಯನ್ನು...."

"ಹಾಂ! ಅದನ್ನೇ ನಾನು ಕೇಳುವದು...."

"ನಾನು ತಿಳಿಸಿಬಿಟ್ಟೆ ತಾಯಿ...."

"ಬಹಳ ರಂಬಾಟ ಮಾಡುತ್ತಿರುವಳೆ ನೀಲವ್ವ?...."

"ಈ ಸುದ್ದಿ ಕೇಳಿ ಒಂದು ಕ್ಷಣ ಕಣ್ಣು ಮುಚ್ಚಿಕೊಂಡು ಕುಳಿತರು. ಅವರ ಸಮಾಧಾನವನ್ನು ನೋಡಿ ನನಗೆ ಬೆರಗಾಯಿತು. ಕೆಲಸ ಮಯದ ಮೇಲೆ- "ಈ ಶಿಕ್ಷೆಯನ್ನವರು ಅನುಭೋಗಿಲೇಬೇಕು" ಎಂದು ಕೆಲಸದಲ್ಲಿ ಮಗ್ನರಾದರು. ಅವರಿಂದ ನಾನೀ ಸಮಾಧಾನ ಬಯಸಿರಲಿಲ್ಲ ತಾಯಿ."

"ಹುಚ್ಚು ನೀಲವ್ವ. ನಿನಗಿದು ತಿಳಿಯದು. ಇದು ಸಮಾಧಾನವಲ್ಲ;– ಸಮಾಧಾನದ ಸಮಾಧಿ. ಅವಳನ್ನು ಚನ್ನಾಗಿ ನೋಡಿಕೊಂಡಿರು. ಅವಳೇನೇ ಅನ್ನಲಿ-ನಾನೀಗಲೇ ಬಂದು ಭೆಟ್ಟಿಯಾಗುವೆ."

"ಬೇಡ ತಾಯಿ–ಆ ಮಾತೇ ಬೇಡ."

"ತಾರಕ್ಕನನ್ನು ಸಂತೈಸಲು ನಾನು ಬರಕೂಡದೆ?"

"ಅವರಿಗೆ ನಿಮ್ಮ ಮೇಲೆ ಬಹಳ ಕೋಪ ಬಂದಂತೆ ಕಾಣುತ್ತದೆ."

"ನಾನು ಯಾವ ತಪ್ಪೂ ಮಾಡಲಿಲ್ಲ ನೀಲವ್ವ."

"ಅದೇನೊ ಅವರ ಬೇರೆಯಾಗಿ ತಿಳಿದುಕೊಂಡಂತೆ ಕಾಣುತ್ತದೆ. ಈ ಸುದ್ದಿ ಕೇಳಿದ ಕೆಲಹೊತ್ತಿನ ಮೇಲೆ ಅವರೇ ನನ್ನನ್ನು ನಿಮ್ಮ ಕಡೆಗೆ ಹೋಗ ಹೇಳಿ- "ಏ ನೀಲವ್ವೆ, ನಿಮ್ಮ ಒಡತಿಗೆ ಈ ಸಮಾಚಾರ ತಿಳಿಸು ಹೋಗು. ಹಾಲಿನಲ್ಲಿ ಸಕ್ಕರೆ ಬೆರಿಸಿಕೊಂಡು ಕುಡಿಯಲಿ" ಅಂದರು ತಾಯಿ."

ನೀಲವ್ವನನ್ನೊಮ್ಮೆ ನೇರವಾಗಿ ನೋಡಿ ಮನೋರಮೆ- "ಇದು ಸಂತೋಷದ ಸಮಾಚಾರವಲ್ಲವೇ ವುತ್ತೆ? ಆಗಲಿ ನಾನು ಈ ಸುದ್ದಿ ಕೇಳಿದೆನೆಂದು ಹೇಳು. ಅವಳ ನೊಂದ ಜೀವನದಿಂದ ಬಂದ ನುಡಿಗಳಿಗೆ ನಾನು ಕೋಪಿಸಿಕೊಳ್ಳುವದರಲ್ಲಿ ಯಾವ ಅರ್ಥವೂ ಇಲ್ಲ."

"ಮುಂದೆ ಹೇಗೆ ತಾಯಿ?"

"ನನಗೂ ಅದೇ ಯೋಚನೆ ನೀಲವ್ವ. ಇಂದು ನಾಳೆ ಅವರು ಬರಬಹುದು. ಆ ಮೇಲೆ ನೋಡೋಣ. ಅಚ್ಯುತರಾಯರಿಗೆ ಈ ಮಾತನ್ನು ತಿಳಿಸಬೇಕೇನೊ ನೋಡೋಣ. ಎಲ್ಲವೂ ಅವರು ಬಂದ ಮೇಲೆಯೇ. ನೀನು ಕೂಡಲೆ ಹೊರಟು ಬಿಡು. ಅವಳ ಆರೈಕೆಯಲ್ಲಿ...."

"ಅವರು ನನ್ನ ಒಡತಿಯಷ್ಟೆ ಅಲ್ಲ ತಾಯಿ. ಈಗ ಮಗಳಂತೆ ಇದ್ದಾರೆ. ನೀವು ಚಿಂತಿಸಬೇಡಿರಿ."

"ದೇವರು ನಿನಗೆ ಒಳ್ಳೇಯದನ್ನು ಮಾಡಲಿ. ಹೊರಟು ಬಿಡು" ಎಂದು ಮನೋರಮೆ ಅವಳನ್ನು ಕಳುಹಿಸಿದಳು. ಈಗ ಮತ್ತೆ ಮನೋರಮೆಯನ್ನು ಅನೇಕ ಚಿಂತೆಗಳು ಮುತ್ತಿದವು. ತಾರಾನ ಪ್ರಕೃತಿಯ ಚಿಂತೆ ಅವಳೆದುರಿಗೆ ಧುತ್ತೆಂದು ನಿಂತಿತು. ಆ ಮಕ್ಕಳನ್ನು ನೆನೆದು ಅವಳು ಕಾತರಿಸಿದಳು. ಇವುಗಳ ಜತೆಗೆ ಪತಿ ಇನ್ನೂ ಬಾರದ್ದರಿಂದ

ಹೇಗಿನ ಮಾತು ಹೇಗೊ ಎಂಬ ಇನ್ನೊಂದು ಚಿಂತೆ ಗುಡ್ಡದಂತೆ ಏರಿ ಬಂದಿತು. ಈ ಚಿಂತೆಗಳ ತಿರುಗಣಿಯಲ್ಲಿ ಸಿಲುಕಿ ಮುಂಗಾಣದೆ ಕಂಗೆಟ್ಟಳು. ವಿಶ್ವಾಸನನ್ನು ಈ ಸಂಕಟದಿಂದ ಉಳಿಸಿಕೊಳ್ಳದೆ ಹೋದದ್ದಕ್ಕೆ ಅವಳ ಹೃದಯ ಕಟುಕತೊಡಗಿತ್ತು. ತನ್ನ ಗಂಡನ ಮೇಲೆ ಬರಬಹುದಾದ ಆಪತ್ತನ್ನು ತನ್ನ ಮೇಲೆ ಹಾಕಿಕೊಂಡು ಜೇಲಿನ ಕಷ್ಟವನ್ನು ಸ್ವೀಕರಿಸಿದ ಅವನ ಮಹೋನ್ನತ ವ್ಯಕ್ತಿತ್ವದೊಡನೆ ತನ್ನ ಪತಿಯ ಹೀನಾಯವಾದ ಆಚರಣೆಯನ್ನು ತೂಗಿ ನೋಡಿದಾಗ ಅವಳ ದುಃಖ ಒತ್ತರಿಸಿ ಬಂತು. ಗೆಳೆಯನಿಗಾಗಿ ಒಬ್ಬನು ಕಷ್ಟವನ್ನಪ್ಪಿಕೊಂಡರೆ ಇನ್ನೊಬ್ಬ ಆ ಗೆಳೆತನದ ದುರ್ಲಾಭ ಪಡೆದುಕೊಂಡು ನಂಬಿಕೆಯ ಹೋಳಿ ಮಾಡಿ ಜಾರಿನಿಂತುದನ್ನು ನೆನೆದು ಅವಳ ಅಂತರಂಗ ಕುದಿಯುತ್ತಲಿತ್ತು. ಈ ಕುದಿವ ಕುಲುಮೆಯ ಮೇಲೆ ತಾರಾ ಎಳೆದ ಬರೆಯನ್ನು ನೆನೆದಾಗಲಂತೂ ಅವಳಿಗೆ ಪಂಜು ಹಚ್ಚಿದ ವೇದನೆಯಾಯಿತು. ಯಾವ ಅಪರಾಧವಿಲ್ಲದೆ ಈ ಅಪವಾದಕ್ಕೆ ಪಕ್ಕಾಗಬೇಕಾದ ಸಂದರ್ಭ ಬಂದುದನ್ನು ನೆನೆದು ಅವಳು ವಿಲಿವಿಲಿ ಒದ್ದಾಡಿದಳು. ಇದರಿಂದ ನಾನು ಹೇಗೆ ಪಾರಾದೇನು? ತಾರಾನ ಮನಸ್ಸು ಹೇಗೆ ತಿಳಿಯಾದೀತು? ವಿಶ್ವಾಸನ ಸಂಕಟ ಹೇಗೆ ಪರಿಹಾರವಾದೀತು? ಎಂದು ವಿಚಾರಿಸುತ್ತ ದಿಕ್ಕುಗಾಣದವಳಾಗಿ ದಿಗ್ಭ್ರಾಂತಳಂತೆ ಸುಮ್ಮನೆ ಸುತ್ತಲೂ ನೋಡಿದಳು. ಸುತ್ತಲೂ ಕಾರ್ಗತ್ತಲೆ ಕರಾಳವಾಗಿ ವ್ಯಾಪಿಸಿತ್ತು. ಕುಳಿತ ಕಟ್ಟೆಯಿಂದ ಮೇಲೆದ್ದ ಅವಳು ಒಳಗೆ ಸರಿದು ಬಾಗಿಲು ಹಾಕಿಕೊಂಡು ದೀಪ ಹತ್ತಿಸುವ ಗೋಜಿಗೆ ಹೋಗದೆ ನೇರವಾಗಿ ಹೋಗಿ ಕಾಟಿನ ಮೇಲೆ ಬಿದ್ದುಕೊಂಡು ಮುಳು ಮುಳು ಅತ್ತಳು. ಕಣ್ಣೀರು ಧಾರಾಕಾರವಾಗಿ ಹರಿದು ಹೋದರೂ ಅವಳ ಹೃದಯದ ಹಿಮ ಪೂರಾ ಕರಗಲಿಲ್ಲ. ಹೃದಯ ಭಾರದಿಂದ ಮನಸ್ಸಿಗೂ ದಣಿವಾಗಿ ಅವಳ ನರಗಳು ದುರ್ಬಲವಾದವೇನೋ-ಮಲಗಿದಲ್ಲಿಯೇ ಮುದುಡಿಕೊಂಡಳು. ಕಣ್ಣು ರೆಪ್ಪೆ ಭಾರವಾದಂತೆ ಅವಳಿಗೆ ತುಸು ಜಂಪು ಹತ್ತಿತು.

ಯಾರೋ ಬಾಗಿಲು ಬಡಿದ ಸಪ್ಪಳವಾಗಲು ಮನೋರಮೆ ಒಮ್ಮೆಲೇ

ಎದ್ದು ಕಣ್ಣು ತಿಕ್ಕಿಕೊಂಡು ಅಂಜುತ್ತಲೇ ದೀಪ ಹೊತ್ತಿಸಿದಳು. ಸಪ್ಪಳ ಇನ್ನೂ ಕಡಿಮೆಯಾಗಿರಲಿಲ್ಲ. ಅವಳಿಗೆ ತುಸು ಭೀತಿಯೇ ಆದರೂ ಈ ಹೊತ್ತಿನಲ್ಲಿ ಬಂದವನು ತನ್ನ ಪತಿಯೇ ಆಗಿರಬೇಕೆಂಬ ಆಶಾಂಕುರು ಮೊಳೆತುದರಿಂದ ಅವಳು ಗಟ್ಟಿಯಾಗಿ- "ಯಾರು ಬಂದ ವರು?" ಎಂದು ಕೂಗಿದಳು.

"ನಾನು ಮನು." ಮನೋರಮೆಗೆ ದನಿಯ ಪರಿಚಯ ಹತ್ತಿತು. ಅವಳು ಕೂಡಲೆ ಹೋಗಿ ಬಾಗಿಲು ತೆಗೆದಳು. ಅವಳೂಹೆ ಸತ್ಯವಾಗಿತ್ತು. ಬಂದವನು ವೆಂಕಟೇಶ. ಒಳಗೆ ಬಂದಾಗ ಅವನ ಮುಖದಲ್ಲಿ ಯಾವ ಬದಲಾವಣೆಯೂ ತೋರದಿರುವುದನ್ನು ಕಂಡು ಅವಳಿಗೆ ತುಂಬಾ ಅಚ್ಚರಿಎನ್ನಿಸಿತು. ಏನು ನಡೆವಿಲ್ಲವೆಂಬಂತೆ ಸಮಾಧಾನದಿಂದ ಬಂದ ಗಂಡನನ್ನು ಕಂಡಾಗ ಅವಳ ದಿಗಿಲು ಇನ್ನೂ ಹೆಚ್ಚಾಯಿತು. ನೇರ ವಾಗಿ ಕೋಣೆಗೆ ಹೋಗಿ ಅವನು ಸಿಗರೇಟು ಹೊತ್ತಿಸಿದ. ಇದರಿಂದ ಲಂತೂ ಅವಳ ಕೋಪ ಕಿಡಿಕಾರಹತ್ತಿತು. ಅವಳು ನೆಟ್ಟಗೆ ಕೋಣೆಗೆ ಹೋಗಿ ಗಂಡನನ್ನು ಕುರಿತು ಕೇಳಿದಳು. "ನಿಮಗೆಲ್ಲ ಗೊತ್ತಾಗಿದೆಯಲ್ಲನೆ?"

"ಈ ವ್ಯವಹಾರ ಶೂನ್ಯನ ಸಹವಾಸದಿಂದ ನನಗೆಷ್ಟು ಕೆಡುಕಾಗಿ ದೆಯೆಂಧು ಗೊತ್ತಾಗಿದೆ. ಗೊತ್ತಾಗಿ ಮಾಡುವದೇನು?"

"ವಿಶ್ವಾಸರಾಯರು ವ್ಯವಹಾರ ಶೂನ್ಯರೆ?"

"ಕೇವಲ ವ್ಯವಹಾರ ಶೂನ್ಯನಿಷ್ಟೇ ಅಲ್ಲ; ಜವಾಬುದಾರಿಯನ್ನರಿಯದ ಹೊಣೆಗೇಡಿಯಾದ ಅವಿವೇಕಿಯವನು."

"ಗೆಳೆಯನ ಗಂಡಾಂತರವನ್ನು ತನ್ನ ಮೇಲೆ ಹಾಕಿಕೊಂಡದ್ದು ಅವಿವೇಕವೆಂದು ಹೇಳುತ್ತೀರಾ?"

"ಹಾಗೆ ಮಾಡಿದ್ದರಿಂದಲೇ ಈಗ ಅನರ್ಥವಾಗಿ ಹೋಯಿತು. ಇಲ್ಲಿಯ ವಸ್ತುಗಳೆಲ್ಲ ನನ್ನವೆಂದು ಅವನು ಹೇಳಿದ್ದರೆ ಅವುಗಳನ್ನು ಮುಟ್ಟುವ ಧೈರ್ಯ ಅಧಿಕಾರಿಗಳಿಗಾಗುತ್ತಿರಲಿಲ್ಲ. ಸುಮ್ಮಸುಮ್ಮನೆ ಇಲ್ಲದ ಗೋಡೆಯನ್ನು ಮೈಮೇಲೆ ಕೆಡವಿಕೊಂಡು ನನ್ನನ್ನೂ ಹಾಳು ಮಾಡಿದ."

"ನೀವು ಕೂಡಲೆ ಬಂದು ಇದನ್ನು ಬಿಡಿಸಬೇಕಿತ್ತು."

"ಅಧಿಕಾರಿಗಳ ಮುಂದೆ ಎಲ್ಲವನ್ನೂ ಒಪ್ಪಿಕೊಂಡ ಮೇಲೆ ನಾನು ಬಂದಿದ್ದರೂ ಪ್ರಯೋಜನವಾಗುತ್ತಿರಲಿಲ್ಲ. ಅಲ್ಲದೆ ಇಂತಹ ಪ್ರಸಂಗಕ್ಕಿರಲೆಂದು ಆರು ಸಾವಿರ ರೂಪಾಯಿಗಳನ್ನೂ ಕೊಟ್ಟಿದ್ದೆ. ಮುಠ್ಠಾಳ, ಅದನ್ನು ತಿಂದು ಈ ತೊಂದರೆಯನ್ನು...."

"ಅವರು ಮುಠ್ಠಾಳರಲ್ಲ; ಶ್ರೇಷ್ಠ ಕವಿಗಳು...."

"ಕವಿಯಾಗಿರುವೆನೆಂದೇ ಅವ್ಯವಹಾರಿಯಾಗಿದ್ದಾನೆ. ಅವನನ್ನು ನಾನು ತೆಗೆದುಕೊಂಡದ್ದೇ ತಪ್ಪು. ತಾನು ಮುಣುಗಿ ನನ್ನನ್ನೂ ಮುಣುಗಿಸಿದ ಅವನಿಗಾಗಿ ಮರುಗುವದಕ್ಕಿಂತ ನನ್ನ ದುರ್ದೆಶೆಗೆ ಕಳವಳಪಡಬೇಕಾಗಿದೆ." ಒಮ್ಮೆ ಜೋರಾಗಿ ಸಿಗರೇಟನ್ನೆಳೆದು ತನ್ನಂತರಂಗವನ್ನೆಲ್ಲ ಹೊರ ಹಾಕುವಂತೆ ಹೊಗೆಬಿಟ್ಟ. ಪತಿಯ ಈ ಮಾತುಗಳನ್ನು ಕೇಳಿ ಮನೋರಮೆಯ ವಿಚಾರ ಶಕ್ತಿಯೇ ತಲೆಕೆಳಗಾಯಿತು. ಅವಳೀದೆಸೆಯಲ್ಲಿ ವಿಚಾರ ಮಾಡಿದವಳೇ ಅಲ್ಲ. ಈಗ ಹೇಗೆ ಮುಂದುವರಿಯಬೇಕೆಂಬುದೇ ಅವಳಿಗೆ ತಿಳಿಯದಾಯಿತು. ಆದರೂ ತನ್ನ ಗಂಡನ ಕೃತತ್ವ ಶಕ್ತಿಯಿಂದ ವಿಶ್ವಾಸರಾಯ ಇನ್ನೂ ಪಾರಾಗಬಹುದೆಂಬಾಶೆಯಿಂದ ಅವಳು– "ಆದ ಮಾತಿಗಾಗಿ ಚಿಂತಿಸಿ ಏನು ಪ್ರಯೋಜನ? ಈಗ ನಿಮ್ಮ ಗೆಳೆಯರನ್ನು ನೀವು ಉಳಿಸಬೇಕು. ಅವರ ಹೆಂಡತಿ, ಮಕ್ಕಳಗಾಗಿಯಾದರೂ ನೀವು ಕೃಪೆದೋರಬೇಕು."

"ಇದು ಹೇಗೆ ಸಾಧ್ಯ ಮನು? ಅವನಿಗೆ ಶಿಕ್ಷೆಯಾಗಿ ಹೋಗಿದೆ."

"ನೀವು ಮನಸ್ಸು ಮಾಡಿದರೆ ಅಸಾಧ್ಯವಾವುದು? ನೀವು ಅವರಿಗೆ ಕೊಟ್ಟ ಹಣವನ್ನು ಅವರು ನನಗೆ ಆ ದಿನವೇ ಕೊಟ್ಟಿದ್ದಾರೆ. ಆ ಹಣದ ಉಪಯೋಗವಾಗುವದಾದರೆ...."

ಏಕೋ ವೆಂಕಟೇಶನ ಕಣ್ಣಲ್ಲಿ ಮಿಂಚು ಮೂಡಿತು, ಮುಖ ತುಸು ಅಗಲವಾಯಿತು- "ಪ್ರಯತ್ನವನ್ನೇನೊ ಮಾಡಬಹುದು. ಆದರೆ ಸಧ್ಯ

ನನ್ನ ಹಣವೆಲ್ಲ ವ್ಯವಹಾರದಲ್ಲಿ ತೊಡಗಿದೆ. ಈ ಕೆಲಸ ಸಾಧಿಸಲು ಅಪಾರ ಹಣ ಸುರಿಯಬೇಕಾಗುತ್ತದೆ. ನಾನೆಲ್ಲಿಂದ ತರಲಿ ಹೇಳು."

ಮನೋರಮೆ ಪತಿಯ ಮಾತು ಕೇಳಿ ನೇರವಾಗಿ ಒಳಗೆ ಹೋಗಿ ಆರು ಸಾವಿರ ರೂಪಾಯಿಗಳ ಕಟ್ಟನ್ನು ಗಂಡನ ಕೈಗಿತ್ತು ಹೇಳಿದಳು— "ಈ ಹಣದಿಂದ ಅವರನ್ನು ಬಂಧ ಮುಕ್ತ ಮಾಡಿಸಿರಿ"

ವೆಂಕಟೇಶ ಆಶೆಬುರುಕನಂತೆ ಆ ಹಣ ತೆಗೆದುಕೊಂಡು— "ಈ ಹಣದಿಂದ ಬೇಕಾದ ಕೆಲಸ ಸಾಧಿಸಬಹುದು ಮನು" ಎಂದು ಎದ್ದು ನಿಂತು ಹೊರಡಲು ಸಿದ್ಧನಾದ.

"ಈ ಅಪರಾತ್ರಿಯಲ್ಲಿಯೇ ಹೋಗಬೇಕೆ?"

"ಈ ವ್ಯವಹಾರಕ್ಕೆ ಅನುಕೂಲವಾದ ವೇಳೆಯಿದು ಮನು." ಮನೋರಮೆ ಅವನನ್ನು ತಡೆಯಲಿಲ್ಲ.

೧೮

ಒಂದೆರಡು ದಿನಗಳಲ್ಲಿಯೇ ವಿಶ್ವಾಸನ ಬಿಡುಗಡೆಯಾಗಬಹುದೆಂದು ತಿಳಿದುಕೊಂಡಿದ್ದ ಸರಳ ಸ್ವಭಾವದ ಮುಗ್ಧ ಮನೋರಮೆ ದಿನದಿನವೂ ಆಶಾಪೂರ್ಣಳಾಗಿ ಅವನ ಬರವನ್ನು ನಿರೀಕ್ಷಿಸುತ್ತಿರುವದು ನಿರರ್ಥಕ ವಾಯಿತು. ದಿನಗಳುರುಳುತ್ತಿರುವಂತೆ ಅವಳ ಚಡಪಡಿಕೆ ಹೆಚ್ಚಾಗುತ್ತಿತ್ತೇ ವಿನಾ ವಿಶ್ವಾಸನ ಸುದ್ದಿಯೇ ಬಾರದಾಯಿತು. ಒಂದು ತಿಂಗಳು ಕಳೆ ಯಿತು. ಯಾವ ಸುದ್ದಿಯೂ ಇಲ್ಲ. ಎರಡನೆಯ ತಿಂಗಳು ಜಾರಿತು. ಅವಳು ಕಂಗೆಟ್ಟಳು. ಮೂರನೆಯ ತಿಂಗಳು ಹಿಂದೆ ಸರಿದ ಮೇಲಂತೂ ಅವಳ ಹೃದಯದಲ್ಲಿ ನಿರಾಶೆಯೇ ತುಂಬಿಕೊಂಡಿತು. ಈ ದಿನಗಳಲ್ಲಿ ಪತಿಯನ್ನು ಕಾಣಬೇಕೆಂದು ಅವಳು ಮಾಡಿದ ಪ್ರಯತ್ನಗಳೆಲ್ಲ ನಿಷ್ಫಲ ವಾಗಿ ದಿಕ್ಕೇ ತೋಚದಾಯಿತು. ಪತಿಯ ಈ ವಂಚನೆಯಿಂದ ಅವಳು ಪೂರಾ ತತ್ತರಿಸಿದಳು. ಈ ಆಘಾತವನ್ನು ಸಹಿಸುವದು ಅವಳಿಗೆ ಅಸಾಧ್ಯವಾಗಿ ಕೂಳು ರುಚಿಸದಾಯಿತು. ನಿದ್ರೆ ಹಾರಿಹೋಗಿ ಸರ್ವಾಂ ಗಕ್ಕೆಲ್ಲ ಪಂಜು ಹಚ್ಚಿದಂತಾಗಿ ಅವಳ ಮೊಗದ ಕಳೆ ಬಾಡಿತು; ದೇಹ

ಶಾಂತಿ ಕವರಿತು; ಬಲ ಕುಸಿಯಿತು. ಅವಳು ಇಡಿಯ ದಿನವೆಲ್ಲ ಹಾಸಿಗೆಯ ಮೇಲೆ ಬಿದ್ದುಕೊಂಡೇ ಕಳೆದಳು. ನಿದ್ರಾಹಾರಗಳನ್ನು ತೊರೆದ ಅವಳ ಪರಿಸ್ಥಿತಿ ಭೀಕರವಾಯಿತು. ವಂಚನೆಯ ಆಘಾತದ ಕರಾಳ ಹಸ್ತ ಅವಳ ದೇಹದ ಮೇಲೆ ನೆರಳು ಚಾಚಿತು. ಆ ನೆರಳು ಇನ್ನೊಂದು ನೆರಳಿನ ಮೇಲೆ ಬಿದ್ದಂತೆ ಅವಳ ದೇಹಸ್ಥಿತಿಯಾಯಿತು.

ಅವಳ ಈ ಪರಿಸ್ಥಿತಿಯಲ್ಲಿ ಸಮಾಧಾನ ಮಾಡುವ ವ್ಯಕ್ತಿ ನೀಲವ್ವನನ್ನು ಬಿಟ್ಟರೆ ಯಾರೂ ಇರಲಿಲ್ಲ. ಮೊದಮೊದಲು ಅವಳಿಗೆ ತನ್ನ ಒಡತಿಯ ವೇದನೆಯ ಬಗ್ಗೆ ಅಸ್ಪಷ್ಟ ಕಲ್ಪನೆಯಾಗಿದ್ದರೂ ಅದಕ್ಕೆ ಒಡೆಯರೇ ಜವಾಬುದಾರರೆಂದು ಅವಳು ನಂಬಿರಲಿಲ್ಲ. ಸುಮ್ಮನೆ ಏನಾದರೊಂದು ಸಮಾಧಾನ ಹೇಳಿ ವೆಂಕಟೇಶನನ್ನು ಸಮರ್ಥಿಸುತ್ತಿದ್ದಳು. ಆದರೆ ಈಚೆಗೆ ಊರಲ್ಲಿ ಹೊರಟ ಗುಲ್ಲನ್ನು ಕೇಳಿದ ಮೇಲೆ ಅವಳೂ ಹೌಹಾರಿದಳು. ಅದಾವುದೊ ಒಂದು ದೊಡ್ಡ ವ್ಯವಹಾರದಲ್ಲಿ ತನ್ನ ಒಡೆಯ ಪೂರಾ ಮುಳುಗಿ ಹೋಗಿದ್ದಾನೆಂದೇ ಆ ಗುಲ್ಲಿನ ಮತಿತಾರ್ಥವಾಗಿತ್ತು. ಕಳ್ಳಪೇಟೆಯಲ್ಲಿ ಕಳೆದುಕೊಂಡುದನ್ನು ಸಟ್ಟಾ ವ್ಯಾಪಾರದಲ್ಲಿ ಪಡೆಯಬೇಕೆಂದು ತನ್ನಲ್ಲಿದ್ದ ಎಲ್ಲವನ್ನೂ ಒಡ್ಡಿದ ಒಡೆಯ ನಿರ್ಗತಿಕನಾಗಿಬಿಟ್ಟನೆಂದು ನಂಬುವದೇ ಅವಳಿಗೆ ಕಠಿಣವಾಗಿತ್ತು. ಆದರೆ ಇದು ಖಚಿತವೆನ್ನಿಸಿದಾಗ ಅವಳಿಗೆ ಮನೋರಮೆಯ ಪರಿಸ್ಥಿತಿ ತೀರಾ ಶೋಚನೀಯವಾಗಿ ತೋರಿತು. ಹೂವು ಮಾರಿದ ಸ್ಥಳದಲ್ಲಿ ಹುಲ್ಲು ಮಾರಲು ಬರಲಾರನೆಂದೇ ಅವಳ ಸ್ಪಷ್ಟ ಅಭಿಪ್ರಾಯವಾಗಿತ್ತು. ಆದರೆ ಈ ದುರ್ವಾರ್ತೆಯನ್ನು ಒಡತಿಗೆ ಹೇಗೆ ಹೇಳಬೇಕೆಂಬುದೇ ಅವಳ ಸಮಸ್ಯೆ. ಇಂದಿಲ್ಲ ನಾಳೆ ಇದು ಒಡತಿಗೆ ಗೊತ್ತಾಗಲೇಬೇಕು. ಹಾಗೆ ಗೊತ್ತಾದ ಮೇಲೆ ಅವಳ ಪರಿಸ್ಥಿತಿಯೇನು? ಅದನ್ನವಳು ಹೇಗೆ ಸಹಿಸಬಹುದು? ಎಂಬುದು ಅವಳ ಚಿಂತೆಯೂ ಆಯಿತು. ಏನೇ ಆಗಲಿ ಇದನ್ನು ಹೇಳಬಾರದೆಂದು ಅವಳು ದಿನಗಳನ್ನು ಮುಂದೂಡುತ್ತಿದ್ದಳು. ಆ ದಿನ ಅವಳು ಮನೆಗೆ ಬಂದಾಗ ಮನೋರಮೆ ಇನ್ನೂ ಊಟ ಮಾಡದೆ ಸುಮ್ಮನೆ ಬಿದ್ದುಕೊಂಡಿದ್ದಳು. ಸಂಜೆಯ ಮಬ್ಬು ಮಾಯವಾಗಿ ಕತ್ತಲು ತೇಲಿಬರುತ್ತಿದ್ದರೂ ಮನೋರಮೆ ಇನ್ನೂ ಊಟ ಮಾಡಿರಲಿಲ್ಲ.

ಮನೆಯಲ್ಲ ಕತ್ತಲು ತುಂಬಿದ್ದರೂ ಇನ್ನೂ ದೀಪ ಹಚ್ಚಿರಲಿಲ್ಲ. ನೀಲವ್ವ ಒಳಗೆ ಬಂದು ದೀಪ ಹಚ್ಚಿದಳು. ಒಡತಿ ಮುದುಡಿಯಾಗಿ ಬಿದ್ದಿರುವದನ್ನು ನೋಡಲಾರದೆ ಸಂಕಟದಲ್ಲಿ– "ಈ ದಿನ ಊಟ ಮಾಡಲೇಯಿಲ್ಲವೆ ತಾಯಿ?"

"ಯಾವ ಸಂಭ್ರಮದಿಂದ ನಾನು ಊಟ ಮಾಡಬೇಕು ಹೇಳು ನೀಲವ್ವ? ಕೈಹಿಡಿದವರೇ ನನ್ನನ್ನು ವಂಚಿಸುವಾಗ ನಾನು ಬದುಕುವದರಲ್ಲಿ ಯಾವ ಅರ್ಥವಿದೆ? ಈ ಜೀವ ಹೀಗೆ ತೊಳಲಾಡುತ್ತ ಬಿದ್ದು ಹೋಗಬೇಕು...."

"ಹಾಗನ್ನಬಾರದು ತಾಯಿ. ಯಜಮಾನರ ತೊಂದರೆ ತಿಳಿಯದೆ ಇಲ್ಲದ ಕಲ್ಪನೆ ಹಾಕಿಕೊಳ್ಳುವದರಲ್ಲಿ ಯಾವ ಅರ್ಥವೂ ಇಲ್ಲ. ಅವರು ನಿಮ್ಮನ್ನು ವಂಚಿಸಬೇಕೆಂದು ಸುಳ್ಳು ಹೇಳಿರಲಾರರು ತಾಯಿ. ಪರಸ್ಥಿತಿ ಹೀಗೆ ಮಾಡಿರಬೇಕು."

"ಈ ಪರಸ್ಥಿತಿ ಎಷ್ಟು ಜನರನ್ನು ಗೋಳಿಗೀಡು ಮಾಡಿರುವದು ಗೊತ್ತೆ? ವಿಶ್ವಾಸರಾಯರು ಜೇಲಿನಲ್ಲಿ ಕೊಳೆಯುತ್ತಿರುವರು. ಅವರ ಪತ್ನಿ ಕಠೋರ ಜೀವನ ಸಾಗಿಸಿ ಕುದಿಯುತ್ತಿದ್ದಾಳೆ. ತುಂಬಾ ಗರ್ಭಿಣಿಯಾಗಿ ಅವಳು ಪಡುತ್ತಿರುವ ಕಷ್ಟ ಯಾರ ಪ್ರಸಾದದಿಂದ ಹೇಳು? ಅವರನ್ನು ಉಳಿಸಿದ ಪುಣ್ಯಕ್ಕಾಗಿ ಅಲ್ಲವೆ? ಆ ಮುದ್ದು ಮಕ್ಕಳು ಪಡುತ್ತಿರುವ ವನವಾಸ ಯಾರ ದಯೆಯಿಂದ ಹೇಳು ನೋಡೋಣ? ನಾನು ಬದುಕಬಾರದು ನೀಲವ್ವ...." ಮನೋರಮೆಯ ಕಣ್ಣೊಳಗಿಂದ ಧಾರಾಕಾರವಾಗಿ ನೀರು ಹರಿಯುತ್ತಲಿತ್ತು. ಒಡತಿಯ ಈ ಅನುಕಂಪವನ್ನು ಕಂಡು ನೀಲವ್ವನಿಗೆ ಉಗುಳು ನುಂಗುವಂತಾಯಿತು. ಅವಳು ಗದ್ಗದಿತಳಾಗಿ– "ಅದನ್ನು ನೆನೆದರೆ ನನಗೂ ಸಂಕಟವಾಗುತ್ತದೆ. ಏನು ಮಾಡುವದಿದೆ ತಾಯಿ? ಈಚೆಗೆ ತಾರಾತಾಯಿಯ ಆರೋಗ್ಯವೂ ಕೆಡಹತ್ತಿದೆ. ಈ ಗರ್ಭ ಹೊತ್ತುಕೊಂಡು ಅವಳು ಹೇಗೆ ಸುಸೂತ್ರವಾಗಿ ಪಾರಾಗುವಳೋ ಎಂಬ ಚಿಂತೆ ನನ್ನನ್ನು ಕಾಡುತ್ತಿದೆ. ನಿನ್ನಿನದಿನವಂತೂ ಅವಳು ರಂಬಾಟವನ್ನೇ ಮಾಡಿದರು."

"ಯಾವ ಕಾರಣಕ್ಕಾಗಿ ನೀಲವ್ವ?" ಮನೋರಮೆ ಕಾತರದಿಂದ ಕೇಳಿದಳು.

"ಮುಂದಿನ ಸೋಮವಾರ ವಿಶ್ವಾಸರಾಯರು ಜೇಲಿಗೆ ಹೋಗಿ ನಾಲ್ಕು ತಿಂಗಳು ಮುಗಿಯುವವಂತೆ. ಈ ಅವಧಿ ಮುಗಿದ ಮೇಲೆ.... ದಂಡಕ್ಕಾಗಿ ಮತ್ತೆ ಎರಡು ವರುಷ ಶಿಕ್ಷೆ ಅನುಭವಿಸಬೇಕಲ್ಲ. ಎಂದು ಗೋಳಾಡಿದರು ತಾಯಿ." ನೀಲವ್ವನ ಮಾತಿನಿಂದ ಮನೋರಮೆ ಚಟಕ್ಕನೆ ಹಾಸಿಗೆಯ ಮೇಲೆ ಎದ್ದು ಕುಳಿತಳು. ಆವಳಿಗೆ ಒಂದು ರೀತಿಯ ಆವೇಶವೇ ಬಂದಂತಾಗಿ ನೀಲವ್ವನಿಗೆ ಕೇಳಿದಳು.– "ನೀಲವ್ವ ಮುಂದಿನ ಸೋಮವಾರವೇ ನಾಲ್ಕು ತಿಂಗಳು ಮುಗಿಯುವದು ಖಂಡಿತವಷ್ಟೆ?"

"ತಾರಾತಾಯಿ ಲೆಕ್ಕವನ್ನೇ ಇಟ್ಟಿರುವರು ತಾಯಿ. ದಿನಗಳನ್ನು ಎಣಿಸುವದು ನಿತ್ಯಕ್ರಮವಾಗಿದೆ. ಅವರು ಹೇಳಿದಮಾತು ಸತ್ಯವಾಗಿರಬೇಕು."

ಮನೋರಮೆ ಆ ಮಾತನ್ನು ಕೇಳಿ ತನ್ನ ಕೊರಳ ಸರವನ್ನು ತೆಗೆದು ನೀಲವ್ವನ ಕೈಗೆ ಕೊಡುತ್ತ– "ಕೋಣೆಯಲ್ಲಿಯ ದೊಡ್ಡ ಟ್ರಂಕಿನಲ್ಲಿ ಒಂದು ಚಿಕ್ಕ ಪೆಟ್ಟಿಗೆ ಇದೆ ನೀಲವ್ವ. ಈ ಕೀಲಿ ಕೈಯಿಂದ ಆ ಟ್ರಂಕು ತೆಗೆದು ಆ ಚಿಕ್ಕ ಪೆಟ್ಟಿಗೆ ತೆಗೆದುಕೊಂಡು ಬಾ ಎಂದು ಹೇಳಿದಳು. ಚಣಾರ್ಧಕ್ಷಳಿಂದ ನೀಲವ್ವನಿಗೆ ಒಡತಿಯ ಉದ್ದೇಶ ತಿಳಿಯಿತಾದರೂ ತನ್ನ ಮನೋಭಾವವನ್ನು ಹತ್ತಿಕ್ಕಿಕೊಂಡು ಆ ಪೆಟ್ಟಿಗೆ ತಂದುಕೊಟ್ಟಳು. ಮನೋರಮೆ ಅದನ್ನು ತೆರದು ಒಳಗಿನ ಆಭರಣಗಳನ್ನೂ ಕೆಲವು ರೂಪಾಯಿಗಳ ನೋಟುಗಳನ್ನೂ ಹಾಸಿಗೆಯ ಮೇಲೆ ಸುರುವಿದಳು. ಹಿಂದಕ್ಕೆ ಅವಳು ವಿಶ್ವಾಸರಾಯನಿಗೆ ಕೊಡಬೇಕೆಂದಿದ್ದ ಚಿಕ್ಕ ಪೆಟ್ಟಿಗೆಯೇ ಅದಾಗಿತ್ತು.– "ನೀಲವ್ವ ನಿನ್ನಿಂದ ಒಂದು ಕೆಲಸವಾಗಬೇಕು. ಯಾಕೆ ಮಾತನಾಡದಿದ್ದೀಯೆ. ನೀನೀಗಲೇ ಹೋಗಿ ನಮ್ಮ ವಕೀಲರನ್ನು ಕರೆದು ತಾ"

"ಯಾವ ಕೆಲಸಕ್ಕಾಗಿ ತಾಯಿ?"

"ಇಲ್ಲಿ ನೋಡು–ಈ ಆಭರಣಗಳನ್ನೆಲ್ಲ ಮಾರಿದರೆ ವಿಶ್ವಾಸರಾಯರಿಗಾದ ದಂಡದಷ್ಟು ಹಣ ಬರಬಹುದೆಂದು ತೋರುತ್ತದೆ. ಈ ಹಣವನ್ನು ತೆತ್ತುಬರಲು ವಕೀಲರು ಬೇಡವೆ?" ನೀಲವ್ವ ಹನಿದುಂಬಿದಳು.–
"ಹುಚ್ಚಿ, ಈ ಹಣ ವಿಶ್ವಾಸರಾಯರಿಗೇ ಮೀಸಲಾಗಿದೆ ನೀಲವ್ವ...."

"ಬೇಡ ತಾಯಿ, ಈ ಹಣ ನಿಮಗೆ ಅವಶ್ಯವಾಗಿದೆ...."

"ಸುಮ್ಮನೆ ಹುಚ್ಚಳಂತೆ ಮಾತಾಡಬೇಡ. ಹೇಳಿದಷ್ಟು ಕೇಳು."

"ಅಲ್ಲ ತಾಯಿ, ನಾನು ಬೇಕಾದರೆ ನಾಳೆಗೇ ಅಚ್ಯುತರಾಯರೆಡೆಗೆ ಹೋಗಿ ಬರುತ್ತೇನೆ. ಅವರು ತಮ್ಮನನ್ನು ಉಳಿಸಿಕೊಳ್ಳಬಹುದು. ಈ ಹಣ.... ಈ ಆಭರಣ ನಿನ್ನಲ್ಲಿಯೆ ಇರಲಿ."

"ನನಗೆ ಹಣದ ಅವಶ್ಯಕತೆ ಇಲ್ಲ ನೀಲವ್ವ."

"ಬಹಳವಾಗಿದೆ ತಾಯಿ. ನಿಮಗೆ ಗೊತ್ತಿಲ್ಲ."

"ನನಗೆಲ್ಲವೂ ಗೊತ್ತಿದೆ ಸುಮ್ಮನೆ ಹೋಗು."

"ತಾಯಿ...." ನೀಲವ್ವ ಬಿಕ್ಕಳಿಸಿದಳು.

"ನಿನಗೆ ಮನಸ್ಸಿಲ್ಲದಿದ್ದರೆ ಬಿಟ್ಟು ಬಿಡು. ಸುಮ್ಮನೆ ಗೋಳಾಡಬೇಡ. ವಕೀಲರ ಮನೆ ನಾನು ನೋಡಿಲ್ಲವೆಂದು ತಿಳಿದುಕೊಂಡೆಯಾ?"

ನೀಲವ್ವನಿಗೆ ತಡೆಯದಾಯಿತು. ಇಷ್ಟು ದಿನ ಹುದುಗಿಸಿಟ್ಟ ಮಾತನ್ನು ಹೇಳದೆ ಗತ್ಯಂತರವಿಲ್ಲದಾಯಿತು. ಅವಳು ಕಣ್ಣೊರಿಸಿಕೊಂಡು– "ತಾಯಿ, ಒಂದು ಮಾತನ್ನು ಹೇಳುತ್ತೇನೆ. ತಾವು ಸಹಿಸಿಕೊಳ್ಳಬೇಕು. ಈ ಮಾತು ಈಗಾಗಲೆ ಊರಲ್ಲಿ ಜನಜನಿತವಾಗಿದೆ. ದೊಡ್ಡ ಸಾಹುಕಾರರು ಯಾವದೋ ವ್ಯವಹಾರದಲ್ಲಿ ಎಲ್ಲವನ್ನೂ ಕಳೆದುಕೊಂಡಿದ್ದಾರಂತೆ. ಅವರು ಇಲ್ಲಿಗೆ ಬಾರದಿರುವದಕ್ಕೆ ಅದೇ ಕಾರಣ. ಅವರು ತುಂಬಾ ಜಾಣರು ತಾಯಿ. ಈಗ ಕಳೆದುಕೊಂಡಿದ್ದನ್ನು ಮತ್ತೆ ಗಳಿಸಿಕೊಳ್ಳಬಹುದು. ಹೀಗಿರುವಾಗ ಈ ಹಣ...." ಮನೋರಮೆಯ ಹೃದಯಕ್ಕೆ ಚೂರಿಯಿಂದ ತಿವಿದ ಹಾಗಾಯಿತು. ಅವಳೊಮ್ಮೆ ನೀಲವ್ವನನ್ನು ನೇರವಾಗಿ

ನೋಡಿದಳು.– "ಸಧ್ಯ ನಿಮ್ಮಲ್ಲಿಯೇ ಇರಲಿ ತಾಯಿ. ನಾಳೆ ನಿಮ್ಮೂರಿಗೆ ಹೋಗಿ ತಂದೆಯವರನ್ನು ಕರೆದುಕೊಂಡು ಬರುತ್ತೇನೆ. ಅವರೆಲ್ಲವನ್ನೂ ಸರಿಪಡಿಸಬಹುದು. ಈಗ ಬಂದ ಆಪತ್ತು ಸರಿ ಹೋಗಬಹುದು. ಅಲ್ಲಿಯ ವರೆಗಾದರೂ...."

ಮನೋರಮೆಯ ಕಣ್ಣುಗಳೆದುರು ಇದುವರೆಗೆ ಢಾಳವಾಗಿ ನಿಂತ ವಿಶ್ವಾಸನ ಮೂರ್ತಿಯ ಮೇಲೆ ಒಮ್ಮೆಲೇ ಮುಸುಕೆಳೆದಂತಾಯಿತು. ಆ ಮೂರ್ತಿ ಮಾಯವಾಗಿ ಅದರ ಸ್ಥಳದಲ್ಲಿ ವೆಂಕಟೇಶನ ಆಕೃತಿ ಕರುಣಾ ಜನಕವಾಗಿ ತೋರಿತು. ಅವಳ ಜೀವ ಹಿಂಡಿದಂತಾಗಿ ಕಣ್ಣೀರು ಕಾಲುವೆ ಯಾಗಿ ಹರಿಯಲಾರಂಭಿಸಿತು.– "ನೀಲವ್ವ....ನೀಲವ್ವ...." ಎಂದು ಮನೋ ರಮೆ ಒಮ್ಮೆಲೇ ಚೀರಿದಳು.

"ಹೀಗೆ ಧೈರ್ಯ ಬಿಟ್ಟರೆ ಹೇಗೆ ತಾಯಿ?"

"ನನ್ನ ಧೈರ್ಯ ಹಾಳಾಗಲಿ. ಅವರು ಹೋಗಿರುವದಾದರೂ ಎಲ್ಲಿಗೆ ನೀಲವ್ವ?"

"ನೀವು ಚಿಂತಿಸಬೇಡಿರಿ ತಾಯಿ. ಅವರು ಎಲ್ಲಿಗೆ ಹೋಗುತ್ತಾರೆ. ಇನ್ನೊಂದು ವ್ಯವಹಾರವನ್ನು ಗೆದ್ದುಕೊಂಡು ಮತ್ತೆ ಬಂದೇ ಬರುತ್ತಾರೆ. ದೇವರು ಎಲ್ಲವನ್ನೂ ಒಳಿತು ಮಾಡುತ್ತಾನೆ ತಾಯಿ." ನೀಲವ್ವನ ಮಾತಿನಿಂದ ಮನೋರಮೆಗೆ ಯಾವ ಸಮಾಧಾನವೂ ಆಗಲಿಲ್ಲ. ಅವಳ ಅಂತರಾಳದಲ್ಲಿ ಯಾವದೋ ಅಸಹ್ಯವಾದ ದನಿ ತೆರೆತೆರೆಯಾಗಿ ತೇಲಿ ಬರುತ್ತಲಿತ್ತು. ಅವಳಿಗೆ ತನ್ನ ಗಂಡಾಂತರದ ಅರಿವಾಗಿ ಮೊದಲೇ ಅಶಕ್ತವಾದ ನರಗಳ ಚೇತನೆಯೇ ಉಡುಗಿದಂತಾಗಿ ಅವಳು ಕುಳಿತಲ್ಲಿ ಒರಗಿ ಬಿಟ್ಟಳು.– "ನೀವು ವಿಶ್ರಾಂತಿ ತೆಗೆದುಕೊಳ್ಳಬೇಕು ತಾಯಿ."

"ನೀಲವ್ವ, ನನ್ನ ಪಾಡಿಗೆ ನನ್ನನ್ನು ಬಿಟ್ಟು ಹೋಗು. ನನಗೆ ಏಕಾಂತ ಬೇಕಾಗಿದೆ."

ನೀಲವ್ವ ಹೆದರಿದಳು. ಒಡತಿಯನ್ನು ಈ ಮನೋಭಾವದಲ್ಲಿ ಬಿಟ್ಟು ಹೋಗುವದು ಸಾಧ್ಯವಿಲ್ಲವೆಂದು ಅವಳು ನಿರ್ಧರಿಸಿದಳು.– "ನಾನು ಹೋಗುವದು ಹೇಗೆ ತಾಯಿ?"

"ಯಾಕೆ ನನಗಾಗಿ ಹೆದರಿದೆಯಾ?"

"ಇಲ್ಲ ತಾಯಿ. ಈಗ ಸಾಕಷ್ಟು ಕತ್ತಲಾಗಿದೆ. ನಾನೊಬ್ಬಳೇ ಹೇಗೆ ಹೋಗುವದು?" ಮನೋರಮೆ ಮಾತನಾಡಲಿಲ್ಲ. ಸುಮ್ಮನೆ ಬಿದ್ದುಕೊಂಡಿದ್ದಳು. ಆರಾತ್ರಿ ಅವರಿಬ್ಬರೂ ಕಣ್ಣಿಗೆ ಕಣ್ಣು ಹಚ್ಚಲಿಲ್ಲ. ಮನೋರಮೆ ಆಗಾಗ ಎದ್ದು ಕುಳ್ಳಿರುತ್ತಿದ್ದಳು; ಮತ್ತೆ ಮಲಗುತ್ತಿದ್ದಳು. ಹಾಸಿಗೆಯ ಮೇಲೆ ಚಲ್ಲಾಪಿಲ್ಲಿಯಾಗಿ ಬಿದ್ದ ಆಭರಣಗಳನ್ನು ದಿಟ್ಟಿಸಿ ನೋಡುವಳು. ಯಾವದೋ ನಿರ್ಧಾರಕ್ಕೆ ಬಂದಂತೆ ಗೋಣು ಹಾಕುವಳು. ಇವೆಲ್ಲವನ್ನೂ ನೋಡುತ್ತಿರುವಾಗ ಚೇಳು ಕಟುಕಿದಂತಾಗುತ್ತಿತ್ತು ನೀಲವ್ವನಿಗೆ. ಒಮ್ಮೆ ಮನೋರಮೆ ಗುಣುಗುತ್ತಲೇ ಎದ್ದಳು.- "ಈ ಹಣ ನನ್ನದಲ್ಲ. ಇದನ್ನು ಇಟ್ಟುಕೊಳ್ಳುವದು ಸ್ವಾರ್ಥ. ನನ್ನ ವರ ಮರ್ಯಾದೆಗಾದರೂ ನಾನಿವನ್ನು ಸಲ್ಲಿಸಬೇಕು....ಆದರೆ? ....ನಾನೀ ದಿನ ದರಿದ್ರಳು....ಈ ಹಣ....ಥೂ....ಹೀನ ವಿಚಾರ...." ಎನ್ನುತ್ತ ಆ ಆಭರಣಗಳನ್ನೆಲ್ಲ ಚಿಕ್ಕ ಪೆಟ್ಟಿಗೆಯಲ್ಲಿ ತುಂಬಿದಳು; ಅದನ್ನು ತಲೆದಿಂಬಾಗಿಟ್ಟುಕೊಂಡು ಒರಗಿದಳು. ಒರಗಿದಂತೆಯೇ ಮತ್ತೆ ಮೇಲಕ್ಕೆದ್ದಳು. ಹಾಸಿಗೆಯ ಕೆಳಗಿಳಿದು ಎಡೆಯಾಡಲಾರಂಭಿಸಿದಳು. ದಣಿವಾದಂತೆ ಮತ್ತೆ ಒರಗಿದಳು. ಹೀಗೆ ಇಡೀರಾತ್ರಿ ಮನೋರಮೆ ಹೊಯ್ದು ಹೋಳಿಗೆಯಂತೆ ಬೆಂದು ಹೋದಳು.

•

"ಆಯ್ಯೋ ಬೆಳಕು ಬರಬಾರದೆ? ಎಲ್ಲಿದೆ ಬೆಳಕು?" ಎಂದೊಮ್ಮೆ ಅವಳು ನುಡಿದಾಗ ಕಿಟಕಿಯ ಮಾರ್ಗವಾಗಿ ಮುಂಜಾವಿನ ಹೊಂಬೆಳಕಿನ ಮಂದ ಕಿರಣಗಳು ಮೂಡಿ ಬಂದಂತೆನ್ನಿಸಿತು. ಬೇಗಾಗಿದ್ದು ನಿಜ. ಆದರೆ ಮನೋರಮೆಯ ಹೃದಯವನ್ನು ಕತ್ತಲೆಯೇ ಆಕ್ರಮಿಸಿತ್ತು. ಅಲ್ಲಿ ಬೆಳಕು ಮೂಡಿ ಬರಬೇಕಾಗಿತ್ತು ಇನ್ನೂ ಮುಂಜಾವಿನ ಕೋಳಿ ಕೂಗಿದಾಗ ನೀಲವ್ವ ಸುಮ್ಮನೆ ಮೈಮುರಿಸುಕೊಂಡು ಎದ್ದು ಕುಳಿತಾಗ ಮನೋರಮೆ ಕಿಟಕಿಯ ಮಾರ್ಗವಾಗಿ ಬಯಲನ್ನೇ ನಿರೀಕ್ಷಿಸುತ್ತಿದ್ದಳು. ಅವಳ ಕಣ್ಣಿಗೆ ಜೀವನವೇ ಬಯಲಾದಂತೆ ತೋರಿತೇನೊ.

೧೯

ಎದ್ದು ಕುಳಿತ ನೀಲವ್ವನನ್ನು ನೋಡುತ್ತಲೇ ಮನೋರಮೆಯ ದುಃಖ ಒತ್ತರಿಸಿ ಬಂತು. ಇಡೀ ರಾತ್ರಿ ಒಬ್ಬಂಟಿಗಳಾಗಿ ಅನುಭವಿಸಿದ ದುಗುಡದ ಹಿಮ ಆವಳ ಹೃದಯಾಂತರಾಳದಲ್ಲಿ ಗಡ್ಡೆಗಟ್ಟಿತು. ಈಗದು ಕರಗಿ ಕಣ್ಣೀರ ಮಾರ್ಗವಾಗಿ ರಭಸದಿಂದ ಹರಿಯಿತು. ಪತಿಯ ಗತಿಯನ್ನು ನೆನೆದಾಗ ಆವಳಲ್ಲಿ ಇಲ್ಲದ ಭೀತಿಯುಂಟಾಗಿ ಅವನನ್ನು ಕೂಡಲೆ ಕಾಣುವ ಹಂಬಲ ಹಿರಿದಾಯಿತು. ಆವಳು ಗದ್ಗದಿತಳಾಗಿ– "ಅವರ ಜೀವಕ್ಕೆ ಯಾವ ಅಪಾಯವೂ ಇಲ್ಲವಷ್ಟೇ ನೀಲವ್ವಾ?" ಎಂದು ಭಯ ಶಂಕಿತಳಾಗಿ ಕೇಳಿದಳು.

"ಏನು ಮಾತಿದು ತಾಯಿ? ಅವರಿಗೇನಾಗುತ್ತದೆ. ನೀವು ಸುಮ್ಮನೆ ಚಡಪಡಿಸುತ್ತಿದ್ದೀರಿ. ವ್ಯವಹಾರದಲ್ಲಿ ಏನೆಲ್ಲವೂ ನಡೆದು ಹೋಗುತ್ತದೆ. ಆದನ್ನು ನಿಸ್ತರಿಸುವದು ಸಾಹುಕಾರರಿಗೆ ಅಸಾಧ್ಯವಾದುದೇನಲ್ಲ ತಾಯಿ."

"ಅವರು ಕಳೆದುಕೊಂಡದ್ದು ಸಟ್ಟಾ ವ್ಯಾಪಾರದಲ್ಲಿ ಅಂದೆಯಲ್ಲವೆ ನೀಲವ್ವ?" ಮನೋರಮೆ ತರಗೆಲೆಯಂತೆ ನಡುಗುತ್ತ ಕೇಳಿದಳು.

"ಜನ ಹಾಗೆ ಆಡಿಕೊಳ್ಳುತ್ತಿದ್ದಾರೆ."

"ಅಂದಮೇಲೆ ನಮ್ಮದೆಲ್ಲವೂ ಮುಗಿದಂತಾಯಿತು ನೀಲವ್ವ"

"ಒಳಿತೆನ್ನು ತಾಯಿ. ನಮ್ಮ ಸಾಹುಕಾರರು ಹೇಡಿಗಳಲ್ಲ."

ಆ ಕ್ಷಣ ಮನೋರಮೆಯ ಕಣ್ಣೆದುರಿಗೆ ಬಹಳ ಹಿಂದಿನ ಚಿತ್ರವೊಂದು ತೇಲಿ ಬಂತು. ಆವಳ ತಂದೆಯ ಗೆಳೆಯನೋರ್ವ ವ್ಯಾಪಾರದಲ್ಲಿ ಕುಬೇರನಾಗಿದ್ದ. ಅವನೊಮ್ಮೆ ಇಂತಹ ಸಟ್ಟಾವ್ಯಾಪಾರದಲ್ಲಿ ಎಲ್ಲವನ್ನೂ ಕಳೆದುಕೊಂಡು ಜನರಿಗೆ ಮುಖ ತೋರಿಸಲಾರದೆ ನೇಣು ಹಾಕಿಕೊಂಡಿದ್ದ. ಆ ಸಂದರ್ಭದ ಅರಿವು ಈಗವಳಿಗೆ ಥಕ್ಕನೆ ಆಗಲು ಅವಳು ತುಂಬಾ ಗಾಬರಿಯಾದಳು; ಹೃದಯ ಇಬ್ಭಾಗವಾಯಿತು. ಆವಳು ದುಃಖಪೂರಿತಳಾಗಿ– "ಅವರು ಹೇಗೆ ಬಂದಾರು ಹೇಳು ನೀಲವ್ವ" ಎಂದು ನಡುಗಿದಳು

"ಅವರು ಬಂದೇ ಬರುತ್ತಾರೆ. ಚಿಂತಿಸಬೇಡ ತಾಯಿ."

ಮನೋರಮೆ ಶೂನ್ಯ ದೃಷ್ಟಿಯಿಂದ ಕೆಲ ಹೊತ್ತು ನೋಡಿ- "ನೀಲವ್ವ, ನೀನೀಗಲೇ ನನ್ನ ತಂದೆಯೆಡೆಗೆ ಆಳು ಕಳಿಸು. ಅವರನ್ನು ಇದ್ದಲ್ಲಿಂದ ಕರೆದುಕೊಂಡು ಬರುವದೇ ನಮ್ಮ ಕೆಲಸ ಹೋಗು ನಮ್ಮವ್ವ. ಈಗಲೆ ಯಾರನ್ನಾದರೂ ಕಳಿಸಿಬಿಡು." ಎಂದು ಕುರಿ ಕಳಿಸಿದಳು. "ಎದ್ದು ಬಿಡು ನೀಲವ್ವ ನನ್ನ ತಲೆ ಸಿಡಿಯುತ್ತಿದೆ. ಹೋಗು ತಾಯಿ."

ನೀಲವ್ವ ಚಟಕ್ಕನೆ ಎದ್ದು ನಿಂತು ಒಡತಿಯ ಹಣೆ ಮುಟ್ಟಿ ನೋಡಿದಳು. ಅದು ಕಾಯ್ದು ಕೆಂಡವಾಗಿತ್ತು- "ತಾಯಿ, ನೀವು ಸುಮ್ಮನೆ ಮಲಗಿರಿ. ನಾನೀಗಲೇ ಎಲ್ಲವನ್ನೂ ಮಾಡುತ್ತೇನೆ. ನೀವು ಹೀಗೆ ಗಾಬರಿಯಾದರೆ ಹೇಗೆ? ನಿಮ್ಮ ತಲೆ ಕಾಯ್ದಿದೆ. ಮೈಯೂ ಕಾಯುತ್ತಿದೆ. ನೀವು ಮಲಗಿಬಿಡಿರಿ. ನಾನೀಗಲೇ ಬಂದೆ" ಎಂದು ಅವಳು ಮನೋರಮೆಯನ್ನು ಬಲವಂತವಾಗಿ ಹಾಸಿಗೆಯ ಮೇಲೆ ಮಲಗಿಸಿ ಹೊಚ್ಚಿದಳು.

"ಬೇಗ ಬರಲು ಅಪ್ಪನಿಗೆ ಹೇಳಿ ಕಳಿಸು ನೀಲವ್ವ ಎನ್ನುವಾಗ ಮನೋರಮೆಯ ಹಲ್ಲು ಕಟಕಟ ಮಾಡಿದವು; ದೇಹದಲ್ಲೆಲ್ಲ ನಡುಕ ತುಂಬಿತ್ತು. ನೀಲವ್ವ ಬಾಣದಂತೆ ಹೊರಗೆ ನಡೆದಳು. ಕೂಡಲೆ ಆಳುಕಳುಹಿಸಿ ಒಡತಿಯ ಪಕ್ಕದಲ್ಲಿ ಬಂದು ಕುಳ್ಳಿರಬೇಕೆಂಬ ಅವಸರವೇ ಅವಳಲ್ಲಿ ಹೆಚ್ಚಿನ ಆತುರತೆಯನ್ನುಂಟುಮಾಡಿತ್ತು. ಆದರೆ ಅವಳು ಹೊರಗೆ ಹೋದ ಕ್ಷಣವಲ್ಲೇ ಮನೋರಮೆ ದಿಗ್ಗನೇ ಎದ್ದಳು ಅವಳ ಕಣ್ಣು ನೋಯುತ್ತಿದ್ದವು; ದೇಹವೆಲ್ಲ ನಿತ್ರಾಣವಾಗಿತ್ತು. ಅವಳ ಕಣ್ಣೆದುರಿಗೆ ಪತಿಯ ಮೂರ್ತಿ ಕುಣಿಯುತ್ತಲಿತ್ತು. ಅವಳಾಗಲೇ ಅವನ ಹೀನ ಆಚರಣೆಗಳನ್ನೆಲ್ಲ ಮರೆತಿದ್ದಳು. ಅವನ ಬರವಿಗಾಗಿ ಹಂಬಲಿಸುವದೇ ಅವಳ ಹೃದಯದ ರೋಗವಾಗಿತ್ತು.- "ಅವರು ಹೇಗೆ ಬಂದಾರು? ಹೇಗೆ ಬಂದಾರು?" ಎಂದು ತನ್ನನ್ನೇ ತಾನು ಪ್ರಶ್ನಿಸಿಕೊಂಡಳು.- "ಹೌದು, ವಿಶ್ವಾಸರಾಯರು ಹೊರಗೆ ಬರಲೇಬೇಕು. ನಮಗಾಗಿ

ಅವರು ನಾಲ್ಕು ತಿಂಗಳನ್ನು ಭೋಗಿಸಿದರು. ಅವರ ಋಣ ತೀರಿಸುವದು ನಮ್ಮ ಕರ್ತವ್ಯ. ನನ್ನ ಪತಿಗಾಗಿ ನಾನು ಮಾಡಬೇಕಾದ ಕರ್ತವ್ಯ." ಹೀಗೆ ಅವಳು ಏನೇನೊ ಒಟಗುಟ್ಟಿ ಹಾಸಿಗೆಯಿಂದ ಕೆಳಗಿಳಿದಳು. ಆ ಹೊತ್ತಿನಲ್ಲಿ ಅವಳಿಗೆ ತನ್ನ ದೇಹದ ಅರಿವೂ ಇರಲಿಲ್ಲ. ತಲೆಸಿಡಿತ ವನ್ನು ಪೂರಾ ಅಲಕ್ಷಿಸಿದಳು; ದೇಹದೌರ್ಬಲ್ಯವನ್ನು ಹಿಂದೆ ನೂಕಿದಳು. ತಲೆಗಿಂಬಾಗಿ ಇಟ್ಟುಕೊಂಡ ಆ ಚಿಕ್ಕ ಪೆಟ್ಟಿಗೆಯನ್ನು ನಡುಗುವ ಕೈ ಗಳಿಂದ ತೆಗೆದುಕೊಂಡು ಅವಳು ಕಾಲೆಳೆಯುತ್ತ ಹೊರಬಿದ್ದಳು. ವಕೀ ಲರ ಮನೆ ಬಹಳ ದೂರದಲ್ಲಿರದಿದ್ದರೂ ಅಷ್ಟೇ ಹಾದಿ ಅವಳಿಗೆ ಯೋಜ ನದಗಲವೆನ್ನಿಸಿತು. ಅವರ ಮನೆ ಮುಟ್ಟುವದು ಅವಳಿಗೆ ದುಸ್ತರವೆನ್ನಿ ಸಿದರೂ ಅವಳು ಹಿಂದೆಗೆಯಲಿಲ್ಲ. ಒಂದೇ ಸವನೆ ದಾರಿ ತುಳಿಯುತ್ತ ಲಿದ್ದಳು. ಒಂದು ಜೀವನದ ಸಮಸ್ಯೆಯನ್ನು ಬಿಡಿಸ ಹೊರಟ ಅವಳಿಗೆ ಬರಬರುತ್ತ ಉತ್ಸಾಹ ಮೂಡಿತು. ಅದು ಉತ್ಸಾಹವೊ, ಉನ್ಮಾದವೊ, ಆವೇಗವೊ-ತಿಳಿಯದು. ಅವಳ ಹೆಜ್ಜೆ ಅವಸರದಿಂದ ಬೀಳುತ್ತಲಿದ್ದವು. ಹೀಗೆ ನಡೆಯುತ್ತಲಿರುವ ಅವಳ ತಲೆಯಲ್ಲಿ ವಿಚಾರಗಳ ಸುಳಿಯೂ ಅಷ್ಟೇ ಭರದಿಂದ ಸುತ್ತುತ್ತಲಿತ್ತು.- "ಈ ಹಣ ನಿನಗೆ ಬಹಳ ಅಮೂ ಲ್ಯವಾಗಿದೆ. ಇದನ್ನು ಕಳೆದುಕೊಳ್ಳಬೇಡ. ಹುಚ್ಚಿಯಂತೆ ಮುಂದುವರಿ ಯಬೇಡ."

"ನನಗಾಗಿ ಜೇಲಿನಲ್ಲಿ ಕೊಳೆಯುತ್ತಿರುವ ವಿಶ್ವಾಸರಾಯರು ಬಿಡು ಗಡೆಗಾಗಿ ಪ್ರಯತ್ನಿಸುವದು ಹುಚ್ಚುತನವೆ?"

"ಇಂದಿನ ಸ್ಥಿತಿಯಲ್ಲಿ ಇದು ಅವ್ಯವಹಾರವಾಗಿದೆ. ಎಲ್ಲವನ್ನೂ ಕಳೆದುಕೊಂಡು ನಿರ್ಗತಿಕನಾಗಿರುವ ನಿನ್ನ ಪತಿಯ ಸ್ಥಿತಿಯನ್ನು ವಿಚಾ ರಿಸಿನೋಡು."

"ಹಾಗೆಂದು ನಾನೊಂದು ದಿವ್ಯ ಜೀವವನ್ನು ಕಡೆಗಣಿಸಬೇಕೆ? ಒಂದು ಸಂಸಾರವನ್ನು ಮೂಲೆಗುಂಪು ಮಾಡಬೇಕೆ? ಒಂದು ಬದುಕನ್ನು ತೂರಿಬಿಡಬೇಕೆ?"

"ನಿನಗೆ ಬದುಕಬೇಕಾಗಿಲ್ಲವೆ? ಈ ಹಣವನ್ನು ಕಳೆದುಕೊಂಡು

ನೀನು ಭಿಕ್ಷುಕಳಾಗಬೇಕೆಂದು ಬಯಸುವಿಯಾ? ಸುಮ್ಮನೆ ಹಿಂದೆ ಸರಿ. ಈ ಹಣದಿಂದ ನಿನ್ನ ಜೀವನ ಸಾಗೀತು."

"ಅದು ಜೀವನವೆ?"

"ಹಾಗಾದರೆ ನೀನು ಭಿಕಾರಿಯಾಗುವದು ಖಂಡಿತ."

"ನನ್ನವರು ತಿರುಗಿ ಬಂದರೆ...."

"ಬಂದರೆ....ಅದು ರೇ ರಾಜ್ಯದ ಮಾತು. ಸತ್ಯ ಜೀವನವನ್ನು ಆಳೆದು ನೋಡು. ಸುಮ್ಮನೆ ದುಡುಕಬೇಡ."

"ಅವರು ಬರಲಿ ಬಾರದಿರಲಿ– ನನ್ನ ನಿರ್ಧಾರವನ್ನು ಕದಲಿಸಲಾರೆ" ಯಾರೋ ಗಹಗಹಿಸಿ ನಕ್ಕಂತಾಯಿತು. ಅವಳು ಗಾಬರಿಯಿಂದ ಸುತ್ತಲೂ ನೋಡುತ್ತ, ಮುಂದೆ ಮುಂದೆ ನಡೆದಳು. ಬೀದಿಯ ಹುಚ್ಚು ಭಿಕ್ಷುಕನೊಬ್ಬ ಅವಳನ್ನು ದುರುಗುಟ್ಟಿ ನೋಡಿ ಖೊಳ್ಳನೇ ನಕ್ಕು ಮುಂದೆ ಸಾಗಿದ.

ವಕೀಲರನ್ನು ಭೆಟ್ಟಿಯಾಗಿ ಅವಳು ತಿರುಗಿ ಮನೆಗೆ ಬಂದಾಗ ಅವಳಲ್ಲಿ ಬಂದು ಕರ್ತವ್ಯವನ್ನು ನೆರವೇರಿಸುವ ಸಮಾಧಾನ ಮೂಡಿ ನಿಂತಿತ್ತು. ಆ ಸಮಾಧಾನದ ತೃಪ್ತಿಯನ್ನುಳಿದರೆ ಅವಳಲ್ಲಿ ಇನ್ನಾವ ಭಾರವೂ ಗೌಣವಾಗಿ ಮೂಡಲಿಲ್ಲ. ಆದರೆ ಅವಳಿಗೆ ದಣಿವು ತುಂಬಾ ಆವರಿಸಿತ್ತು. ಮಾಡುವ ಕೆಲಸವನ್ನು ಮಾಡಿಯಾದ ಮೇಲೆ ಅದು ಇನ್ನಷ್ಟು ಹೆಚ್ಚಾಗಿ ಬಿಟ್ಟಿದ್ದರಿಂದ ಅವಳು ನೇರವಾಗಿ ಹಾಸಿಗೆಯ ಮೇಲುರುಳಿದಳು. ಮಧ್ಯಾನ್ನ ನೀಲವ್ವ ಬಂದಾಗಲೂ ಅವಳು ಮಲಗಿಯೇ ಇದ್ದಳು. ಅಷ್ಟು ಅಸ್ತವ್ಯಸ್ತವಾಗಿ ಅವಳೆಂದೂ ಮಲಗಿರಲಿಲ್ಲ. ನೀಲವ್ವ ಗಾಬರಿಯಿಂದ ಅವಳ ಹಣೆ ಮುಟ್ಟಿ ನೋಡಿದಾಗ ಅದು ಸಿಡಿಯುತ್ತಿತ್ತು; ಕಾದು ಕೆಂಡವಾಗಿತ್ತು.– "ತಾಯೀ"

ಮನೋರಮೆ ಭಾರವಾದ ಕಣ್ಣುಗಳನ್ನು ಪ್ರಯಾಸದಿಂದ ತೆರೆದು ಕೇಳಿದಳು.– "ಆಳನ್ನು ಕಳಿಸಿ ಆಯಿತೆ?"

"ಹೌದು ತಾಯಿ."

"ಅವರ ಜೀವಕ್ಕೆ ಯಾವ ಅಪಾಯವೂ ಇಲ್ಲವಷ್ಟೆ ನೀಲವ್ವ?"

"ಅವರ ಕೂದಲೂ ಕೊಂಕಲಾರದು."

"ನಿನ್ನ ಬಾಯಲ್ಲಿ ಸಕ್ಕರೆ ಬೀಳಲಿ ನೀಲವ್ವ. ಅವರು ಖಂಡಿತ ಮನೆಗೆ ಬರುವರೆ?"

"ಬಂದೇ ಬರುವರು ತಾಯಿ. ಅದರಲ್ಲಿ ಸಂದೇಹವಿಲ್ಲ." ಮನೋರಮೆಯ ಕಣ್ಣುಗಳಿಂದ ಪಳಕ್ಕನೆ ನೀರು ಚಿಮ್ಮಿದವು. ನೀಲವ್ವನ ಮಾತುಗಳಿಂದ ಅವಳಿಗೆ ತುಸು ಸಮಾಧಾನವಾಗಿತ್ತು. ಅವಳು ತನ್ನ ಕೊರಳ ಮಂಗಳಸೂತ್ರವನ್ನು ಪ್ರೇಮಪೂರ್ವಕವಾಗಿ ಕಣ್ಣಿಗೊತ್ತಿಕೊಂಡಳು. ಇದನ್ನು ನೋಡುತ್ತಲಿದ್ದ ನೀಲವ್ವ ಅತ್ತಕಡೆ ಮೋರೆ ತಿರುವಿಕೊಂಡು ಕಣ್ಣೊರಸಿಕೊಂಡಳು.– "ನೀಲವ್ವ....ಈ ಹೊತ್ತು ಬುಧವಾರವಲ್ಲವೇನೆ?"

"ಯಾಕೆ ತಾಯಿ?"

"ಸೋಮವಾರಕ್ಕೆ ಇನ್ನೂ ಐದುದಿನಗಳಲ್ಲವೇ?"

"ವಿಶ್ವಾಸರಾಯರ ಸಜೆ ಆ ದಿನವೇ ಮುಗಿಯುವದೆಂದು ಈ ಮಾತೆ?"

"ನಿನ್ನ ಊಹೆ ಸರಿಯಾಗಿದೆ."

"ಆದರೆ ತಾಯಿ...." ನೀಲವ್ವನ 'ಆದರೆ'ಯನ್ನು ಮನೋರಮೆ ಅರ್ಥಮಾಡಿಕೊಂಡಾಗ ಅವಳ ಮೋರೆಯಲ್ಲಿ ಮಂದಹಾಸ ಮಿನುಗಿತು. ಅವಳಿಗೆ ಗೊತ್ತಾಗದಂತೆ ತಾನು ಮಾಡಿದ ಕಾರ್ಯವನ್ನು ನೆನೆದಾಗ ಮೂಡಿ ಬಂದ ಮಂದಹಾಸವೇ ಅದು.– "ನೀಲವ್ವ ನಾನು ತಾರಕ್ಕನನ್ನು ಒಮ್ಮೆ ಕಾಣಬೇಕು."

"ಆಗಲಿ ಅದಕ್ಕೇನು? ನಿಮ್ಮ ಅನಾರೋಗ್ಯವನ್ನು ಅವರಿಗೆ ತಿಳಿಸಿದರೆ ಅವರು ಧಾವಿಸಿ ಬಂದಾರು."

"ನನಗೆ ಹಾಗೆನ್ನಿಸುವದಿಲ್ಲ ನೀಲವ್ವ. ನನ್ನ ಮೇಲೆ ಅವಳಿಗೆ ಬಹಳ ಕೋಪ."

"ಅದಕ್ಕೂ ಒಂದು ಮಿತಿ ಇರುತ್ತದೆ ತಾಯಿ. ನಿಮ್ಮ ಪರಿಸ್ಥಿತಿಯನ್ನು ಕೇಳಿ ತಿಳಿದಾಗ ಅವರು ಬರದಿದ್ದರೆ...."

"ನನ್ನ ಬಗ್ಗೆ ಇಲ್ಲದ ಕಲ್ಪನೆ ಮಾಡಿಕೊಂಡಿದ್ದಾಳೆ. ನಾನು ದುಷ್ಟ ಳಲ್ಲ ನೀಲವ್ವ. ನನಗೂ ಹೊಣೆಗಾರಿಕೆಯಿದೆ. ನನ್ನ ಜೀವನದ ಅರಿವಿದೆ. ಈ ಮಾತನ್ನವಳು ತಿಳಿಯಬೇಕು."

"ಅವರಂದೊಂದು ವಿಚಿತ್ರ ಸ್ವಭಾವ ತಾಯಿ. ಈಗ ನಾಲ್ಕು ದಿನ ಗಳಿಂದ ಭ್ರಮಿಷ್ಟರಂತೆ ಮಾಡುತ್ತಲಿದ್ದಾರೆ. ದಿನಾಲು ವಿಶ್ವಾಸರಾಯರ ಹಳೆಯ ಹೊತ್ತಿಗೆಗಳನ್ನು ಪೂಜಿಸುತ್ತಿದ್ದಾರೆ. ಮಕ್ಕಳನ್ನು ಕೂಡ್ರಿಸಿಕೊಂಡು ಅವರ ಹಾಡುಹೇಳುತ್ತಾರೆ. ಸೋಮವಾರ ಬರುತ್ತದೆ;- ಸೋಮವಾರ ಹೋಗುತ್ತದೆ;- ನನ್ನ ವಾರ ಬರುವದೇ- ಇಲ್ಲ ಎಂದು ಗುಣುಗುಟ್ಟು ತ್ತಾರೆ. ನಾನು ಹೀಗೇಕೆಂದು ಕೇಳಿದರೆ ಕವಕ್ಕನೆ ಮೈಮೇಲೆ ಬರುತ್ತಾರೆ. ಅವರನ್ನು ಹೇಗೆ ಸಂತೈಸಬೇಕೊ ನನಗೆ ತಿಳಿಯದಾಗಿದೆ."

"ಅವಳಿಗೆ ನನ್ನವರ ಪರಸ್ಥಿತಿ ತಿಳಿದಿದೆಯೆ?"

"ನಾನವರ ಮುಂದೆ ಪಿಟ್ಟೆಂದಿಲ್ಲ ತಾಯಿ– ಹೇಗೆ ತಿಳಿಯಬೇಕು?"

ನೀಲವ್ವ, ತಾರಕ್ಕನಿಗೆ ಹೇಳು– ಈ ಸೋಮವಾರ ಅವಳಿಗೆ ಒಳ್ಳೆಯ ದಿನವಾಗಿ ಬರುತ್ತದೆ ಎಂದು. ನೀಲವ್ವನಿಗೆ ಈ ಮಾತು ಅರ್ಥವಾಗಲಿಲ್ಲ. ಅವಳು ಸುಮ್ಮನೆ ಮನೋರಮೆಯನ್ನು ಮಿಕಿ ಮಿಕಿ ನೋಡಿದಳು. ಜ್ವರದ ಕಾವಿನಲ್ಲಿ ಅಭ್ರಮ ಶುಭ್ರಮವಾಗಿ ಬರುತ್ತಿರುವ ಮಾತುಗಳಿರಬೇಕೆಂಬ ಅಂಜಿಕೆಯೂ ಅವಳಲ್ಲಿ ಮೂಡಿತು. ಅವಳು ಹೆಚ್ಚು ಮಾತಾಡದೆ– "ನಿಮಗೆ ಆಯಾಸವಾದಂತೆ ತೋರುತ್ತದೆ. ಸುಮ್ಮನೆ ಮಲಗಿ ಬಿಡಿರಿ. ಮುಂಜಾನೆಯಿಂದ ಹೊಟ್ಟೆಯಲ್ಲಿ ಏನೂ ಇಲ್ಲ. ಹಣ್ಣಿನ ರಸವನ್ನಾದರೂ ತೆಗೆದುಕೊಳ್ಳಬೇಡವೆ?"

"ಇನ್ನೂ ನನ್ನ ಸ್ನಾನವಾಗಿಲ್ಲ ನೀಲವ್ವ."

"ಈ ಜ್ವರದಲ್ಲಿ ಸ್ನಾನವೆಂದರೇನು?"

"ಇದು ಬಂದ ಜ್ವರವಲ್ಲ ನೀಲವ್ವ."

"ಇರಬಹುದು ತಾಯಿ. ಆದರೂ ಜ್ವರವಿರುವದು ಸುಳ್ಳಲ್ಲವಷ್ಟೆ? ನಾನಿಗಲೇ ಹೋಗಿ ಔಷಧಿ ತರುತ್ತೇನೆ."

"ಹುಚ್ಚೀ ಈ ಜ್ವರಕ್ಕೆ ಯಾವ ಔಷಧಿಯೂ ಇಲ್ಲ. ನನ್ನ ಜ್ವರ ಇಳಿಯಬೇಕಾದರೆ ನನ್ನವರು ಬರಬೇಕು."

ನೀಲವ್ವ ಕಂಬನಿದುಂಬಿ ಹೇಳಿದಳು– "ಅವರು ಬಂದೇ ಬರುತ್ತಾರೆ. ಅಲ್ಲಿಯವರೆಗೆ ನೀವು ಆರೋಗ್ಯ ಕಾಪಾಡಿಕೊಳ್ಳಬೇಡವೆ?"

ಮನೋರಮೆ ಸುಮ್ಮನೆ ನಕ್ಕು– "ಸರಿ ಹಾಗಾದರೆ. ದೇವರ ಮನೆಗೆ ಹೋಗಿ 'ಧೂಳಿ ಸ್ನಾನವನ್ನಾದರೂ ಮಾಡಿ ಬರುತ್ತೇನೆ ಈ ಹಾಸಿಗೆ ಯನ್ನಷ್ಟು ಸರಿಪಡಿಸು" ಎಂದು ತತ್ತರಿಸುತ್ತ ಅವಳು ದೇವರ ಕೋಣೆಗೆ ನಡೆದಳು. ನೀಲವ್ವ ಅವಳನ್ನು ತಡೆಯಲಿಲ್ಲ. ಲಗುಬಗೆಯಿಂದ ಹಾಸಿ ಗೆಯನ್ನು ಚಟಪಟ ಜಾಡಿಸಿ ಮತ್ತೆ ಹಾಸಿ ದಿಂಬನ್ನು ಸರಿಯಾಗಿಟ್ಟಳು. ಅವಳಿಗೆ ಆ ಹೊತ್ತಿನಲ್ಲಿ ಆಭರಣದ ಪೆಟ್ಟಿಗೆಯ ನೆನಪಾಗದಿರಲಿಲ್ಲ. ಆದರೆ ಆ ಪೆಟ್ಟಿಗೆ ದಿಂಬಿನ ಕೆಳಗಿರಲಿಲ್ಲ. ಮನೋರಮೆ ತತ್ತರಿಸುತ್ತ ಹೊರಗೆ ಬಂದು ಹಾಸಿಗೆಯ ಮೇಲೆ ಕುಳಿತಳು. ಅವಳ ಕಣ್ಣು ಕೆಂಪಗಾಗಿ ದ್ದವು.– "ತಾಯಿ, ಆ ಆಭರಣದ ಪೆಟ್ಟಿಗೆ ಒಳಗಿಟ್ಟು ಬಂದಿರಾ?"

"ಅದು ಎಲ್ಲಿಗೆ ಹೋಗಬೇಕೊ ಅಲ್ಲಿಗೆ ಹೋಗಿದೆ ನೀಲವ್ವ."

"ಅಂದರೆ?...."

"ಈದಿನ ಮುಂಜಾನೆ ನಾನೇ ಹೋಗಿ ಅದನ್ನು ವಕೀಲರಿಗೆ ಕೊಟ್ಟು ಬಂದೆ."

ನೀಲವ್ವನಿಗೆ ಕಸವಿಸಿಯಾಗಿ– "ಬಹಳ ಅವಸರ ಮಾಡಿದಿರಿ ತಾಯಿ."

"ಅವಸರದ ಅಗತ್ಯವಿತ್ತು ನೀಲವ್ವ." ನೀಲವ್ವನ ಕಣ್ಣು ತುಂಬಿ ದುದನ್ನು ನೋಡಿ ಮನೋರಮೆ– ಹುಚ್ಚಳಂತೆ ಮಾಡಬೇಡ. ನಾನು ಮಾಡಿದ್ದು ಸರಿಯಾಗಿದೆ" ಎಂದಳು. ನೀಲವ್ವ ಮಗುಮಾತನಾಡಲಿಲ್ಲ. ಮನೋರಮೆಗೆ ಈಗಾಗಲೆ ಸಾಕಷ್ಟು ದಣಿವಾಗಿತ್ತು. ಅವಳು ಹೊಟ್ಟೆ ಯಲ್ಲಿ ಏನೂ ತೆಗೆದುಕೊಳ್ಳದೆ ಒರಗಿದಳು.

ನೀಲವ್ವ ಓಡಿ ಹೋಗಿ ಔಷಧಿ ತಂದಳು. ಅವಳು ತಿರುಗಿ ಬಂದಾಗ ಮನೋರಮೆ ಇನ್ನೂ ಮಲಗಿದ್ದರಿಂದ ಎಲ್ಲ ಸಮಾಚಾರವನ್ನು ತಾರಾನಿಗೆ ಹೇಳಿ ಅವಳ ಜ್ವರ ಇಳಿಯುವವರೆಗೆ ಅತ್ತ ಕಡೆಗೆ ಬರ ಲಾಗುವದಿಲ್ಲವೆಂದು ಹೇಳಲು ಧಾವಿಸಿದಳು.

## ೨೦

"ಚಿಕ್ಕಪ್ಪ ಎಂದು ಬರುತ್ತಾನೆಯೋ ಅವ್ವ?....ನೀನು ಮಾತನ್ನೇ ಆಡುವದಿಲ್ಲ. ಅವನು ಹೋಗಿರುವದಾದರೂ ಎಲ್ಲಿಗೆ ಹೇಳಬಾರದೆ?"

"ಅವರು ಬಹುದೂರ ಹೋಗಿದ್ದಾರೆ ಮಗು. ಅವರು ಬರಬೇಕಾ ದರೆ ಇನ್ನೂ ಎರಡು ವರುಷ ಬಾಳಾ."

"ಎರಡು ವರುಷ? ಇಷ್ಟುದಿನ ಒಬ್ಬನೇ ಏಕೆ ಇರುತ್ತಾನೆ ಚಿಕ್ಕಪ್ಪ? ನಾವೂ ಏಕೆ ಅಲ್ಲಿಗೆ ಹೋಗಬಾರದು?" ಕಿರಣನ ಇಂತಹ ಪ್ರಶ್ನೆಗಳು ತಾರಾನಿಗೆ ಹೊಸದಾಗಿರಲಿಲ್ಲ. ಆಗಾಗ ಅವನು ಇಂತಹ ಪ್ರಶ್ನೆಗಳನ್ನು ಕೇಳುತ್ತ ಅವಳನ್ನು ಕಾಡುತ್ತಿದ್ದ. ಅವಳು ಏನಾದರೂ ಹೇಳಿ ಜಾರಿ ಕೊಳ್ಳುತ್ತಿದ್ದಳು. ಅವಳ ಉತ್ತರದಿಂದ ಅವನಿಗೂ ತೃಪ್ತಿಯಾಗುತ್ತಿರಲಿಲ್ಲ. ತಾರಾನಿಗಂತೂ ಈ ಪ್ರಶ್ನೆಗಳಿಂದ ಕಿಚ್ಚೇ ಹೆಚ್ಚಾಗುತ್ತಿತ್ತು. ಒಡಲೊಳಗೆ ಅಲಗಿಕ್ಕಿ ತಿರುವಿದಂತಾಗುತ್ತಿತ್ತು.

ಬರುವ ಸೋಮವಾರ ಅವನ ಶಿಕ್ಷೆಯು ಅವಧಿ ಮುಗಿದರೂ ದಂಡ ಕ್ಕಾಗಿ ಮತ್ತೆ ಜೇಲಿನಲ್ಲಿ ಎರಡು ವರುಷ ಕೊಳೆಯುವ ಪ್ರಸಂಗವನ್ನು ನೆನೆದಾಗಲಂತೂ ಅವಳಿಗೆ ವಿಲಕ್ಷಣ ಸಂಕಟವಾಗುತ್ತಿತ್ತು. ವೆಂಕಟೇಶನ ನಿಜ ಪರಸ್ಥಿತಿಯನ್ನರಿಯದ ಅವಳು ಅವನು ಬೇಕೆಂದೇ ಈ ವ್ಯವಹಾರ ರಚಿಸಿ ತನ್ನ ಪತಿಯನ್ನು ಹಾಳು ಮಾಡಿದನೆಂದು ಕುದಿಯುತ್ತಲಿದ್ದಳು. ಮನಸ್ಸು ಮಾಡಿದ್ದರೆ ಆ ಹಣ ಕಟ್ಟಿ ತನ್ನ ಗಂಡನನ್ನುಳಿಸುವದು ಅವ ನಿಗೆ ಸಾಧ್ಯವಿದ್ದರೂ ಅವನು ಹಾಗೆ ಮಾಡದ್ದರಿಂದ ಅವಳಿಗೆ ವೆಂಕಟೇ ಶನ ಮೇಲೆ ಕೋಪ ಉಕ್ಕುತ್ತಿತ್ತು. ಗುಡ್ಡದಂತಹ ಮಾತನಾಡಿ ಈಗ

ಪರೌನವಾಗಿರುವ ಮನೋರಮೆಯನ್ನು ಅವಳು ಶಪಿಸುತ್ತಿದ್ದಳು. ಅವ ಳಿಂದಲೇ ಈ ಆಪತ್ತು ಬಂದಿತೆಂದು ಭಾವಿಸಿ ಅವಳು ಸಂತಾಪಗೊಂಡಿ ದ್ದಳು ಇನ್ನು ಎರಡು ವರುಷಗಳ ಕಾಲ ಪತಿಯನ್ನಗಲಿ ಇರಬೇಕಾದ ದೌರ್ಭಾಗ್ಯಕ್ಕಾಗಿ ಅವಳೆದೆಯಲ್ಲಿ ತುಂಬಾ ವೇದನೆ ತುಂಬಿತ್ತು. ತನ್ನ ಬಡತನದ ದುರ್ಲಾಭ ಪಡೆದ ಆ ಸಿರಿವಂತರಿಗಾಗಿ ಅವಳು ಕರಕರೆ ಹಲ್ಲು ತಿನ್ನುತ್ತಿದ್ದಳು. ತನ್ನ ಭಾವೀ ಜೀವನದ ರೂಪ ರೇಷೆಗಳನ್ನು ನೆನೆದಾಗಲಂತೂ ಅವಳು ದಿಗ್ಭ್ರಾಂತಳಾಗುತ್ತಿದ್ದಳು. ಮಕ್ಕಳ ಜೋಪಾ ನದ ಜೊತೆಗೆ ತನ್ನ ಬಾಣಂತಿತನದ ವೆಚ್ಚವನ್ನು ಹೇಗೆ ಸಹಿಸಿ ಪಾರಾಗ ಬೇಕೆಂಬ ಯೋಚನೆ ಅವಳನ್ನು ಪೂರಾ ನಿತ್ರಾಣಗೊಳಿಸಿತು. ಭಾವ ನವರಿಗೆ ಪತ್ರ ಬರೆಯಬೇಕೆಂಬ ಭಾವ ಬಂದರೂ ಅವಳ ಅಭಿಮಾನ ಅಡ್ಡ ಬರುತ್ತಿತ್ತು. ಅದರಿಂದ ಮಾಡಬೇಕೇನು? ತಾನು ತಪ್ಪಿ ಇಟ್ಟ ಹೆಜ್ಜೆಯನ್ನು ಸರಿಪಡಿಸಿಕೊಳ್ಳುವ ಹೊಣೆ ತನ್ನದೆ ಎಂದು ಭಾವಿಸಿ ಅನೇಕ ದುಡಿಮೆಯ ಯೋಜನೆಗಳನ್ನು ಹಾಕಿದುದುಂಟು. ಆದರೆ ತನ್ನ ಈ ಸ್ಥಿತಿಯಲ್ಲಿ ಅವು ಕಾರ್ಯಗತವಾಗುವದು ಅಸಂಭವವೆಂದು ತಿಳಿಯಲು ಅವಳು ಹೌಹಾರಿದಳು.- ಮನೋರಮೆಯನ್ನು ಕಂಡು ಈ ಮಾತು ಗಳನ್ನು ಚರ್ಚಿಸಬೇಕೆಂದು ಒಮ್ಮೊಮ್ಮೆ ಅನ್ನಿಸುವದು. ಆದರೆ ಆಕ್ಷಣ ಅವಳ ಸಂಪರ್ಕವೇ ಬೇಡವೆನ್ನಿಸುವದು. ಜೀವಣ್ಣನ ಮಾತು ಆಗ ನೆನಪಾಗಲು ಅವಳು ಉರಿದು ಬೀಳುವಳು.- ಅವಳು ಮಾಡಿದ ಉಪ ಕಾರದಲ್ಲಿ ಸ್ವಾರ್ಥ ತುಂಬಿದೆ. ನೀಚತನವಿದೆ. ಮನೆ ಮುರುಕತನವಿದೆ. ಇಂತಹ ಪಾಪಿಯ ಹತ್ತಿರ ಯಾಚಿಸುವದಕ್ಕಿಂತ ತಾನು ಕಮರಿ ಹೋದರೆ ತಪ್ಪೇನೆಂದು ಭಾವಿಸುವಳು.

"ತನ್ನಲ್ಲಿ ಹಣವಿದ್ದರೆ ವಿಶ್ವಾಸನನ್ನು ಬಿಡಿಸಬಹುದಿತ್ತು. ಆದರೆ ತಾನು ನಿರ್ಗತಿಕಳು. ಭಾವನವರನ್ನು ಬೇಡಬಹುದಿತ್ತು. ಆದರೆ ಅವ ರಲ್ಲಿ ಇಷ್ಟು ಹಣ ಎಲ್ಲಿಂದ ಬಂದೀತು? ಹಾಗಾದರೆ ನಾನು ಬದುಕುವ ರೀತಿಯಾವುದು? ನಾನು ಹೊಸ ಬಾಳನ್ನು ಹೊಂದಲಾರೆನೆ?....ನನ ಬಾಳು ಅದೆಷ್ಟು ಉಜ್ವಲವಾಗಬಹುದೆಂದು ಭಾವಿಸಿದೆ? ಕವಿಯು

ಕಾವ್ಯರಾಣಿಯಾಣಿಯಾಗಿ ಮೆರೆಯಬೇಕೆಂಬ ಕನಸು ಪುಡಿಪುಡಿಯಾಗಿ ಹೋದದ್ದು ಎಂತಹ ದುರ್ದೈವ. ಅವರು ಕಾವ್ಯದೇವಿಯನ್ನು ಕಡೆಗೆ ಣಿಸಿದರು. ನೆಮ್ಮದಿಯ ಜೀವನ ಬಯಸಿ ದೇವದತ್ತ ಪ್ರಸಾದವನ್ನು ನೂಕಿಬಿಟ್ಟದ್ದು ಎಂತಹ ಪ್ರಮಾದವಾಯಿತು? ಕಾವ್ಯದೇವಿ ಕೊಟ್ಟ ಶಾಪವೇ ಇದಾಗಿರಬಹುದೆ? ಈ ಶಾಪ ವಿಮೋಚನೆಯಾಗಲಾರದೆ? ಅವರು ಕವಿಯಾಗಿ ಮತ್ತೆ ಬಾಳಲಾರರೆ? ಹೊಸಬಾಳು ಅವರ ಜೀವನ ದಿಂದ ಉಕ್ಕಿ ಹರಿಯಲಾರದೆ?....ಅವರ ಕಾವ್ಯ ಸಂಪತ್ತು ಬೆಳೆಯಿಸುವ ಪಣತೊಟ್ಟ ನಾನು ಹೃದಯ ಸಂಪತ್ತು ಕಮರಿ ಹೋಗಲು ಸಹಾಯ ಮಾಡಿದೆ. ಈ ಅನರ್ಥದ ಪರಿಮಾರ್ಜನೆ ಹೇಗಾದೀತು? ನನ್ನವರು ಹೇಗೆ ಬಂದಾರು? ಹೇಗೆ ಹೊಸಬಾಳನ್ನು ಕಂಡಾರು?....ಸೋಮವಾರ! ಅನಂತ ಸೋಮವಾರಗಳಲ್ಲಿ ಈ ವಾರವೂ ಲೀನವಾಗಿ ಹೋಗುವದು. ವೆಂಕಟೇಶರಾಯರು ಮನಸ್ಸು ಮಾಡಿದ್ದರೆ ಈ ಸೋಮವಾರ ಶುಭವನ್ನು ತರಬಹುದಿತ್ತು. ಆದರೆ ಅವರು ಸ್ನೇಹದ ದುರ್ಲಾಭ ಪಡೆದುಕೊಂಡ ನೀಚರಾಗಿದ್ದಾರೆ; ಅಧಮರಾಗಿದ್ದಾರೆ. ಆವರು ಬರಲಾರರು....ಎರಡು ವರುಷ....ಅಯ್ಯೋ...." ತಾರಾನ ಎದೆಗೆ ಬರೆಕೊಟ್ಟಂತಾಯಿತು. ಆ ವೇದನೆಯಲ್ಲಿ ಅವಳಿಗೊಮ್ಮೆ ಚೀರಬೇಕೆನ್ನಿಸಿತು. ಹೃದಯ ಹಗುರಾಗು ವಂತೆ ಅತ್ತು ಬಿಡಬೇಕೆನ್ನಿಸಿತು. ಕಿರಣ ಎದುರಿಗಿರದಿದ್ದರೆ ಅವಳು ದೊಡ್ಡ ದನಿತೆಗೆದು ಅತ್ತುಬಿಡುತ್ತಿದ್ದಳು. ಆದರೆ ತನ್ನ ಆರ್ಭಾಟದಿಂದ ಮಕ್ಕಳ ಮನಸ್ಸು ಗಾಬರಿಯಾಗಬಹುದೆಂದು ಪ್ರಯತ್ನ ಪೂರ್ವಕವಾಗಿ ತನ್ನ ವೇದನೆ ಹತ್ತಿಕ್ಕಿಕೊಂಡು ಶೂನ್ಯ ಮನಸ್ಕಳಾಗಿ ಸುತ್ತಲೂ ನೋಡಿ ದಳು. ಅನೇಕ ವಿಚಾರಗಳ ತಾಕಲಾಟದಲ್ಲಿ ಸಿಕ್ಕ ಮನಸ್ಸು ಯಾವ ಗುರಿಯನ್ನೂ ಕಾಣದ ಒದ್ದಾಟದ ನೋವು ಆ ಕಣ್ಣುಗಳಲ್ಲಿ ತುಂಬಿ ಕೊಂಡಿತ್ತು. ಆ ವೇಳೆಯಲ್ಲಿ ನೀಲವ್ವ ಬರದಿದ್ದರೆ ಅವಳು ಹಾಗೇ ಎಷ್ಟು ಹೊತ್ತು ಕುಳಿತುಕೊಳ್ಳುತ್ತಿದ್ದಳೊ ತಿಳಿಯದು. ನೀಲವ್ವ ಬಂದ ದ್ದರಿಂದ ಅವಳ ಸಮಾಧಿ ಭಂಗವಾಯಿತು. "ಏನು ನೀಲವ್ವ, ನೀನೂ ಅಪರೂಪವಾಗಿ ಬಿಟ್ಟೆಯಲ್ಲ ಈ ದಿನ?"

"ಒಡತಿಗೆ ಜ್ವರ ಬಂದಿವೆ. ಅವರನ್ನು ಬಿಟ್ಟು ಕದಲುವಂತಿಲ್ಲ.

ಇದನ್ನು ತಿಳಿಸಿ ಹೋಗಲು ಬಂದೆ. ನಾನೀಗ ಮತ್ತೆ ಹೋಗಬೇಕು ತಾಯಿ."

"ಏನು ಮುನ್ನಕ್ಕನಿಗೆ ಜ್ವರವೆ?"

"ಅವರ ಜ್ವರದ ಕಾವಿನಲ್ಲಿ ಮನಸ್ಸಿನ ವ್ಯಥೆಯೂ ಕೂಡಿ ಬಹಳ ಸಂಕಟಪಡುತ್ತಿದ್ದಾರೆ ತಾಯಿ. ನೀವೂ ಒಮ್ಮೆ ಬಂದು ಹೋಗುವದು ಒಳಿತೆಂದು ತೋರುತ್ತದೆ."

"ನಿಮ್ಮ ಒಡತಿಗೆ ವ್ಯಥೆಯೆಂಬುದಿಲ್ಲ ನೀಲವ್ವ. ಅವಳ ಹೃದಯ ಜಡವಾಗಿದೆ. ನಾನು ಬಂದರೆ ಯಾವ ಪ್ರಯೋಜನವಾದೀತು ಹೇಳು."

"ಬಂಗಾರದಂತಹ ಅವರ ಹೃದಯದ ಪರಿಚಯವೇ ತಮಗಾಗಿಲ್ಲ ತಾಯಿ. ಅವರು ನಿಮಗಾಗಿ, ನಿಮ್ಮ ಮಕ್ಕಳಿಗಾಗಿ ಕಣ್ಣೀರು ಹಾಕದ ದಿನವಿಲ್ಲ."

"ಮಾಡುವ ಅನರ್ಥವನ್ನು ಮಾಡಿ ಮುಗಿಸಿ ಕಣ್ಣೀರು ಹಾಕುವ ಈ ಕುತಂತ್ರವನ್ನು ಇನ್ನಾದರೂ ಬಿಡಲು ಹೇಳು ನಿಮ್ಮ ಒಡತಿಗೆ."

"ಅವರು ನಿಮಗೆ ಯಾವ ಅನ್ಯಾಯ ಮಾಡಿದ್ದಾರೆಂದು ಇಷ್ಟು ಬಿರುಸಾಗಿದ್ದೀರಿ?"

"ಅವರು ಯಾವ ಅನ್ಯಾಯವನ್ನೂ ಮಾಡಿಲ್ಲವೆ? ನಾನು ಗಂಡನೊಡನೆ ನೆಮ್ಮದಿಯಾಗಿ ಬಾಳದಿರುವಂತೆ ಮಾಡಿದ್ದು ಯಾವ ನ್ಯಾಯ?"

"ವ್ಯವಹಾರದ ಗೊಂದಲದಲ್ಲಿ ಅವರೇನು ಮಾಡಬೇಕು?"

"ನಾನು ವ್ಯವಹಾರದ ಮಾತು ಹೇಳುತ್ತಿಲ್ಲ ನೀಲವ್ವ. ಅವಳ ಅವ್ಯವಹಾರದ ನಡತೆಗಾಗಿ ಬೇಯುತ್ತಿದ್ದೇನೆ." ತಾರಾನ ಕೋಪದ ಕಾರಣವನ್ನು ನೀಲವ್ವ ಈ ಮೊದಲೇ ಊಹಿಸಿದ್ದರೂ ಅದಕ್ಕೆ ಅಷ್ಟು ಮಹತ್ವ ಕೊಟ್ಟಿರಲಿಲ್ಲ. ಎಲ್ಲಿಯೋ ತಿಳುವಳಿಗೆ ತಪ್ಪಾಗಿರಬೇಕೆಂದು ಸುಮ್ಮನಿದ್ದಳು. ಈಗ ಇಂತಹ ಹೊತ್ತಿನಲ್ಲೂ ಅವಳು ಮನೋರಮೆಯನ್ನು

ಹೀಯಾಳಿಸುವದನ್ನು ಕಂಡು ಅವಳು ಕಿಡಿಕಿಡಿಯಾದಳು. ವೆಂಕಟೇಶನ ಸಧ್ಯದ ಪರಿಸ್ಥಿತಿಯ ನಿವೇದನೆ ಮಾಡಿ ಅಂತಹ ವಿಷಮ ಸಮಯದಲ್ಲೂ ಮನೋರಮೆ ತನ್ನೆಲ್ಲ ಸರ್ವಸ್ವವನ್ನೂ ಕಳೆದುಕೊಂಡು ವಿಶ್ವಾಸರಾಯನ ಬಿಡುಗಡೆಯಾಗಿ ಹೆಣಗುತ್ತಿತ್ತ ಮಾತನ್ನು ಹೇಳಿ ಹೋಗಲು ಬಂದಿದ್ದಳು. ಆದರೆ ಅವಳಲ್ಲಿ ಮೂಡಿ ಬಂದ ಕೋಪ ಈ ಮಾತುಗಳನ್ನು ಮರೆಯಿಸಿತು. ಅವಳು ತಾರಾನನ್ನು ಕೆಣಕುವವಳಂತೆ ನೋಡುತ್ತ– "ಕೆಟ್ಟು ಹೋದ ಮನಸ್ಸಿನಲ್ಲಿ ಒಳ್ಳೆಯ ಗುಣಗಳು ಎದ್ದು ಕಾಣಲಾರವೆಂಬುದಕ್ಕೆ ನೀವೇ ಸಾಕ್ಷಿ. ಜಗತ್ತಿನಲ್ಲಿ ನೀವೊಬ್ಬರೇ ಗರತಿ ಗಂಗವ್ವನೆಂದು ತಿಳಿದು ಕೊಳ್ಳದೆ ಪಟ್ಟು ಹಿಡಿದು ಆಡಿದ್ದನ್ನೇ ಆಡುವದು ನಿಮ್ಮ ಮಾತನ್ನು ಕೇಳುತ್ತ ಕೂಡುವ ಸಮಯವಿಲ್ಲ ನನಗೆ. ಒಂದು ಮಾತು ಮಾತ್ರ ನಿಮ್ಮ ಲಕ್ಷ ದಲ್ಲಿರಲಿ. ನೀವು ತಿಳಿದುಕೊಂಡದ್ದು ಮಾತ್ರ ತಪ್ಪು. ನನ್ನ ಒಡತಿಯ ಗುಣದ ಅರಿವಾಗುವ ವೇಳೆಯೂ ಬರುತ್ತದೆ. ನೀವು ಪಶ್ಚಾತ್ತಾಪದಿಂದ ಅವರ ಕಾಲು ಹಿಡಿಯುವ ಕಾಲವೂ ಬರುತ್ತದೆ." ಎಂದು ನೀಲವ್ವ ಬಿರಬಿರನೆ ಅಲ್ಲಿಂದ ಹೊರಟಳು. ತಾರಾನಿಗೆ ಅವಳ ಮಾತುಗಳು ಶಲ್ಯದಂತೆ ಚುಚ್ಚಿದವು. ಅವರೆಲ್ಲರೂ ತನ್ನನ್ನೇ ತಪ್ಪಿತಸ್ಥಳನ್ನಾಗಿ ಮಾಡಿದ್ದು ದುರ್ದೈವವೆಂದೇ ಬಗೆದಳು. ಒಂದು ಮಾತು ಮಾತ್ರ ಅವಳ ವಿಚಾರದ ಸುಳಿಯಲ್ಲಿ ಸಿಕ್ಕಿಸಿತು.– "ಜಗತ್ತಿನಲ್ಲಿ ನೀವೊಬ್ಬರೇ ಗರತಿ ಗಂಗವ್ವನೆಂದು ತಿಳಿಯುವದು ತಪ್ಪು" ಎಂಬುದೇ ಆ ಮಾತು. ಅವಳು ಅದನ್ನೇ ಅನೇಕಸಾರೆ ಮನಸ್ಸಿನಲ್ಲಿ ಗುಣಿಸಿದಳು.

ನೀಲವ್ವ ಬಂದು ಹೋಗಿ ಎರಡು ದಿನಗಳು ಕಳೆದು ಹೋದರೂ ಅವಳಿಂದ ಯಾವ ಸಮಾಚಾರವೂ ಬಾರದ್ದರಿಂದ ತಾರಾನಲ್ಲಿ ಆತುರತೆ ಹೆಚ್ಚಾಯಿತು.– "ಮನ್ನಕ್ಕನ ಜ್ವರ ಆರಿರಲಿಕ್ಕಿಲ್ಲವೆ? ನಾನೇಕೆ ಹೋಗಿ ಅವಳನ್ನು ಕಾಣಬಾರದು?....ಆದರೆ ಅವಳಲ್ಲಿ ನನ್ನದೇನು ಕೆಲಸ?....ಅವಳು ಬೇನೆ ಬಿದ್ದಾಗಲೂ ನಾನು ದ್ವೇಷಿಸಬೇಕೆ? ನಾನವಳನ್ನು ದ್ವೇಷಿಸುವ ದಿಲ್ಲ; ತಿರಸ್ಕರಿಸುತ್ತೇನೆ?....ಯಾವ ಕಾರಣಕ್ಕಾಗಿ?....ಅವಳು ನನಗೆ [illegible] ಮಾಡಿದ್ದಾಳೆ....ಆದರೀಗ ಅವಳು ಬೇನೆ ಬಿದ್ದಿದ್ದಾಳೆ....ಯಾರೂ

ಇಲ್ಲದ ಅವಳನ್ನು ಕಂಡು ಬರಬೇಕು....ಅವಳ ಯಜಮಾನರ ಅವಿವೇಕದಿಂದ ನನ್ನವರು ಜೇಲು ಕಂಡಿರುವಾಗ ಅಂತಹ ಮನೆಗೆ ನಾನು ಹೋಗುವದೆ?....ಅದಕ್ಕೂ ಇದಕ್ಕೂ ಯಾವ ಸಂಬಂಧ?....ಅವಳನ್ನು ನೋಡಿ ನನ್ನ ಮನೋರೋಗ ಹೆಚ್ಚೀತು....ನಾನು ಹೋಗುವದೇ ಬೇಡ...."

ಆ ದಿನವೂ ದಾಟಿತು. ನೀಲವ್ವನಿಂದ ಯಾವ ಸಮಾಚಾರವೂ ಬರಲಿಲ್ಲ. ಶನಿವಾರ ಮುಂಜಾನೆ ಎದ್ದವಳೇ ತಾರಾ ಮಾರುತಿ ಗುಡಿಗೆ ಹೋಗಿ ಬಂದಳು. ಮನೆಯ ಮುಂದಿನ ತುಳಸಿಕಟ್ಟೆ ಸಾರಿಸಿ ರಂಗವಲ್ಲಿ ತೀಡಿದಳು. ಒಳಗೆ ಹೋಗಿ ವಿಶ್ವಾಸನ ಪುಸ್ತಕಗಳನ್ನು ಜೋಡಿಸಿಟ್ಟು ಅವುಗಳ ಮುಂದೆ ದೀಪ ಹಚ್ಚಿದಳು. ಉರಿಯುತ್ತಿರುವ ದೀಪವನ್ನು ನೋಡುತ್ತ ತಾರಾ ವಿಚಾರಪರವಶಳಾದಳು. ಅಸಮಾಧಾನದ ಹೊರೆಯೊಂದು ತೇಲಿಬಂದು ಅವಳ ಹೃದಯ ಭಾರವಾಯಿತು; ಮನಸ್ಸು ವ್ಯಗ್ರವಾಯಿತು. ಮನೋರಮೆ ಜ್ವರದಿಂದ ಬಳಲುತ್ತಿರುವಾಗ ತಾನಲ್ಲಿಗೆ ಹೋಗದಿರುವದೇ ಅವಳ ಅಸಮಾಧಾನಕ್ಕೆ ಕಾರಣವಾಗಿತ್ತು. ಅವಳು ಪ್ರತಿದಿನವೂ ಹೋಗಿ ಬರಬೇಕೆಂದಿಚ್ಛಿಸುವಳು. ಆದರೆ ಅದಾವುದೋ ಭಾವ ಅವಳನ್ನು ಹಿಂದೆ ನೂಕುವದು. ಅದಕ್ಕಾಗಿ ಅವಳಿಗೆ ಪಶ್ಚಾತ್ತಾಪವಾಗುವದಾದರೂ ದಿನ ಸರಿದು ಹೋಗುವದು. ಈದಿನ ಅವಳಿಗೆ ಒಮ್ಮೆಯಾದರೂ ಹೋಗಬೇಕೆನ್ನಿಸಿತು.- "ಅವ್ವಾ." ಕಿಶಣ ಅದೇ ವೇಳೆಗೆ ಒಳಗೆ ಬಂದು ಕೇಳಿದ- "ನಾನು ಮನೂಮಾಮಿಯ ಮನೆಗೆ ಹೋಗಕೂಡದೇಕೆ?"

"ನಿನಗೇನು ಕೆಲಸವೋ ಅಲ್ಲಿ?"

"ಅವಳಾದರೂ ಚಿಕ್ಕಪ್ಪನನ್ನು ಕರೆಯಿಸಬಹುದು ಅವ್ವಾ" ಮಗನ ಮಾತನ್ನು ಕೇಳಿ ತಾರಾ ನಿಟ್ಟುಸಿರಿಟ್ಟಳು. ಅವಳಿಗೆ ಸೋಮವಾರ ಮತ್ತೆ ನೆನಪಾಯಿತು.- "ನಾನು ಹೋಗಿಬರಲಿ ಅವ್ವ?"

"ನೀಲವ್ವ ಬರಲಿ ಮಗು ಹೋಗುವಿಯಂತೆ" ಕಿಶಣನಿಗೆ ಆಮಟ್ಟಿಗೆ

ನಿರಾಸೆಯಾದರೂ ನೀಲವ್ವ ಬಂದ ಬಳಿಕಾದರೂ ಹೋಗಲು ಹೇಳಿದ ತಾಯಿಯನ್ನು ಅವನು ಸಂತೋಷದಿಂದಲೇ ನೋಡಿದ. ಈ ದಿನಗಳಲ್ಲಿ ತಾರಾ ಇಷ್ಟು ಸಮಾಧಾನವಾಗಿ ಎಂದೂ ಮಾತಾಡಿರಲಿಲ್ಲ. ಕಿರಣನಿಗೆ ತಾಯಿಯಲ್ಲಾದ ಈ ಮಾರ್ಪಾಟು ಹಿಗ್ಗಿನ ಹೊಳೆಯನ್ನೇ ಹರಿಯಿಸಿತು. ಮಧ್ಯಾನ್ನ ಮೂರು ಗಂಟೆಯಾದರೂ ನೀಲವ್ವ ಬರಲಿಲ್ಲ. ಕಿರಣ ಅನೇಕ ಬಾರಿ ಪಡಸಾಲೆಯಿಂದ ಹೊರ ಅಂಗಳಕ್ಕೆ ಹೋಗಿ ನೋಡಿ ಬಂದ. ನೀಲವ್ವನ ಸುಳಿವೇ ಇಲ್ಲ.–"ಅವ್ವ, ನೀಲವ್ವ ಬರುವದೇ ಇಲ್ಲ ಹೋಗು"

"ಅವಳು ಬರದಿದ್ದರೆ....?"

"ನಾನೊಬ್ಬನೇ ಹೋಗಿ ಬರುತ್ತೇನೆ ಅವ್ವ." ಮಗನ ಆತುರ ಕಂಡು ತಾರಾ ವಿಹ್ವಲಳಾದಳು. ನೀಲವ್ವ ಬಾರದಿದ್ದರೆ ಮಗನನ್ನು ಕರೆದುಕೊಂಡು ತಾನೇಕೆ ಹೋಗಬಾರದು ಎಂದು ವಿಚಾರಿಸಿದಳು. ಅಲ್ಲಿ ಹೋಗದಿದ್ದರೆ ಸಮಾಧಾನವಾಗುವದಿಲ್ಲವೆಂದು ಅವಳಿಗೆ ಖಚಿತ ವಾಗಿತ್ತು. ಸುಮ್ಮನೆ ಬೆಂದು ಹೋಗುವದಕ್ಕಿಂತ ಹೋಗಿ ಬರುವದೇ ಲೇಸೆಂದು ಅವಳು ನಿಶ್ಚಯಿಸಿದಳು. ಆ ಹೊತ್ತಿಗೆ ಬಾಗಿಲಲ್ಲಿ ಯಾರೋ ಬಂದು ನಿಂತಂತೆನ್ನಿಸಿದ್ದರಿಂದ ಕಿರಣ ಒಮ್ಮೆಲೇ ಆ ಕಡೆಗೆ ನೋಡಿ– "ನೀಲವ್ವ, ಬಂದಳು ಅವ್ವ" ಎಂದು ಕೂಗಿದ.

ಆದರೆ ಬಂದ ವ್ಯಕ್ತಿ ನೀಲವ್ವನಾಗಿರಲಿಲ್ಲ; ಜೀವಣ್ಣನಾಗಿದ್ದ.

೨೧

ಬಾಗಿಲಲ್ಲಿ ಬಂದು ನಿಂತ ಜೀವಣ್ಣನನ್ನು ನೋಡಿ ತಾರಾ ಅಪ ಶಕುನ ಕಂಡಂತೆ ಬೆದರಿದಳು. ನಾಲ್ಕು ತಿಂಗಳ ಹಿಂದೆ ತನ್ನ ಮನೆಯನ್ನು ನುಗ್ಗಿ ಅವನು ಮಾಡಿದ ಅನರ್ಥದ ಚಿತ್ರ ಅವಳ ಕಣ್ಣು ಮುಂದೆ ಸುಳಿದಾಗ ಸಿಟ್ಟಿನಿಂದ ಥರಥರ ನಡುಗಿದಳು. ಪತಿಯ ಜೇಲು ಯಾತ್ರೆಗೆ ಕಾರಣನಾದ ಆ ಕುಹಕನ ಮುಖಾವಲೋಕನ ಮಾಡುವದೂ ಕೂಡ ಅವಳಿಗೆ ಪಾಪವೆನ್ನಿಸಿತು. ಅವನು ಬಂದ ಕಾರಣವನ್ನು ಸಹ ವಿಚಾ ರಿಸಿದರೆ ಕತ್ತು ಹಿಡಿದು ಆಚೆಗೆ ತಳ್ಳಬೇಕೆನ್ನಿಸಿತು. ಅವಳು ಸಂತಾಪ

ದಿಂದ ಸುರಿಯುತ್ತಲಿದ್ದಳು. ಜೀವಣ್ಣ ನಡುಕದ ದನಿಯಲ್ಲಿ– "ನಾನು ಒಳಗೆ ಬರಲಿ ಮಗು?" ಎಂದು ಕೇಳಿದ.

"ಒಂದು ಹೆಜ್ಜೆ ಮುಂದೆ ಇಟ್ಟರೆ ಕಪಾಳ ಮೋಕ್ಷವಾದೀತು. ಸುಮ್ಮನೆ ಬಂದ ದಾರಿಯಿಂದ ತಿರುಗಿ ಹೋಗು." ತಾರಾ ಅವಡುಗಚ್ಚಿ ಹೇಳಿದಳು.

"ನನ್ನ ಕೆನ್ನೆ ಈಗಾಗಲೇ ಬಾತುಹೋಗಿದೆ. ಅದಕ್ಕೆ ನೀವು ಪೆಟ್ಟು ಕೊಡುವ ಆಗತ್ಯವೇ ಇಲ್ಲ ತಾಯಿ. ನನಗೆ ಬಹಳ ಪಶ್ಚಾತ್ತಾಪವಾಗಿದೆ."

"ಪಾಪ ಕರ್ಮಗಳನ್ನು ಮಾಡಿದ ಮೇಲೆ ನಿನಗೆ ಪಶ್ಚಾತ್ತಾಪವಾಗಿದೆಯಲ್ಲವೆ? ಈ ಪಶ್ಚಾತ್ತಾಪದ ಸೋಗಿನಲ್ಲಿ ಮತ್ತಾವ ಹೊಂಚು ಹಾಕಿರುವಿ? ಪಾಪಿಯ ಪಶ್ಚಾತ್ತಾಪವೂ ಒಂದು ಮೋಸವೆಂದು ನಾನು ಮತ್ತೆ ಮತ್ತೆ ಕಲಿಯಬೇಕಿಲ್ಲ ತಿಳಿಯಿತೆ?"

"ನೀವು ನನ್ನನ್ನು ಪೂರಾ ಕ್ಷಮಿಸಬೇಕು."

"ನಿನಗೆ ಪ್ರಾಯಶ್ಚಿತ್ತ ಕೊಡುವ ದೇವರು ಸಮರ್ಥನಿದ್ದಾನೆ. ಸುಮ್ಮನೆ ಹೋಗು–ನಿನ್ನ ಮುಖಾವಲೋಕನವೂ ನನಗೆ ಬೇಡ."

"ಸ್ವಲ್ಪ ಸಾವಧಾನದಿಂದ ನನ್ನ ಮಾತು ಕೇಳಿರಿ ತಾಯಿ. ನನಗೆ ಒಂದೆರಡು ಮಾತು ಹೇಳಬೇಕಾಗಿದೆ. ಆ ಕೆಲಸ ಮುಗಿದ ಮೇಲೆ ನಾನು ಒಂದು ಕ್ಷಣವೂ ಇಲ್ಲಿ ನಿಲ್ಲುವದಿಲ್ಲ. ನನಗೆ ವಿಶ್ವಾಸರಾಯರ ಮೇಲೆ ಕೋಪವಿರಲಿಲ್ಲ ಮಗಳೆ."

ಎಂತಲೇ ಅವರನ್ನು ಜೇಲಿಗೆ ಕಳಿಸಿದೆಯಲ್ಲವೆ?"

"ಅದು ನನ್ನ ಉದ್ದೇಶವಾಗಿರಲಿಲ್ಲ. ಅವರೆ ತಮ್ಮ ಮೇಲೆ ಹಾಕಿಕೊಂಡರೆ ನಾನೇನು ಮಾಡಲಿ? ಅವರು ತಪ್ಪ ಮಾಡಿದರು."

"ಅವರು ಪ್ರಾಮಾಣಿಕರಾಗಿ ಸತ್ಯ ನುಡಿದದ್ದು ತಪ್ಪೆಂದು ಬೊಗಳುವ ನಿನ್ನ ನಾಲಿಗೆ ಸೀಳಬೇಕು. ನಿನ್ನಂತಹ ನೀಚರಿಗೆ ಆ ದಿವ್ಯ ಹೃದಯದ ಪರಿಚಯವೆಂದಿಗೂ ಆಗದು."

"ತಮ್ಮವೆಂದು ಹೇಳಿದ ಆ ವಸ್ತುಗಳು ವಿಶ್ವಾಸರಾಯರವೇ ಆಗಿದ್ದವೆಂದು ನೀವೂ ನಂಬುತ್ತೀರಾ?" ತಾರಾ ಈ ಮಾತಿಗೆ ನಿರುತ್ತರಳಾದರೂ ಜೀವಣ್ಣನ ವಾದವನ್ನು ಪ್ರತಿಭಟಿಸುತ್ತ- "ಅವರು ನಿನ್ನಂತೆ ಕೃತಘ್ನರಲ್ಲ; ಉಂಡಮನೆಯ ಗಳ ಎಣಿಸುವವರಲ್ಲ. ಗೆಳೆಯನ ಮೇಲೆ ಬರಬಹುದಾದುದನ್ನು ತಮ್ಮ ಮೇಲೆ ಹಾಕಿಕೊಂಡದ್ದು ಅವರ ಧರ್ಮಬುದ್ಧಿ."

"ಈ ಧರ್ಮಬುದ್ಧಿಗೆ ವೆಂಕಟೇಶರಾಯರು ತಕ್ಕವರಾಗಿರಲಿಲ್ಲ ತಾಯಿ. ಅವರು ಧರ್ಮಲಂಡರಾಗಿ ನೀಚರಾಗಿರುವ ಮಾತು ಜಗತ್ತಿಗೇ ಗೊತ್ತಾಗಿದೆ. ವಿಶ್ವಾಸರಾಯರು ಸ್ವಲ್ಪ ಜವಾಬುದಾರಿ ಹಾರಿಸಿಕೊಂಡು ಮಾತಾಡಿದ್ದರೆ ಈ ಅನರ್ಥವೇ ಆಗುತ್ತಿರಲಿಲ್ಲ. ಆಗಬಾರದ್ದು ಆಗಿ ಹೋಯಿತು. ಈಗ ಮಾತನಾಡಿ ಪ್ರಯೋಜನವಿಲ್ಲ. ವೆಂಕಟೇಶರಾಯರನ್ನು ಮಣ್ಣು ಮುಕ್ಕಿಸುವ ನನ್ನ ಯೋಚನೆಗಳಿಲ್ಲ ಬುಡಮೇಲಾದರೂ ದೇವರು ಅವರಿಗೆ ತಕ್ಕ ಶಾಸನ ಮಾಡಿದ್ದಾನೆ."

"ಶಾಸನವಾದದ್ದು ವೆಂಕಟೇಶರಾಯರಿಗಲ್ಲ; ನಮ್ಮವರಿಗೆ. ಅವರ ಪತ್ನಿಯಾದ ನನಗೆ. ಈ ಜಗತ್ತಿನಲ್ಲಿ ಸಿರಿವಂತರಿಗೆ ಶಾಸನವಾಗುವದಿಲ್ಲ."

"ತಾವು ಕೇಳಿದಂತಿಲ್ಲ ತಾಯಿ. ವೆಂಕಟೇಶರಾಯರ ಕತೆ ಮುಗಿಯಿತು. ಸಟ್ಟಾ ವ್ಯಾಪಾರದಲ್ಲಿ ಎಲ್ಲವನ್ನೂ ಕಳೆದುಕೊಂಡು ನಿರ್ಗತಿಕರಾದರು. ಊರಲ್ಲಿ ಮುಖ ತೋರಿಸುವದೂ ಸಾಧ್ಯವಿಲ್ಲದೆ ಎಲ್ಲೆಲ್ಲೋ ಸುತ್ತಾಡುತ್ತಿದ್ದಾರೆ. ಪಾಪ! ಮನೋರಮಾಬಾಯಿಯನ್ನು ನೆನೆದರೆ ನನಗೆ ಸಂಕಟವಾಗುತ್ತದೆ."

ಈ ಹೊಸ ಸುದ್ದಿಯನ್ನು ಕೇಳಿ ತಾರಾ ತೆತ್ತರಿಸಿದಳು.- "ಏನು ವೆಂಕಟೇಶರಾಯರು ತಲೆ ಮರೆಯಿಸಿಕೊಂಡಿರುವರೆ?"

"ಹೌದು ಮಗಳೆ. ಅವರಿನ್ನೆಂದಿಗೂ ಮೇಲೇಳಲಾರರು."

"ಈ ಸಂಗತಿಯನ್ನು ಅವರ ಪತ್ನಿ ಅರಿತಿದ್ದಾಳೆಯೆ?"

"ಊರಿಗೆಲ್ಲ ಈ ಸುದ್ದಿ ಗೊತ್ತಾದ ಮೇಲೆ ಅವರಿಗೆ ಗೊತ್ತಾಗಿರುವದೆ? ಈ ಸುದ್ದಿ ಗೊತ್ತಾದಂದಿನಿಂದ ಅವರು ಎದೆಯೊಡೆದುಕೊಂಡಂತೆ

ಮಾಡುತ್ತಿದ್ದಾರೆಂದು ನೀಲವ್ವ ಹೇಳಿದಳು.– ಅವರಿಗಾಗಿ ನನ್ನ ಕರುಳು ಕಿವಿಚುತ್ತಿದೆ ಮಗಳೆ....ನಾನೊಂದು ಮಹಾಪರಾಧ ಮಾಡಿದ್ದೇನೆ. ಆ ಅಪರಾಧದ ಪರಿಮಾರ್ಜನೆಗಾಗಿಯೇ ನಾನು ಬಂದದ್ದು. ಇದನ್ನಷ್ಟು ಕೇಳಿಕೊಂಡರೆ ನನ್ನ ಎದೆ ಹಗುರಾಗುತ್ತದೆ....ವೆಂಕಟೇಶರಾಯರು ನನ್ನ ಮಗಳ ಮೇಲೆ ಕೈಮಾಡಿದಂದಿನಿಂದ ನನ್ನಲ್ಲಿ ಸೇಡಿನ ಭಾವನೆ ತುಂಬಿತು ಅವರನ್ನು ಏನಾದರೂ ಮಾಡಿ ಮೂಗು ತಿಕ್ಕಿಸಬೇಕೆಂದು ನಿರ್ಧರಿಸಿದೆ. ಅವರ ವ್ಯವಹಾರದಲ್ಲಿ ವಿಶ್ವಾಸರಾಯರು ಬರುವ ಮೊದಲು ನನ್ನ ಕೈವಾಡವೇ ನಡೆದಿತ್ತು. ಅವರ ವ್ಯವಹಾರಗಳನ್ನು ಹಾಳುಮಾಡಿ ಸೇಡು ತೀರಿಸಿಕೊಳ್ಳುತ್ತಲಿದೆ. ಆದರೆ ವಿಶ್ವಾಸರಾಯರ ಪ್ರಾಮಾಣಿಕತೆ ಅಮೇಲೆ ಅಡ್ಡಬಂತು. ನಾನವರಿಗೆ ಸೂಕ್ಷ್ಮವಾಗಿ ಹೇಳಿದ ಮಾತುಗಳಿಂದ ಏನೂ ಪ್ರಯೋಜನವಾಗಲಿಲ್ಲ. ಎಲ್ಲ ವ್ಯವಹಾರದ ಮೇಲ್ವಿಚಾರಣೆಯನ್ನೂ ತಾವೇ ವಹಿಸಿಕೊಂಡು ನನ್ನ ಆಟ ಸಾಗದಂತೆ ಮಾಡಿದರು. ಏನಾದರೂ ಮಾಡಿ ವಿಶ್ವಾಸರಾಯರನ್ನು ಇಲ್ಲಿಂದ ಎಬ್ಬಿಸಬೇಕೆಂದು ನಾನು ಮಾಡಿದ ಪ್ರಯತ್ನ ವ್ಯರ್ಥವಾದವು. ಕೊನೆಯ ಉಪಾಯವೆಂದು ಅವರಿಗೂ ಮನೋರಮಾ ತಾಯಿಗೂ ಇಲ್ಲದ ಸಂಬಂಧ ಹೇಳಿ ನಿಮ್ಮ ಮನಸ್ಸನ್ನು ಕೆಡಿಸಿದೆ. ನನಗೀಗ ಬಹಳ ಪಶ್ಚಾತ್ತಾಪವಾಗಿದೆ ತಾಯಿ. ನಾನು ಮಾಡಿದ್ದು ಮಹಾಪರಾಧ. ನೀವು ಕ್ಷಮಿಸಿದರೆ ನಾನು ಬದುಕುತ್ತೇನೆ ತಾರಕ್ಕ....” ಎಂದು ಹೇಳಿ ಮುಗಿಸಿದ ಜೀವಣ್ಣ ಒಂದೇ ಸವನೆ ಕಣ್ಣೀರು ಹಾಕಿದ. ಅವನ ಮಾತು ಕೇಳುತ್ತಿರುವಂತೆ ತಾರಾನ ಕರುಳುಗಳು ಜಗ್ಗಿದವು. ಒಂದೊಂದು ಮಾತೂ ಶಲ್ಯದಂತೆ ಇರಿಯಿತು. ಅವಳಿಗೆ ತಾನೊಂದು ಅನ್ಯಾಯದ ಮಡುವಿನಲ್ಲಿ ಸಿಕ್ಕು ಜಿಬ್ಬೆಯಾದಂತೆ ಭಾಸವಾಯಿತು. ತಾನು ಮನೋರಮೆಯನ್ನು ಕಂಡ ರೀತಿಗೆ ಈ ಪಾಪಾತ್ಮನೇ ಕಾರಣವೆನ್ನಿಸಿ ದಾಗ ಅವಳು ಭುಗಿಲ್ಲೆಂದಳು. ಸಂತಾಪದ ಭರದಲ್ಲಿ ಅವಳಿಗೆ ಜಗತ್ತು ತಿರುಗುತ್ತಿರುವಂತೆ ಭಾಸವಾಯಿತು. ಅವಳು ಒಂದು ಹೆಜ್ಜೆ ಮುಂದೆ ಹೋಗಿ– “ಎಂತಹ ಅನರ್ಥ ಮಾಡಿದೆ ಪಾಪಿ!....” ಎನ್ನುತ್ತ ಎರಡೂ ಕೈಗಳಿಂದ ಮೊಗ ಮುಚ್ಚಿಕೊಂಡು ಬಿಕ್ಕಿಬಿಕ್ಕಿ ಅಳಲಾರಂಭಿಸಿದಳು. ಜೀವ ಣ್ಣನ ಕಣ್ಣಲ್ಲೂ ನೀರುಕ್ಕಿದವು. ಅವನು ಸೋತ ಸ್ವರದಲ್ಲಿ– “ಎಲ್ಲವನ್ನು

ಹೇಳದೆ ನನ್ನ ಹೃದಯ ಹಗುರಾಗುತ್ತಿರಲಿಲ್ಲ ತಾರಕ್ಕ. ವಿಶ್ವಾಸರಾಯರಿಗೂ ಇದನ್ನೆಲ್ಲ ಪತ್ರ ಬರೆದು ತಿಳಿಸಿದ್ದೇನೆ. ಅವರೂ ನನ್ನನ್ನು ಕ್ಷಮಿಸಬಹುದೆಂದು ನಂಬಿದ್ದೇನೆ ಈಗ ಹೆಚ್ಚಿಗೆ ಮಾತನಾಡಲಾರೆ ತಾಯಿ, ನನ್ನ ಕೆಲಸ ಮುಗಿದಂತಾಯಿತು" ಎನ್ನುತ್ತ ಜೀವಣ್ಣ ತಾರಾನ ಎರಡೂ ಪಾದಗಳಿಗೆ ನಮಸ್ಕರಿಸಿ ಹೊರಬಿದ್ದ. ಹೊರಳಿ ಕೂಡ ನೋಡದೆ ಭಾರವಾದ ಹೆಜ್ಜೆಗಳನ್ನು ತೂರುತ್ತ ನಡೆದ.

ಹೋಗುತ್ತಿರುವ ಜೀವಣ್ಣನನ್ನು ತಡೆದು ತಾರಾ– "ಮನೋರಮೆಯ ಬಗ್ಗೆ ಹೇಳಿದ ಮಾತುಗಳಲ್ಲಿ ಯಾವ ಅರ್ಥವೂ ಇಲ್ಲವೆ?" ಎಂದು ಕೂಗಿದಳು. "ಅದೆಲ್ಲ ನಾನು ಕಟ್ಟಿದ ಕತೆ ತಾಯಿ. ಪೂರಾ ಸುಳ್ಳು" ಎನ್ನುತ್ತ ಜೀವಣ್ಣ ಮುನ್ನಡೆದ. ತನ್ನ ವಿವೇಕವಿಲ್ಲದ ಬುದ್ಧಿಯಿಂದ ಆದ ಅನಾಹುತವನ್ನು ನೆನೆದು ತಾರಾನಿಗೆ ಆದ ಸಂಕಟ ಹೇಳತೀರದು ಅವಳಿಗೆ ಮನೋರಮೆಯ ವಸ್ತುಸ್ಥಿತಿಯ ಅರಿವಾಯಿತು.– "ಇದೆಂತಹ ವಿಪರೀತ ಕಾಲ" ಎಂದು ಮರಮರನೆ ಮರುಗಿದಳು. ಅವಳಿಗೆ ಕೂಡಲೆ ಮನೋರಮೆಯನ್ನು ಕಂಡು ಕಾಲು ಹಿಡಿಯಬೇಕೆನ್ನಿಸಿತು. ಅವಳು ಮಹಾಸಾಧ್ವಿಯಾಗಿದ್ದಾಳೆಂದು ಪತಿ ಹೇಳುತ್ತಿದ್ದ ಮಾತುಗಳಲ್ಲಿ ತಾರಾನಿಗೆ ಅತ್ಯಂತ ವಿಶ್ವಾಸ ಮೂಡಿತು. ಅವಳು ಮಾಡಿದ ಅನಂತ ಉಪಕಾರಗಳನ್ನು ನೆನೆಯುತ್ತ– "ಅವಳು ಈಗ ಬಡವಿಯಾದರೇನು? ಅವಳ ಹೃದಯ ಸಂಪತ್ತು ಯಾರಿಗೆ ಬಂದೀತು?" ಎಂದುಕೊಂಡು ಒಳಗೆ ನಡೆದು ದೇವರ ಕೋಣೆಯಲ್ಲಿ ದೀಪ ಹಚ್ಚಿದಳು ತಾರಾ. ಈ ಮಾತಿನ ಗೊಂದಲದಲ್ಲಿ ಅವಳಿಗೆ ದೀಪ ಹಚ್ಚುವ ವೇಳೆಯೂ ತಿಳಿದಿರಲಿಲ್ಲ. ದೇವರಿಗೆ ಅರಿಷಿಣ, ಕುಂಕುಮ ಏರಿಸಿ ತಾನೊಂದು ಬಟ್ಟು ಇಟ್ಟುಕೊಂಡು ಹೊರಬಂದಳು.– "ಕಿರಣಾ, ಉಷಾ ರಾಣಿಯನ್ನು ಊಟಕ್ಕೆ ಕರೆದುಕೊಂಡು ಬಾ."

"ಮನೂಮಾಮೀ ಮನೆಗೆ ಯಾವಾಗ ಹೋಗೂದು ಅವ್ವ?"

"ಈಗ ಕತ್ತಲಾಯಿತು ನಾಳೆ ಹೋಗೋಣಂತ ಹೋಗು ಉಷೆಯನ್ನು ಕರೆದುಕೊಂಡು ಬಾ ಕತ್ತಲಾಯಿತು" ಕಿರಣ ಓಡುತ್ತ ಹೋದ.

ಅದೇ ವೇಳೆಯಲ್ಲಿ ನೀಲವ್ವನ ಪರಿಚಯದವಳೊಬ್ಬಳು ತಾರಾನಿಗೆ ಒಂದು ಪತ್ರ ತಂದುಕೊಟ್ಟಳು. ಅವಳಿಗೆ ಹಸ್ತಾಕ್ಷರ ಳ ಪರಿಚಯ ಹತ್ತಿತು. ಅವಳು ದೀಪ ದೊಡ್ಡದು ಮಾಡಿ ಇನ್ನೊಮ್ಮೆ ತನ್ನ ವಿಳಾಸ ನೋಡಿದಳು. ಅವಳಿಗೆ ಸಂದೇಹ ಉಳಿಯಲಿಲ್ಲ. ವಿಶ್ವಾಸನ ಮುತ್ತಿನಂತಹ ಅಕ್ಷರ ಎದೆಯವಚಿಕೊಂಡಾಗ ಅವಳೆದೆ ಹಾರುತ್ತಿತ್ತು. ಆತುರದಿಂದ ಮೇಲಿನ ಹೊದಿಕೆ ಬಿಚ್ಚಿ ಕಾಗದ ಬಿಡಿಸಿದಾಗ ಅದೊಂದು ಸುದೀರ್ಘ ಪತ್ರವಾಗಿತ್ತು. ಆದರ ಒಕ್ಕಣಿಕೆ ಇದು;

**ನನ್ನೊಲವಿನ ತಾರಾ;**

ಇಂತಹ ಪತ್ರ ಬರೆಯಬಹುದೆಂದು ನನಗೆಂದೂ ಅನ್ನಿಸಿರಲಿಲ್ಲ. ನಿನಗೂ ಇದೂ ಅನಿರೀಕ್ಷಿತವಾಗಿದೆ. ಮಾನವ ಜೀವಿತವನ್ನು ಅದಾವುದೋ ಕಾಣದ ಕೈ ಅವನಿಗೆ ತಿಳಿಯದ ಹಾಗೆಯೇ ಯಾವಾಗಲೂ ರೂಪಗೊಳಿಸುತ್ತದೆ ಎಂಬುದನ್ನು ನಾವಿಬ್ಬರೂ ಗಮನಿಸಬೇಕಾಗಿದೆ. ಇದಕ್ಕೆ ನನ್ನ ಜೀವನವೇ ಬಲವಾದ ನಿದರ್ಶನ. ನನ್ನ ಜೀವನದಿಂದ ನಿನ್ನ ಜೀವನ ಭಿನ್ನವಾಗಿಲ್ಲವಾಗಿ ನನ್ನ ಮಾತುಗಳೆಲ್ಲ ನಮ್ಮ ಜೀವನಕ್ಕೆ ಸಂಬಂಧಿಸಿವೆಯೆಂದು ನೀನು ತಿಳಿಯುವಿ. ನಾವು ಕಾಣಬೇಕಾದ ಜೀವನಕ್ಕಿಂತ ಕಂಡ ಜೀವನ ಬೇರೆಯೇ ಆಗಿದೆಯೆಂದು ನಾವೀಗಲೇ ಕಂಡುಂಡ ಅನುಭವಗಳಿಂದ ಹೇಳಬಹುದಾಗಿದೆ. ಅಣ್ಣನಾಶ್ರಯದಲ್ಲಿ ಹಾಯಾಗಿ ಬದುಕಿಕೊಂಡು ಕಾವ್ಯದೇವಿಯ ಆರಾಧನೆ ಮಾಡಬೇಕೆಂದು ನಾನದೆಷ್ಟೋ ಕನಸು ಕಂಡಿದ್ದೆ. ಆದರೆ ಅದು ಸಾಧಿಸದೆ ಗೋವಿನಪುರದ ಶಿಕ್ಷಕನಾಗಬೇಕಾಯಿತು. ಆ ಜೀವನದಲ್ಲಾದರೂ ಆದರ್ಶವನ್ನು ಕಲ್ಪಿಸಿಕೊಂಡು ಜೀವನದ ಮಾರ್ಗವನ್ನು ಸುಗಮಗೊಳಿಸಬೇಕೆಂದಿದ್ದೆ ಅದೂ ಆಗಲಿಲ್ಲ. ಬದಲಾಗಿ ದಾರಿದ್ರ್ಯ ಜೀವನದ ಕಟು ಅನುಭವಗಳನ್ನು ಸಹಿಸಬೇಕಾಯಿತು. ಇದರಲ್ಲಿ ಪಾಲುಗಾರಳಾದ ನಿನಗೆ ಹೆಚ್ಚಿನ ಸಂಗತಿಗಳನ್ನು ಹೇಳುವದೇ ಬೇಡ ಆ ಕಹಿ ನೆನಹು ಇಂದಿಗೂ ನನ್ನನ್ನೆಚ್ಚರಿಸುತ್ತದೆ. ಈ ಬಡತನದ ಭೂತಕ್ಕೆ ನಾವೆಲ್ಲ ಬಲಿಯಾಗಿ ಅಳಿಸಿ ಹೋಗಬಹುದೆಂಬ ಭಾವನೆಯಲ್ಲಿ ನನ್ನ ಕಾವ್ಯ ಜೀವನ ತತ್ತರಿಸುತ್ತಲಿತ್ತು. ನೆಮ್ಮದಿಗು

ಬಾಳಿಗೆ ಹಾತೊರೆದೆ. ಜೀವನದ ನೆಮ್ಮದಿಗಾಗಿ ಕಾವ್ಯ ಶಕ್ತಿಯನ್ನು ತೊರಲು ಸಿದ್ಧನಾದೆ. ಕಾವ್ಯ ಶಕ್ತಿಯನ್ನು ಜೀವನದ ಒರೆಗಲ್ಲಿಗೆ ತಿಕ್ಕಿ ಬಂಟನಾಗಿ ನಿಲ್ಲುವ ಯೋಗ್ಯತೆ ನನ್ನಲ್ಲಿರಲಿಲ್ಲವೇನೊ. ಕಾವ್ಯದೇವಿಯನ್ನು ಕಡೆಗಣಿಸಲು ಸಿದ್ಧನಾದೆ. ಆದರೆ ನೆಮ್ಮದಿಯ ಜೀವನದಲ್ಲಿ ಆ ಶಕ್ತಿಯನ್ನು ಉಳಿಸಿಕೊಳ್ಳುವ ಹಂಬಲವೂ, ಧೈರ್ಯವೂ ನನ್ನಲ್ಲಿರುವದೆಂದು ನಂಬಿದೆ. ಆ ನಂಬಿಕೆಯೇ ನನ್ನನ್ನು ದುರ್ಬಲನನ್ನಾಗಿ ಮಾಡಿತು.

ದುರ್ಬಲ ಮನಸ್ಸಿಗೊಂದು ದಾರಿ ಸಿಗುವದು ದೈವೀ ಸಂಕೇತವಿರುವಂತೆ ನನಗೀಸ್ಥಿತಿಯಲ್ಲಿ ವೆಂಕಟೇಶನ ದರ್ಶನ ಲಭಿಸಿತು. ನನ್ನ ಜೀವನಕ್ಕೊಂದು ಹೊಸ ಮಾರ್ಗ ಸಿಕ್ಕಿತೆಂದು ಹಿಗ್ಗಿದೆ. ನೆಮ್ಮದಿಯ ಜೀವನದಲ್ಲಿ ನಿಮ್ಮನ್ನೆಲ್ಲ ತೇಲಾಡಿಸುವ ಅನುವು ಸಿಕ್ಕದ್ದಕ್ಕಾಗಿ ನನಗೆ ಸಂತೋಷವೇ ಆಯಿತು. ವೆಂಕಟೇಶನ ವ್ಯವಹಾರ ಜಗತ್ತಿನಲ್ಲಿ ವಿಹರಿಸತೊಡಗಿದೆ. ಆದರೆ ಇಲ್ಲಿ ಒಂದು ಮಾತನ್ನು ಹೇಳಲೇಬೇಕು. ನನಗವನ ಮಿತ್ರತ್ವದ ಬಗ್ಗೆ ಅಭಿಮಾನವಿತ್ತು. ಮನೋರಮೆಯ ಗಂಡನಾದವನು ನನ್ನ ಗೆಳೆಯನೇ ಆಗಿದ್ದರಿಂದ ನನಗವನ ಬಗ್ಗೆ ಹೆಚ್ಚಿನ ಆದರವೇ ಮೂಡಿತು. ಆದರೆ ಅವನ ವ್ಯವಹಾರವನ್ನು ಖಚಿತಕರಿಸುವ ಮೊದಲು ನನಗದರ ಪರಿಚಯವಿರಲಿಲ್ಲ. ದಿನಕಳೆದು ಹಾಗೆ ನನಗೆಲ್ಲವೂ ಗೊತ್ತಾದಾಗ ನಾನು ಹೌಹಾರಿ ಸಾಧ್ಯವಾದಷ್ಟು ಬೇಗ ನುಸುಳಿಹೋಗ ಬಯಸಿದೆ. ಸಾಧ್ಯವಾಗಲಿಲ್ಲ. ನನ್ನ ಸಂಕಟವನ್ನು ನಾನೇ ತಾಳದಾದೆ. ಅನೇಕ ಸಲ ನನ್ನ ಶಕ್ತಿಯನ್ನು ಪರೀಕ್ಷಿಸಲು ಕಾವ್ಯ ದೇವಿಯನ್ನು ಕರೆದಾಗ, ಹೃದಯ ರುಕ್ಷವಾಗಿದೆಯೆಂದರಿತಾಗ ನನ್ನ ದುರ್ದೆಶೆಗಾಗಿ ಮರುಗಿದೆ; ಕಣ್ಣೀರು ಹಾಕಿದೆ. ಒಮ್ಮೆಲೇ ಎದ್ದು ಹೋಗುವದು ನನ್ನಿಂದ ಸಾಧ್ಯವಾಗಲಿಲ್ಲ. ಗೆಳೆಯನ ಔದಾರ್ಯ ನನ್ನನ್ನು ಮೂಕನನ್ನಾಗಿಸಿತು. ಇದರ ಜೊತೆಗೆ ಅವನನ್ನು ತಿದ್ದುವ ಯೋಜನೆಯನ್ನಿಟ್ಟುಕೊಂಡು ಮನೋರಮೆಯ ಬಾಳಿಗೊಂದು ಕಳೆಯನ್ನು ತರಬೇಕೆಂದು ಹಂಬಲಿಸಿದೆ. ಯಾವುದೂ ಸಾಧ್ಯವಾಗಲಿಲ್ಲ. ನನ್ನ ಹೃದಯ ಬರಡಾಯಿತು. ಕೊನೆಕೊನೆಗೆ ನಿನ್ನ ಅಭಿಷ್ಟದಂತೆ ಎಲ್ಲವೂ ಸರಿಯಾಗಬಹುದಿತ್ತು. ಆದರೆ

ವಿಧಿ ಕಲ್ಪಿಸಿದ ಮಾರ್ಗವೇ ಬೇರೆಯಾಗಿತ್ತು; ಜೈಲುವಾಸ ನನ್ನ ಹಣೆಯಲ್ಲಿ ಬರೆದಿತ್ತು. ನಾವೆಲ್ಲ ಸೂತ್ರದ ಬೊಂಬೆಗಳಿದ್ದಂತೆ ತಾರಾ! ನಮ್ಮನ್ನು ಕುಣಿಸುವ ಕೈಯೊಂದು ಬೇರೆಯೇ ಇದೆ-ಅಲ್ಲವೆ?

ಬಾಳ ನೆಮ್ಮದಿಗಾಗಿ ಹಂಬಲಿಸಿದ ನನ್ನ ಹೃದಯದಿಂದ ಅದು ತಳಕಿತ್ತಿ ಓಡತೊಡಗಿತು. ಹೃದಯ ಉರಿಯುವ ಕೆಂಡವಾಗಿ ನಾನಿಟ್ಟ ಹೆಜ್ಜೆಗಾಗಿ ನನಗೇ ಪಶ್ಚಾತ್ತಾಪವಾಗತೊಡಗಿತು. ಸಾಹಿತ್ಯ ಶಕ್ತಿಯನ್ನು ಕಳೆದುಕೊಂಡ ನಾನು ಬದುಕಿದ್ದೂ ಸತ್ತಂತೆ ಎಂದು ಭಾವಿಸತೊಡಗಿದೆ. ಜೀವನ ನನಗೆ ಬೇಸರವಾಗಿ ನನ್ನನ್ನೇ ನಾನು ತಿರಸ್ಕರಿಸಲಾರಂಭಿಸಿದೆ. ಇಂತಹ ಹೊತ್ತಿನಲ್ಲಿ ನೀನು ಮನೋರಮೆಯ ಬಗ್ಗೆ ತಳೆದ ಭಾವ ನನ್ನನ್ನು ಪೂರಾ ರಸಾತಳಕ್ಕಿಳಿಸಿತು. ನನ್ನ ದುರ್ದೈವಕ್ಕೆ ಪೂರಾ ಉಕ್ಕು ಬಂದಂ ತಾಯಿತು. ಸಮಸ್ತ ವಿಶ್ವವೂ ನನ್ನನ್ನು ಅವಿಶ್ವಾಸದಿಂದ ನೋಡಿದ್ದರೆ ನಾನು ಎದೆಗೆಡುತ್ತಿರಲಿಲ್ಲ. ಆದರೆ ನಿನ್ನ ಈ ರೀತಿಯಿಂದ ನಾನು ಪೂರಾ ದಿಗ್ಭ್ರಾಂತನಾದೆ. ನಿನ್ನ ಅಭೀಷ್ಟದಂತೆ ಒಮ್ಮೆಲೇ ಎದ್ದು ಹೋಗುವದು ಮನೋರಮೆಗೊಂದು ಅನ್ಯಾಯ ಮಾಡಿದಂತಾಗುವದೆಂದು ನಂಬಿ ಸುಮ್ಮನಿದ್ದು ಬಿಟ್ಟೆ. ಇದರಲ್ಲಿ ಜೀವಣ್ಣನ ಕೈವಾಡವೇ ಇತ್ತೆಂ ಬುದನ್ನು ನೀನು ತಿಳಿದುಕೊಂಡಿರಬಹುದು. ಅದಕ್ಕಾಗಿ ಅವನೀಗ ಬಹಳ ಪಶ್ಚಾತ್ತಾಪಗೊಂಡು ನನಗೆ ಪತ್ರ ಬರೆದಿದ್ದಾನೆ. ನಿನ್ನನ್ನು ಕಂಡು ತಿಳಿಸುವೆನೆಂದೂ ಬರೆದಿದ್ದಾನೆ. ಈಗಾಗಲೆ ಅವನ ಮಾತಿನಿಂದ ನಿನ್ನ ಭ್ರಮ ನಿರಸನವಾಗಿರಬಹುದು. ಅವನು ನನ್ನನ್ನು ಕ್ಷಮಿಸಲು ಕೇಳಿಕೊಂ ಡಿದ್ದಾನೆ. ಅವನ ಮೇಲೂ ನನಗೆ ದ್ವೇಷವಿಲ್ಲ. ಅವನನ್ನೆಂದೋ ಕ್ಷಮಿಸಿದ್ದೇನೆ.

ಮನೋರಮೆ ಮಹಾ ಸಾಧ್ವಿಯಾಗಿದ್ದಾಳೆಂದು ನಿನಗೆ ಖಚಿತವಾ ದೊಡನೆಯೇ ನೀನವಳನ್ನು ಕಾಣಬೇಕು. ತಪ್ಪನ್ನು ಒಪ್ಪಿಕೊಂಡು ಹೃದಯ ಶುದ್ಧಿ ಮಾಡಿಕೊಳ್ಳಬೇಕು. ಜೀವಣ್ಣ ಪತ್ರದಲ್ಲಿಯ ಇನ್ನೊಂದು ವಿಷಯ ಸಟ್ಟಾವ್ಯಾಪಾರದಲ್ಲಿ ವೆಂಕಟೇಶ ಪೂರಾ ಮುಳುಗಿ ಈಗ ತಲೆ ತಪ್ಪಿಸಿಕೊಂಡಿದ್ದಾನೆಂದು ತಿಳಿದು ನನ್ನ ಕರುಳು ಕಿವುಚುತ್ತಲಿದೆ. ಹಣದ

ಬೆನ್ನು ಹತ್ತಿದವರ ಪಾಡು ಹೀಗಾಗುವದು ಸ್ವಾಭಾವಿಕವಾದರೂ ಅವನು ನನಗೆ ಮಾಡಿದ ಅನಂತ ಉಪಕಾರಗಳನ್ನು ನೆನೆದಾಗ ಜೀವ ತಲ್ಲಣಿಸುತ್ತದೆ. ಈಗ ನನ್ನ ಬಿಡುಗಡೆಯ ಅಲ್ಪ ಆಸೆಯೂ ಕಳಚಿಬಿದ್ದಂತಾಯಿತು. ನನ್ನ ಬಗ್ಗೆ ಏನಾದರೂ ಸಹಾಯ ಮಾಡಬಹುದಾದ ವ್ಯಕ್ತಿಯ ಪಾಡೇ ಹೀಗಾದಮೇಲೆ ನನಗೆ ಸಹಾಯ ಮಾಡಬೇಕಾರು? ಎಂದು ಎಣಿಕೆ ಹಾಕುತ್ತಿದ್ದೆ. ನಾನು ಬಹಳ ದಿನ ಯೋಚನೆ ಮಾಡಬೇಕಾದ ಪ್ರಸಂಗವೇ ಬರಲಿಲ್ಲ. ಈ ಸೋಮವಾರವೇ ನನ್ನ ಬಿಡುಗಡೆಯಾಗುವದೆಂದು ಅಧಿಕಾರಿಗಳು ಹೇಳಿದಾಗ ನನಗಾದ ಆಚ್ಚರಿ, ಸಂತೋಷ ಅಷ್ಟಿಷ್ಟಲ್ಲ. ಈ ಬಿಡುಗಡೆಯ ಕಾರಣಳು ಮನೋರಮೆಯೆಂದರಿತಾಗ ನಾನು ಮೂಕನಾದೆ. ಆವಳ ತ್ಯಾಗ ಬುದ್ಧಿ ನನ್ನ ಕಣ್ಣಲ್ಲಿ ನೀರು ತರಿಸಿತು. ತನ್ನ ಅವಸ್ಥೆಯನ್ನರಿತೂ ಅವಳು ಮಾಡಿದ ಸಹಾಯ ಅದೆಷ್ಟು ಅಮೋಘವಾಗಿದೆ ನೋಡು ತಾರಾ! ಅವಳ ಉಪಕಾರದ ಹೊರೆಯನ್ನು ನಾವು ಹೇಗೆ ತೀರಿಸಬೇಕೊ ಯೋಚಿಸು. ನಾನೀಗ ಹೊರಡುವ ತಯಾರಿಯಲ್ಲಿದ್ದೇನೆ. ನಾಲ್ಕು ತಿಂಗಳು ಕಳೆದ ನನಗೆ ಈ ಎರಡು ದಿನಗಳನ್ನು ಕಳೆಯುವದು ದುಸ್ತರವಾಗಿದೆ. ನನ್ನ ಧ್ಯಾನವೆಲ್ಲ ನಿನ್ನೆಡೆಗೇ.

ಕೆಲವು ದಿನಗಳಲ್ಲಿಯೇ ನಮ್ಮ ಮನೆಯಲ್ಲಿ ಒಂದು ಹೊಸ ಕಣ್ಣು ತೆರೆಯುವವಿದೆಯಲ್ಲ ತಾರಾ. ಆ ಕಣ್ಣು ನಮ್ಮ ಬಾಳಿನ ಹೊಸ ಕಣ್ಣನ್ನೇ ತೆರೆಯಿಸುವದು ನೋಡು ಹೊಸ ಬಾಳಿನ ಯೋಜನೆಗಳನ್ನು ಹೊತ್ತುಕೊಂಡೇ ನಾನು ಹೊರ ಬರುತ್ತೇನೆ. ಈ ಜೈಲುವಾಸ ನನ್ನ ಬಾಳಿನಲ್ಲಿ ತೇಲಿಬಂದ ಅಪೂರ್ವ ಅನುಭವವೇ ಆಗಿದೆ. ಇದಕ್ಕಾಗಿ ನಾನು ತಲೆ ತಗ್ಗಿಸಬೇಕಾದ ಕಾರಣವಿಲ್ಲ. ನನ್ನ ಹೊಸ ಬಾಳಿನ ಅಮೋಘ ಕಲ್ಪನೆಗೆ ಈ ಏಕಾಂತ ಘನವಾದ ಸಾಮಗ್ರಿಯನ್ನೊದಗಿಸಿದೆ. ನನ್ನ ಬಾಳು ಹೊಚ್ಚ ಹೊಸದಾಗಿ ನಿಲ್ಲಬೇಕಾಗಿದೆ. ಹೊಸ ಬಾಳು ನನ್ನ ಜೀವನದಲ್ಲಿ ಹೊಸ ಕ್ರಾಂತಿಯನ್ನೇ ಮಾಡಬೇಕಾಗಿದೆ. ಸಿಡಿದು ಹೋದ ಸಾಹಿತ್ಯದೇವಿ ನನ್ನ ಹೊಸ ಬಾಳಿನ ಕಹಳೆ ಕೇಳಿ ಮತ್ತೆ ಬರಬೇಕಾಗಿದೆ.

ತಾರಾ, ಬರೆಯಬೇಕಾದ ವಿಷಯಗಳಿಗಿಂತ ಹೇಳಬೇಕಾದ ವಿಷಯ

ಗಳೇ ಬಹಳವಾಗಿವೆ. ಸೋಮವಾರ ಸಂಜೆ ಎಂದು ಬರುವದೋ ಎಂದು ಹಾತೊರೆಯುತ್ತಿರುವೆ. ನಿನಗೂ ಹಾಗೆಯೇ ಅಲ್ಲವೆ? ಈ ಅನಿರೀಕ್ಷಿತ ಸುಖವನ್ನು ಕೊಟ್ಟು ನನ್ನ ಹೊಸ ಬಾಳಿನ ನಾಂದಿಯನ್ನಿಟ್ಟ ಮನೋರಮೆ ದೇವತಾ ಮನುಷ್ಯನೆಂದು ನಾನು ತಿಳಿಯುವೆ. ನಮ್ಮಿಬ್ಬರ ಹೃದಯ ಮಂದಿರದಲ್ಲಿ ಆ ದೇವತೆ ಚಿರಸ್ಥಾಯಿಯಾಗಿ ನಿಂತಿದ್ದಾಳೆ.

ಹೊಸ ಬಾಳು! ಎಂತಹ ಸುಖದ ಕಲ್ಪನೆಯಿದು ತಾರಾ! ಹೀಗಾಗಬಹುದೆಂದು ನಾನೆಂದೂ ನಿರೀಕ್ಷಿಸಿರಲಿಲ್ಲ. ಜೀವನವೊಂದು ಕಹಿ ಜೇನೆಂದು ತಿಳಿದಿದ್ದೆ. ಜೀವನದ ಕಹಿಯನ್ನು ನುಂಗಿದಾಗ ಅದರಲ್ಲಿ ಜೇನು ಸವಿ ಸಿಗುವದೆಂಬು ಈಗ ನಿಚ್ಚಳವಾಗಿದೆ. ಹೊಸ ಬಾಳಿನ ಜೇನು ಈ ಸವಿಯನ್ನು ಹೆಚ್ಚಿಸಲಿ. ಈ ಹೊಸ ಬಾಳು ನಮಗಷ್ಟೇ ಮೀಸಲಾಗಬಾರದು ತಾರಾ. ನಮ್ಮ ಬಾಳಿಗೆ ಬೆಳಕಿತ್ತವರ ಬಾಳು ಕೂಡ ಹೊಸ-ಹೊಸದಾಗಿ ಮೂಡಬೇಕು. ಅದಕ್ಕಾಗಿ ಪ್ರಯತ್ನಿಸುವದು ನಮ್ಮ ಕರ್ತವ್ಯ. ವೆಂಕಟೇಶನನ್ನು ಇದ್ದಲ್ಲಿಂದ ಹುಡುಕಿ ಅವನಿಗೂ ಹೊಸ ಬಾಳಿನ ದೀಕ್ಷೆ ಕೊಡಲು ನಾನು ಬದ್ಧನಾಗಿದ್ದೇನೆಂದು ಮನೋರಮೆಗೆ ಹೇಳು. ಸೋಮವಾರ ಸಂಜೆ ನಮ್ಮೆಲ್ಲರಿಗೂ ಶುಭಪ್ರಸಂಗವಾಗಲಿ.

ನಿನ್ನ ಪ್ರೀತಿಯ
**ವಿಶ್ವಾಸ**

ತಾರಾ ಪತ್ರವನ್ನು ತಡೆ, ತಡೆದು ಓದಿದಳು. ಒಂದೆರಡು ಸಲ ಅವಳು ಕಣ್ಣೀರನ್ನು ಕೊಡವಿಕೊಂಡು ಓದನ್ನು ಮುಂದುವರಿಸಬೇಕಾಯಿತು. ಕೊನೆಯ ಅಂಕಿತವನ್ನು ಓದಿ ಮುಗಿಸಿದಾಗ ಎರಡು ದೊಡ್ಡ ಹನಿಗಳು ಆ ಅಂಕಿತವನ್ನು ತೋಯಿಸಿದವು.– "ನಾನು ಬಹಳ ತಪ್ಪು ಮಾಡಿದೆ. ಅಕ್ಷಮ್ಯ ಅಪರಾಧ ಮಾಡಿದೆ" ಎಂದು ಅವಳು ತುಟಿಗಳನ್ನಲುಗಾಡಿಸಿದಾಗ ಆ ಮಾತುಗಳು ಪಶ್ಚಾತ್ತಾಪ ದಗ್ಧ ಮನಸ್ಸಿನ ಪ್ರತೀಕವಾಗಿ ಕಣ್ಣಾಲಿಗಳನ್ನು ತುಂಬಿಕೊಂಡವು. ಜೀವನವೇ ಎದ್ದು ಅವಳ ಕೆನ್ನೆಗೆ ಹೊಡೆದಂತೆ ಭಾಸವಾಯಿತು. ಅವಳು ಗಡಬಡಿಸಿದಳು–

"ಜಗತ್ತಿನಲ್ಲಿ ನೀವೊಬ್ಬರೇ ಗರತಿ ಗಂಗವ್ವನೆಂದು ತಿಳಿದಿದ್ದೀರಿ. ನನ್ನ ಒಡತಿಯ ಗುಣಗಳನ್ನು ಕಂಡುಕೊಳ್ಳುವ ಕಾಲವೂ ಬರುತ್ತದೆ....ಪಶ್ಚಾತ್ತಾಪದಿಂದ ಅವರ ಕಾಲು ಹಿಡಿಯುವ ಪ್ರಸಂಗವೂ ಬರುತ್ತದೆ." ನೀಲವ್ವನ ಆ ಮಾತುಗಳು ತಾರಾನ ಕಿವಿಯಲ್ಲಿ ಗುಡುಗಾಡಿದವು.

"ನಿನ್ನ ಮಾತೇ ನಿಜ ನೀಲವ್ವ. ನಾನು ತಪ್ಪು ಮಾಡಿದೆ. ಅದಕ್ಕಾಗಿ...." ತಾರಾ ಮೇಲಕ್ಕೆದ್ದು ಕೋಲ ಮೇಲೆ ಒಣ ಹಾಕಿದ ವಸ್ತ್ರಗಳನ್ನು ಸೆಳೆದುಕೊಂಡು ಮಡಿಕೆ ಹಾಕಿ, ಇದ್ದ ಬಿದ್ದ ಸಾಮಾನುಗಳನ್ನೆಲ್ಲ ಒಂದುಗೂಡಿಸಿ ಗಂಟು ಕಟ್ಟಿದಳು.

"ತಾರಾ, ನಿನ್ನ ಅರಿವೆಗಳನ್ನು ತೆಗೆದುಕೋ ನಾವೀಗಲೇ ಮನೂಮಾಮಿಯ ಮನೆಗೆ ಹೋಗಬೇಕು." ಅವಳು ಆ ರಾತ್ರಿಯಲ್ಲಿಯೇ ಮಕ್ಕಳನ್ನು ಕರೆದುಕೊಂಡು ನೀಲವ್ವನ ಮನೆಯಿಂದ ಹೊರಬಿದ್ದಳು. ಕಿರಣನಿಗೆ ತಾಯಿಯ ಈ ಅನಿರೀಕ್ಷಿತ ಆಚರಣೆ ವಿಚಿತ್ರವಾಗಿ ಕಂಡರೂ ಮನೂಮಾಮಿಯನ್ನು ನೋಡುವ ಸಂತೋಷದಲ್ಲಿ ಅವನ ಹಿಗ್ಗು ಹಿಡಿಸದಾಯಿತು. ಅವನು ದಾರಿಗುಂಟ ಲುಟು ಲುಟು ಹೆಜ್ಜೆ ಹಾಕುತ್ತಲಿದ್ದ. ತಲೆಯ ಮೇಲಿನ ಗಂಟನ್ನು ಸಾವರಿಸುತ್ತ ತಾರಾ– "ಕಿರಣ, ನೀನು ಮನೂಮಾಮಿಯ ಕಾಲು ಹಿಡಿಯಬೇಕು."

"ಅವಳ ಕಾಲು ನಾನೇಕೆ ಹಿಡಿಯಬೇಕು? ನಾನು ಯಾವ ತಪ್ಪೂ ಮಾಡಲಿಲ್ಲ ಅವ್ವ. ಬೇಕಾದರೆ ನೀನೇ ಅವಳ ಕಾಲು ಹಿಡಿ." ಎಂದು ಕಿರಣ ತುಂಟನಂತೆ ನಕ್ಕ. ತಾರಾ ಮಗನ ಮೊಗವನ್ನು ಅರ್ಥಪೂರ್ಣವಾಗಿ ನೋಡುತ್ತ ಹೆಜ್ಜೆ ಹಾಕುತ್ತಿದ್ದಳು. ತಾಯಿ ಮಕ್ಕಳು ಹೀಗೆ ಮನೋರಮೆಯ ಮನೆಗೆ ಅಭಿಮುಖವಾಗಿ ಸಾಗುತ್ತಿರುವಾಗ–

ಅತ್ತ ಮನೋರಮೆಯ ಮನೆಯಲ್ಲಿ ನೀಲವ್ವ ಹಣ್ಣಿನ ರಸವನ್ನು ಗ್ಲಾಸಿನಲ್ಲಿ ಹಾಕಿ ಒಡತಿಗೆ ಕುಡಿಯಲು ಒತ್ತಾಯ ಮಾಡುತ್ತಿದ್ದಳು.– "ಈ ಹಣ್ಣಿನ ರಸದಿಂದ ನನಗೇನಾಗಬೇಕಾಗಿದೆ ನೀಲವ್ವ? ಸುಮ್ಮನೆ ಇಡು ತಾಯಿ."

"ಹಾಗೆಂದರೆ ಹೇಗೆ ತಾಯಿ? ಇದೀಗ ಜ್ವರ ಆರಿವೆ. ಈ ಹಣ್ಣಿನ ರಸ ನಿಮಗೆ ಸಮಾಧಾನ ಮಾಡುವದು. ಬೇಗ ಕುಡಿಯಿರಿ."

"ಈ ಹಣ್ಣಿನ ರಸದಿಂದ ನನಗೆ ಸಮಾಧಾನವಾಗುತ್ತಿದ್ದರೆ ನಾನು ನೂರು ಹಣ್ಣುಗಳ ರಸ ಕುಡಿಯುತ್ತಿದ್ದೆ. ತಂದೆಯವರಿಂದ ಯಾವ ಸಮಾಚಾರವೂ ಬರಲಿಲ್ಲವೆ ನೀಲವ್ವ?"

"ನಿನ್ನೆಯೇ ಮುಂಬಯಿಗೆ ತಲುಪಿದ್ದಾರೆ. ಇಂದೇ ಹೇಗೆ ಪತ್ರ ಬರೆಯಬೇಕು ಹೇಳಿರಿ? ಸಾಹುಕಾರರ ಶೋಧನೆಯಾದರೂ ಆಗಬೇಡವೆ?"

"ಅವರು ಸಿಗಬಹುದಷ್ಟೇ ನೀಲವ್ವ?"

"ಒಂದೆರಡು ದಿನಗಳಲ್ಲಿ ನಿಮ್ಮ ತಂದೆ ಕರೆದುಕೊಂಡೇ ಬರುತ್ತಾರೆ ತಾಯಿ."

"ನಿನ್ನ ಮಾತು ಸತ್ಯವಾಗಲಿ ನೀಲವ್ವ" ಎನ್ನುತ್ತ ಮನೋರಮೆ ದೀರ್ಘವಾದ ನಿಟ್ಟುಸಿರು ಬಿಟ್ಟಳು– "ನನ್ನನ್ನು ಕಾಣದಿರುವಂತಹ ತಪ್ಪನ್ನು ನಾನೇನು ಮಾಡಿರುವೆನೆಂದು ತಾರಾ ಹಾಗೆ ಹೇಳಿದಳು ನೀಲವ್ವ?"

"ಅವರ ಮಾತನ್ನು ತೆಗೆದುಕೊಂಡು ಮಾಡುವದೇನು ತಾಯಿ. ಅವರೊಂದು ವಿಚಿತ್ರ ಸ್ವಭಾವದ ಪ್ರಾಣಿ."

"ನನ್ನಿಂದ ಯಾವ ಅನ್ಯಾಯವೂ ಆಗಿಲ್ಲವಲ್ಲ ನೀಲವ್ವ?"

"ಈ ಮಾತು ಈಗಲೇ ಸಿದ್ಧವಾಗುತ್ತದೆ ತಾಯಿ. ಸೋಮನಾಗ ವೇನು ದೂರವಿಲ್ಲ."

"ವಿಶ್ವಾಸರಾಯರು ಬಂದರೆ ನನಗೊಂದು ದೊಡ್ಡ ಧೈರ್ಯ ನೀಲವ್ವ. ಅವರು ಬಂದು ಸುಮ್ಮನಿರಲಾರರು. ಅವರ ಹೃದಯದನ್ನು ನಾನು ತುಂಬಾ ಬಲ್ಲೆ. ಅವರ ಪುಣ್ಯದಿಂದಲಾದರೂ ನನ್ನವರು...."

"ಮನೂಮಾಮಿ!" ಹೊರಗೆ ಕಿರಣನ ಧ್ವನಿಯಾಯಿತು. ಅವನು ನೆಗೆಯುತ್ತ ಒಳಗೆ ಬಂದ. ಮನೋರಮೆಯ ಸೊರಗಿದ ದೇಹವನ್ನು ಕಂಡಾಗ ಅವನೊಮ್ಮೆಲೇ ತಡೆದು ನಿಂತು ನೀಲವ್ವನನ್ನು ನೋಡಿ–

'ಅವ್ವನೂ ಬಂದಿದ್ದಾಳೆ. ಅವಳ ಗಂಟು ಬಹಳ ಭಾರವಾಗಿದೆ. ಇಳಿಸಿಕೋ ಹೋಗು" ಎಂದು ಹೇಳಿದ.

ತಾರಾ ಒಳಗೆ ಬಂದು ಮನೋರಮೆಯ ಅವಸ್ಥೆಯನ್ನು ಕಣ್ಣಾರೆ ಕಂಡಳು. ಅವಳ ಕರುಳು ಹಿಂಡಿ ಹೋದವು. ಗಂಟನ್ನು ಅಲ್ಲಿಯೇ ಚಲ್ಲಿ ಭರದಿಂದ ಬಂದು ಮನೋರಮೆಯ ಕಾಲುಗಳ ಮೇಲೆ ಹಣೆಯಿಟ್ಟು ಬಿಕ್ಕಳಿಸಿದಳು. ಮನೋರಮೆಯ ಪಾದಗಳು ಅವಳ ಕಣ್ಣೀರಿನಿಂದ ತೊಯ್ದವು.- "ನೀನು ನನ್ನನ್ನು ಕ್ಷಮಿಸಬೇಕು ಮನ್ನಕ್ಕ. ನಾನು ತಪ್ಪು ಮಾಡಿದೆ....ಅನ್ಯಾಯ ಮಾಡಿದೆ....ನೀನು ಕ್ಷಮಿಸಬೇಕು...." ತಾರಾ ದುಕ್ಕಿಸಿ ದುಕ್ಕಿಸಿ ಅಳುತ್ತಿದ್ದಳು. ಮನೋರಮೆಯ ಕೈ ಅವಳ ಬೆನ್ನ ಮೇಲೆ ಆಡುತ್ತಿತ್ತು. ಅವಳ ಕಣ್ಣೊಳಗಿಂದಲೂ ನೀರು ಒಂದೇ ಸವನೆ ಸುರಿಯುತ್ತಿತ್ತು.- "ಇದೆಲ್ಲ ಆ ನೀಚ ಜೀವಣ್ಣನ ಕೆಲಸ ಮನ್ನಕ್ಕ. ನನ್ನ ಹೃದಯದಲ್ಲಿ ಹುಳಿ ಹಿಂಡಿದ ಪಾಪಿಯೇ ಅವನು. ಈಗೆಲ್ಲವೂ ನನಗೆ ಸ್ಪಷ್ಟವಾಗಿದೆ. ನಾನು ಅವನನ್ನು ನಂಬಬಾರದಿತ್ತು; ನಂಬಿದೆ.. ನೀನು ಕ್ಷಮಿಸಬೇಕು ಮನ್ನಕ್ಕ."

ಮನೋರಮೆ ತಾರಾನನ್ನು ಎಬ್ಬಿಸಿ ಕಣ್ಣೊರಸಿಕೊಂಡು, ಬರುತ್ತಿರುವ ಉದ್ವೇಗವನ್ನು ಹತ್ತಿಕ್ಕಿಕೊಂಡು- "ಆಗಿ ಹೋದ ಮಾತಿಗೆ ಚಿಂತಿಸಿ ಫಲವಿಲ್ಲ ತಾರಕ್ಕ. ಈ ತೊಂದರೆಯನ್ನು ಕೊಟ್ಟ ನನ್ನನ್ನು ನೀನೇ ಕ್ಷಮಿಸಬೇಕು."

"ಮನ್ನಕ್ಕ, ನೀನು ದೇವತೆ ತಾಯಿ. ನಿನ್ನ ಸಂಕಟವೇ ನನ್ನ ಸಂಕಟ. ನನಗೆಲ್ಲವೂ ತಿಳಿದಿದೆ. ಅವರ ಪತ್ರ ನನ್ನ ಕಣ್ಣು ತೆರೆಯಿಸಿತು."

"ವಿಶ್ವಾಸರಾಯರ ಪತ್ರ ಬಂದಿದೆಯೆ?"

"ಅದರಲ್ಲಿ ನಿನಗೂ ಸಂದೇಶ ಕೊಟ್ಟಿದ್ದಾರೆ. ಓದಿ ತೋರಿಸಲಾ ಮನ್ನಕ್ಕ?" ತಾರಾ ಅವಳ ಉತ್ತರಕ್ಕೂ ಕಾಯದೆ ಕಾಗದವನ್ನು ಓದ ತಾರಂಭಿಸಿದಳು. ಓದುತ್ತಿರುವಂತೆ ಅವಳ ಕಣ್ಣು ಹನಿಗೂಡುತ್ತಿದ್ದವು.

ಪ್ರಯಾಸದಿಂದೊಮ್ಮೆ ಎಲ್ಲವನ್ನು ಓದಿ ಮುಗಿಸಿದಳು. ಮನೋರಮೆ ಎಲ್ಲವನ್ನೂ ಶಾಂತ ಚಿತ್ತದಿಂದ ಕೇಳಿಕೊಂಡು ಗದ್ಗದಿತಳಾಗಿ ಹೇಳಿದಳು.– "ಕೊನೆಯ ವಾಕ್ಯವನ್ನು ಇನ್ನೊಮ್ಮೆ ಓದು ತಾರಕ್ಕ."

ತಾರಾ ಗಟ್ಟಿಯಾಗಿ ಓದಿದಳು.– "ವೆಂಕಟೇಶನನ್ನು ಇದ್ದಲ್ಲಿಂದ ಹುಡುಕಿ ಅವನಿಗೂ ಹೊಸಬಾಳಿನ ದೀಕ್ಷೆ ಕೊಡಲು ನಾನು ಬದ್ಧನಾಗಿ ರುವೆನೆಂದು ಮನೋರಮೆಗೆ ಹೇಳು!! ಮನೋರಮೆಯ ತುಟಿಗಳು ಅಲುಗಿದವು.– "ನನಗೆ ಹೊಸ ಬಾಳು ಬಂದೀತೇ ತಾರಕ್ಕ?"

"ಹೊಸ ಬಾಳಿನ ಆರಾಧ್ಯ ದೇವತೆಯೇ ನೀನು ಮನ್ನಕ್ಕ."

ಇದೆಲ್ಲವನ್ನೂ ನೋಡುತ್ತಲಿದ್ದ ನೀಲವ್ವ ಕಿರಣನಿಗೆ– "ಮನೂ ಮಾಮಿಗೆ ಈ ಹಣ್ಣಿನ ರಸ ಕುಡಿಸು ಕಿರಣ" ಎಂದು ಕಣ್ಣೊರಸಿಕೊಂಡಳು.

ಕಿರಣ ಕೈಗಿತ್ತ ರಸವನ್ನು ಮನೋರಮೆ ಗಟಗಟನೆ ಕುಡಿದು ಅವನನ್ನು ಬರಸೆಳೆದು ಅಪ್ಪಿಕೊಂಡಳು.



